


VOLUME X-Part I]  [ಸಂಚಿಕೆ ೧೦ ಭಾಗ ೧

॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಸರ್ವ ಮೂಲಗ್ರಂಥಗಳ ಮಾಲಿಕೆಯ ದಶಮ ಗುಚ್ಛದಲ್ಲಿ ಪ್ರಥಮ ಭಾಗ

೩೭ನೇಯ ಗ್ರಂಥವಾದ

# ಶ್ರೀಮನ್ನ್ಯಾಯ ವಿವರಣ

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ,

ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ನಿವೃತ್ತ ಪ್ರಧಾನ ಪಂಡಿತ

ಉಡುಪಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರೊಫೆಸರ್,

ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

ಕನ್ನಡ ಟೀಕಾ ಭಾಷಾಂತರ ಸಹಿತ.

ಶ್ರೀ ಬಿ. ಭೀಮರಾವ್, ಪ್ಲೀಡರ್, ದಾವಣಗೆರೆ—

ಇವರ ಕನ್ನಡ ಮುನ್ನುಡಿ.



ಪ್ರಕಾಶಕರು:

1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ

ಶ್ರೀ ಮಧ್ವಮುನಿ ಸೇವಾ ಸಂಘ, ಉಡುಪಿ.



SRI MADHWAMUNI SEVA SANGHA (REGD.) UDIPI, S. K.



ಉಡುಪಿ ಮೆಜೆಸ್ಟಿಕ್ ಪ್ರೆಸ್ಸಿನಲ್ಲಿ ಮುದ್ರಿತವಾದುದು.

1964 ಬೆಲೆ: ರೂಪಾಯಿ ಐದು.

॥ ಶ್ರೀಃ ॥

# ಮುನ್ನುಡಿ

ಬರೆದವರು:--ಶ್ರೀ ಬಿ. ಭೀಮ ರಾವ್, ವಕೀಲ್, ದಾವಣಗೆರೆ.

ನ ಮಾಧವಸಮೋ ದೇವಃ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ವಾಯ್ವಂಶಸಂಭೂತರಾದ ತತ್ವವಾದಾಚಾರ್ಯರು ಸಜ್ಜನರ ಉದ್ಧಾರಕ್ಕಾಗಿ, ಲಕ್ಷ್ಮೀಪತಿಯ ಆಜ್ಞಾನುಸಾರವಾಗಿ ಶ್ರೀಬಾದರಾಯಣರ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿದರು. 'ಅನಂತೋಽರ್ಥಃ ಪ್ರಕಟಿತಸ್ತ್ವಯಾಽಸೌ ಭಾಷ್ಯಸಂಗ್ರಹೇ। ಅಹೋ ಅತ್ಯಪರಿಜ್ಞಾತ್ರೈ ಕೃಷ್ಣೇನೇವಾನಘಾಂಶತಃ' ಎಂಬ ಪಂಡಿತಾಚಾರ್ಯರ ಉಕ್ತಿಯಂತೆ, ಅತ್ಯಜ್ಞಾನ ಸಾಧಕವಾದ ಅನಂತಾರ್ಥಗಳನ್ನೊಳಗೊಂಡು, ನಿತ್ಯ ಪಾರಾಯಣಕ್ಕೆ ಅನುಕೂಲವಾದ 'ಅಣುಭಾಷ್ಯ'ವೆಂಬ ಭಾಷ್ಯ ಸಂಗ್ರಹರೂಪವಾದ ಚಿಕ್ಕ ಗ್ರಂಥವನ್ನೂ ರಚಿಸಿದರು. ಪಂಚಶತ ಪ್ರೌಢ ಶಿಷ್ಯರಿಂದ ಪ್ರಾರ್ಥಿತರಾಗಿ, '...ಯುಕ್ತ್ಯೋಘೋ ನೋ ಕುರುದ್ಧರಾಃ ಕುತೋ ಮಾಂದ್ಯಾತ್ತತೋ ಗ್ರಂಥಂ ವ್ಯಕ್ತತರ್ಕಾತ್ಮಿಕಂ ಕುರು । ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಮುದಾಂ।' ಸುಮಧ್ವ ವಿಜಯ ಎಂಬಲ್ಲಿ ಹೇಳಿದಂತೆ, ಅನುವ್ಯಾಖ್ಯಾನವೆಂಬ ಗ್ರಂಥವನ್ನು, ಪರವಾದಿಗಳ ನಿರಾಸದಲ್ಲಿ ದಕ್ಷತೆಯನ್ನೊದಗಿಸಲು, ರಚಿಸಿಕೊಟ್ಟರು. ಹೀಗೆ ಬ್ರಹ್ಮಸೂತ್ರಗಳ ಮೇಲೆ ಮೂರು ಗ್ರಂಥಗಳನ್ನು ರಚಿಸಿದ್ದರೂ, ಅದೇ ವಿಷಯದಲ್ಲಿ ನಾಲ್ಕನೆಯದಾದ 'ನ್ಯಾಯವಿವರಣ'ವೆಂಬ ಮತ್ತೊಂದು ಗ್ರಂಥವನ್ನೂ ರಚಿಸಿದ್ದಾರೆ. ಈ ನಾಲ್ಕನೇ ಗ್ರಂಥವನ್ನು ರಚಿಸುವ ಅವಶ್ಯಕತೆಯನ್ನೂ, ಅದರ ಅಧ್ಯಯನಾದಿಗಳಿಂದ ಲಭಿಸುವ ಮಹಾ ಪ್ರಯೋಜನವನ್ನೂ ಸೂಚಿಸುವುದು ಮಾತ್ರ ಈ ಮುನ್ನುಡಿಯ ಉದ್ದೇಶವಾಗಿದೆ. ಇದರಿಂದ ಓದುಗರಿಗೆ, ಗ್ರಂಥದಲ್ಲಿ ಆದರವೂ, ಗುರುಮುಖದಿಂದ ತಿಳಿಯುವ ವಿಶೇಷಾಸಕ್ತಿಯೂ ಉಂಟಾಗುವುದೆಂದು ಭಾವಿಸುತ್ತೇನೆ.

ಸಚ್ಛಾಸ್ತ್ರಗಳ ಶ್ರವಣ ಮನನಗಳಿಂದ ಸಾಧಿತವಾದ ಭಗವನ್ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹರೂಪ ಭಕ್ತಿಯಿಂದಲೇ ಧ್ಯಾನೋಪಾಸನೆಯು ಸಾಧ್ಯವೆಂದೂ, ಅದರಿಂದಲೇ ಮೋಕ್ಷಕ್ಕೆ ಸಾಕ್ಷಾತ್ಸಾಧನವಾದ ಬ್ರಹ್ಮದರ್ಶನವು ಲಭಿಸುವುದೆಂದೂ ವೇದಾದಿ ಪ್ರಮಾಣಗಳಿಂದ ಸಿದ್ಧವಾಗುತ್ತದೆ. 'ಋಷಯಃ ಅಂತಃ ಪ್ರಕಾಶಾಃ, ಅಂತರ್ದೃಷ್ಟಯಃ ಬಹಿರ್ದೃಷ್ಟಯಃ, ಸರ್ವದೃಷ್ಟಯಃ ಉಪಾಸಾತ್ರೈವಿಧ್ಯಾತ್, ಅಗ್ನೌ ತ್ರಿರೂಪವತಾಂ'ಎಂಬ ವೇದದಲ್ಲಾದ ಶಾಸ್ತ್ರವಾಕ್ಯಗಳ ಪರ್ಯಾಲೋಚನೆಯಿಂದ ನಾನಾವಿಧ ಉಪಾಸನಾಧಿಕಾರಿಗಳಿರುವರೆಂದೂ, ಅವರಿಗೆ ದೊರೆಯುವ ಬ್ರಹ್ಮದರ್ಶನವೂ ತಾರತಮ್ಯಾಂತರ ಭೇದದಿಂದ ವಿವಿಧವಾಗಿರುವುದೆಂದೂ ತಿಳಿಯಬರುತ್ತದೆ ಹೀಗೆ ಬ್ರಹ್ಮದರ್ಶನವು ವಿವಿಧವಾಗಿದ್ದರೂ, ಸ್ವಬಿಂಬಭೂತ ಪರಮಾತ್ಮನ ಸಂದರ್ಶನದಿಂದಲೇ ಮುಕ್ತಿ ದೊರಕುವುದೆಂದು 'ಸಮಾನಾಮಧಿಕರಣ'ದಲ್ಲಿ ನಿರ್ಣಯಿಸಲ್ಪಟ್ಟಿದೆ. ಎಲ್ಲಾ ಭಗವದ್ಭಕ್ತರಿಗೆ ಮುಕ್ತಿಪ್ರಾಪ್ತಿಕ್ಕೆ ಸಾಮಾನ್ಯವಿದ್ದರೂ ಸಾರೂಪ್ಯದರ್ಶನದಿಂದ ಮೋಕ್ಷಪ್ರಾಪ್ತಿಯಿಲ್ಲವೆಂದೂ ಸ್ವಬಿಂಬಾಪರೋಕ್ಷದಿಂದಲೇ ಸಾಧ್ಯವೆಂದೂ ನಿಶ್ಚಿತವಾಗುತ್ತದೆ. 'ಸಮೋಽಪಿ ಭಗವಾನ್ ಸ್ವಬಿಂಬ

ದರ್ಶನೇನೈವೈನಂ ಜೀವಂ ಮೋಚಯತಿ' ಎಂದು ನ್ಯಾಯವಿವರಣದಲ್ಲಿಯೂ, 'ಯೇಷಾಂ ಬಹಿರುಪಾಸನೇನ ಮೋಕ್ಷಃ ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ ಕಾರ್ಯಮೇವ' ಎಂದು ಬೃಹದ್ಭಾಷ್ಯದಲ್ಲಿಯೂ ಶ್ರೀಮದಾಚಾರ್ಯರು ಬಿಂಬೋಪಾಸನೆಯು ಸರ್ವಮುಮುಕ್ಷುಸಾಮಾನ್ಯವೆಂದು ಹೇಳಿರುವರು. ಬೃಹದ್ಭಾಷ್ಯದ 'ಕಿಂಚಿತ್' ಶಬ್ದದಿಂದ, ಬಹಿರುಪಾಸನೆ ಮತ್ತು ಬಹಿರ್ದರ್ಶನಗಳಿಗೆ ಅಧಿಕಾರಿಗಳಾದರೂ ಸಹ, ಹೃದ್ಯುಪಾಸನೆಯಿಂದ ಬಿಂಬದರ್ಶನವನ್ನು ಪಡೆಯುವರೆಂದೂ ಅವರ ಬಿಂಬೋಪಾಸನೆಯು ಅಲ್ಪಮಾತ್ರವಾಗಿರುವುದೆಂದೂ ಸೂಚಿಸಿರುವರು. ಅಗ್ನ್ಯಾದಿಗಳಲ್ಲಿ ಪ್ರಚುರವಾದ ಉಪಾಸನೆಯುಳ್ಳವರೆಂಬುದು 'ಬಹಿರುಪಾಸನೇನ ಮೋಕ್ಷಃ' ಎಂಬುದರ ತಾತ್ಪರ್ಯವೆಂದು, ಇದರಿಂದ ತಿಳಿದು ಬರುತ್ತದೆ. ಶ್ರೀಮಜ್ಜಯತೀರ್ಥರೂ ಸಹ 'ಸರ್ವಾಧಿಕಾರಿಸಾಧಾರಣ್ಯೇನ ಬಿಂಬಮೇವ ಅವಶ್ಯಮುಪಾಸ್ಯಃ' ಎಂದು ತತ್ವಪ್ರಕಾಶಿಕೆಯಲ್ಲಿ ಹೇಳಿರುವರು.

ಹೃದಯಸ್ಥನಾದ ಶ್ರೀಹರಿಯ ಸಾಕ್ಷಾತ್ಕಾರಕ್ಕೆ (ಅಪರೋಕ್ಷಕ್ಕೆ) ಅವಶ್ಯಕವಾದ ಶ್ರೇಷ್ಠ ಭಕ್ತಿಯು ಬ್ರಹ್ಮಮೀಮಾಂಸಾ ಶಾಸ್ತ್ರ ನಿರ್ದೇಶ ಭಗವನ್ಮಹಿಮೆಗಳ ನಿಸ್ಸಂಶಯ ಜ್ಞಾನದಿಂದ ಮಾತ್ರ ಲಭಿಸುತ್ತದೆ. ಈ ವಿಧ ಜ್ಞಾನ ನಿಶ್ಚಯವು ಸೂತ್ರ ಪ್ರದೇಶ ನಿರ್ಣಯಗಳ ಸಂತತ ಅನುಸಂಧಾನದಿಂದಲೇ ಸಾಧ್ಯ. ಆ ನಿರ್ಣಯಗಳ ಅನುಸಂಧಾನವಾದರೋ, ಸಂಶಯ ವಿಪರ್ಯಾಸಗಳ (ಪೂರ್ವಪಕ್ಷಗಳ) ಪರಿಹಾರ ಪ್ರಕಾರ ವಿಶಿಷ್ಟವಾಗಿದ್ದರೆ ಮಾತ್ರ ಸ್ಥಿರವಾಗಿ ನಿಲ್ಲುವುದು. ಯದ್ಯಪಿ, ಶ್ರೀಮದಾಚಾರ್ಯರು ತಮ್ಮ ಅನುವ್ಯಾಖ್ಯಾನ ಗ್ರಂಥದಲ್ಲಿ ಪೂರ್ವಪಕ್ಷ ಸಿದ್ಧಾಂತಗಳಿಗೆ ಆಧಾರ ಭೂತವಾಗಿರುವ ನ್ಯಾಯ (ಯುಕ್ತಿ)ಗಳನ್ನು ಸುಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆದರೂ ಆ ಗ್ರಂಥವು ಪರವಾದಿಗಳ ನಿರಾಕರಣೆಗೆ ಅವಶ್ಯಕವಾದ ಅನೇಕ ವಿಷಯಗಳನ್ನೊಳಗೊಂಡು ಅತಿ ವಿಸ್ತಾರವಾಗಿದೆ. ಸಜ್ಜನರಿಗೆ ಅತಿ ಹೇಯವಾದ, ಆಗ್ಗೆ ಪ್ರಚಲಿತವಿದ್ದ 'ಮಾಯಾವಾದ' ಖಂಡನೆಯು ಅಲ್ಲಿ ವಿಶೇಷ ಪ್ರಸಕ್ತವಾಗಿದೆ. ಅಂತೆಯೇ ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ 'ಅನುವ್ಯಾಖ್ಯಾನ'ವನ್ನು ವರ್ಣಿಸುವಾಗ 'ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಂ' ಎಂಬ ವಿಶೇಷಣಗಳನ್ನು ಉಪಯೋಗಿಸಿರುವರು. ಏವಂಚ, ಶ್ರವಣವು ಭಗವನ್ಮಹಿಮೆಗಳ ಜ್ಞಾನವನ್ನೂ; ಮನನವು, ತತ್ಸಂಬಂಧವಾದ ಸಂಶಯ ವಿಪರ್ಯಾಸಗಳ ಪರಿಹಾರದಿಂದ ಜ್ಞಾನದಾರ್ಢ್ಯವನ್ನೂ ದೊರಕಿಸುತ್ತವೆ. ಈ ಉಭಯ ವಿಧ ಉಪಾಸನೆಯಿಂದ ಅಂತಃಕರಣವು ಪರಿಶುದ್ಧವಾಗಿ ಧ್ಯಾನಕ್ಕೆ ಸಿದ್ಧವಾಗುತ್ತದೆ. ಧ್ಯಾನೋಪಾಸನೆಯಲ್ಲಿ ತೊಡಗಿದ ಅಧಿಕಾರಿಯ ನಿರ್ಮಲಾಂತಃಕರಣವು, ಪ್ರಾಣ—ಅಪಾನ—ವ್ಯಾನ—ಉದಾನ—ಸಮಾನಗಳೆಂಬ ವಾಯುದೇವರ ಪಂಚರೂಪಗಳ ವಿಶೇಷಾದೇಶ ಯುಕ್ತವಾದಾಗ ಶ್ರೀಹರಿಯನ್ನು ಸಂದರ್ಶಿಸುವ ಸಾಮರ್ಥ್ಯವನ್ನು ಪಡೆಯುತ್ತದೆ. ಹರಿಧ್ಯಾನ ನಿರತನಾದ ಭಕ್ತನು ಸಮಾಧಿಯಲ್ಲಿ ಹರಿದರ್ಶನ ಭಾಗ್ಯವನ್ನು ಹೊಂದಿ ಅಲೌಕಿಕವಾದ ಆನಂದವನ್ನನುಭವಿಸುತ್ತಾನೆ.

ಹೀಗೆ ಧ್ಯಾನಸಿದ್ಧಿಗೆ ಜ್ಞಾನನಿಶ್ಚಯವೂ, ಜ್ಞಾನನಿಶ್ಚಯಕ್ಕೆ ಸಂಶಯಾದಿಗಳ ನಿರಾಕರಣೆಗೆ ಉಪಯುಕ್ತಗಳಾದ ಸದ್ಯುಕ್ತಿಗಳ ಸಂತತ ಅನುಸಂಧಾನವೂ ಅವಶ್ಯಕವೆಂದು ನಿಸ್ಸಂಶಯವಾಗಿ ಏರ್ಪಡುತ್ತದೆ. ಆದ್ದರಿಂದ, ಪೂರ್ವಪಕ್ಷ-ಸಿದ್ಧಾಂತಗಳ ಯುಕ್ತಿ—ಪ್ರತಿಯುಕ್ತಿಗಳ ನಿರಂತರ ಸ್ಮರಣೆಗೆ ಅವಶ್ಯಕವಾದ ಸಾಧನ ಸಾಮಗ್ರಿಯನ್ನು ಏಕತ್ರ ಸಂಗ್ರಹಿಸಿ, ಅಧಿಕಾರಿಗಳಿಗೆ ಒದಗಿಸಿ ಕೊಡುವುದೇ 'ನ್ಯಾಯವಿವರಣ' ಗ್ರಂಥರಚನೆಯ ಮುಖ್ಯೋದ್ದೇಶವೆಂದು ತಿಳಿಯಬಹುದಾಗಿದೆ. ಗ್ರಂಥಾರಂಭದಲ್ಲಿ ಕಂಡುಬರುವ ಪ್ರತಿಜ್ಞಾವಾಕ್ಯದಿಂದಲೂ ಈ ಉದ್ದೇಶವು ಸ್ಪಷ್ಟಗೊಳ್ಳುತ್ತದೆ. 'ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದಾರ್ಥತತ್ಪರೇ । ಕೃಷ್ಣಸ್ಯ ಸೂತ್ರಾನುವ್ಯಾಖ್ಯಾ ಸನ್ನ್ಯಾಯವಿವೃತಿಂ ಸ್ಫುಟಂ । ಕರೋಮಿ ಮಂದಬುದ್ಧೀನಾಂ ಬುಧಾನಾಂ ಬೋಧಕಾರಿಣಾಂ ।' ಎಂದು, ಶ್ರೀಮದಾಚಾರ್ಯರು, ಮಂದಬುದ್ಧಿಗಳಿಗೂ

ಪಂಡಿತರಿಗೂ ಉಪಕಾರಕವಾದ ಈ ಗ್ರಂಥವು, ಭಾಷ್ಯ–ಅಣುಭಾಷ್ಯ–ಅನುವ್ಯಾಖ್ಯಾನಗಳಲ್ಲಿ ಅಡಕವಾದ ನ್ಯಾಯಗಳ ವಿವರಣ ರೂಪವಾದುದೆಂದು ಹೇಳಿರುವರು. ಗ್ರಂಥವನ್ನು ಉಪಸಂಹರಿಸುವಾಗಲೂ ಇದೇ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. 'ಇತ್ಯನಂತಮಹಾನ್ಯಾಯಮೀನಮಾಂಸಾಪಾರವಾರಿಧೇಃ । ಉತ್ತಾರಣಾಶಕ್ತ್ಯೈವ ವ್ಯಾಕುಲೀಭೂತಚೇತಸಾಂ । ಮಂದಾನಾಮುಪಕಾರಾಯ........... ತದ್ವಿಶೇಷಪರಿಜ್ಞಾನಪ್ರದೀಪ್ತಾರ್ಥಚೇತಸಾಂ । ವಿಶೇಷಗಾಧೇ ಮನಸಿ ನಿತರಾಂ ಬೋಧಕಾರಕಃ । ನ್ಯಾಯಸಂಗ್ರಹೋ ಮಯಾಕಾರಿ ಸಂಕ್ಷೇಪಾತ್ಪ್ರಮಿತಾಕ್ಷರೈಃ॥' ಎಂಬ ವಾಕ್ಯಗಳಿಂದ, 'ಅಸಂಖ್ಯಾತ ಮಹಾನ್ಯಾಯಗಳಿಂದ ಯುಕ್ತವಾದ ವಿಚಾರ ಶಾಸ್ತ್ರವೆಂಬ ಅಪಾರ ಸಾಗರವನ್ನು ದಾಟುವುದು ಅಶಕ್ಯವೆಂಬ ಭಾವನೆಯಿಂದ ವ್ಯಾಕುಲ ಚಿತ್ತರಾದ ಅಲ್ಪಜ್ಞರಾದ ಸುಜೀವಿಗಳಿಗೂ, ಸೂರ್ಯಸದೃಶವಾದ ಜ್ಞಾನಪ್ರಕಾಶವುಳ್ಳ ಗಾಢವಾದ ಆಲೋಚನಾ ಶಕ್ತಿಯುತರಾದ ಬಹುಜ್ಞರಿಗೂ ಯಥಾಯೋಗ್ಯವಾಗಿ ಉಪಕಾರಕವಾದ ಈ ನಾವೆಯನ್ನು ಸಂಕ್ಷೇಪವಾಗಿ ರಚಿಸಿರುವೆನು' ಎಂಬುದಾಗಿ ಅಪ್ಪಣೆ ಕೊಡಿಸಿರುವರು.

ಸೂತ್ರ ನಿರ್ಣಯಗಳ ನಿರಂತರ ಸ್ಮೃತಿಯ ಅವಶ್ಯಕತೆಯನ್ನು ನಿರ್ವಹಿಸುವುದಕ್ಕಾಗಿಯೇ ಶ್ರೀಮದ್ವಾದಿರಾಜ ಸ್ವಾಮಿಗಳವರು, ಓಂ ವಿಶಿಷ್ಟಾಧಿಕಾರಿಕ ಮೋಕ್ಷಫಲಕ ಜಿಜ್ಞಾಸಾಗೋಚರಾಯ ನಮಃ, ಓಂ ಜನ್ಮಾದ್ಯಷ್ಟಕರ್ತ್ರೇ ನಮಃ, ಓಂ ವೇದಾದಿಸಕಲ ಶಾಸ್ತ್ರಜನಿತ ನಿಖಿಲಜಗಜ್ಜನ್ಮಾದಿ ಕಾರಣತ್ವ ಪ್ರಮಾಗೋಚರಾಯ ನಮಃ ಇತ್ಯಾದಿಯಾಗಿ ಬ್ರಹ್ಮಸೂತ್ರಗಳ ಒಟ್ಟು ನಾಲ್ಕು ಅಧ್ಯಾಯಗಳಿಂದಾಗುವ ೨೨೩ ಅಧಿಕರಣಗಳ ನಿರ್ಣಯಗಳನ್ನು ಸಂಗ್ರಹಿಸಿ, ಸಂತತಾನುಸಂಧಾನಕ್ಕೆ ಉಪಯೋಗವಾಗುವ ಅಧಿಕರಣ ನಾಮಾವಳಿಯನ್ನು ರಚಿಸಿ ಅನುಗ್ರಹಿಸಿದ್ದಾರೆ.

ಪಂಡಿತ ಶ್ರೇಷ್ಠರಾದ ಶ್ರೀನಾರಾಯಣ ಶಾಸ್ತ್ರಿಗಳು ಗ್ರಂಥದಲ್ಲಿನ ಪ್ರತಿವಾಕ್ಯಕ್ಕೂ ಕನ್ನಡದಲ್ಲಿ ವಿಶೇಷ ವಿವರಣೆಯನ್ನಿತ್ತು, ಯಾವ ಪೂರ್ವಪಕ್ಷದ ಯಾವ ಯುಕ್ತಿಯನ್ನು, ಯಾವ ಸಿದ್ಧಾಂತ ಯುಕ್ತಿಯು ಹೇಗೆ ನಿರಾಕರಿಸುವುದೆಂಬುದನ್ನು ಅಮೋಘವಾಗಿ ನಿರೂಪಿಸಿದ್ದಾರೆ. ಮಧ್ವಮತಾನುಯಾಯಿಗಳು ಇವರಿಗೆ ಚಿರಋಣಿಗಳು. ಸಕಲ ಸಜ್ಜನರು ಈ ಗ್ರಂಥದ ಉಪಯೋಗವನ್ನು ತಪ್ಪದೇ ಪಡೆಯಲೆಂದು ಆಶಿಸುತ್ತೇನೆ.

'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ।'



॥ ಶ್ರೀ ॥

॥ ಓಂ ಶ್ರೀಃ ಓಂ ॥

# ಶ್ರೀಮನ್ನ್ಯಾಯವಿವರಣಂ

ದುರಂತದುರಿತಧ್ವಾಂತವಿಪಾಟನಪಟೀಯಸೇ ।
ಬಾದರಾಯಣಸಂಜ್ಞಾಯ ಪರಸ್ಮೈ ಬ್ರಹ್ಮಣೇ ನಮಃ ।
ಯದ್ಧಿತಂ ತವ ಭಕ್ತಾನಾಮಸ್ಮಾಕಂ ನೃಹರೇ ಹರೇ ।
ತದಾಶು ಕಾರ್ಯಂ ಕಾರ್ಯಜ್ಞ ಪ್ರಲಯಾರ್ಕಾಯುತಪ್ರಭ ॥
ನಮಾಮಿ ಶ್ರೀಮದಾನಂದತೀರ್ಥಾಚಾರ್ಯಂ ಪರಂ ಗುರುಂ ।
ಯಸ್ಯ ವಾಣೀಕೃಪಾಣೀಯಾಂ ನಿಕೃಂತತಿ ಭವಾಟವೀಂ ।
ಪ್ರಣಮ್ಯ ಚರಣಾಂಭೋಜೇ ಗುರೂಣಾಂ ತತ್ಕೃಪಾಬಲಾತ್ ।
ಸನ್ನ್ಯಾಯವಿವೃತಿವ್ಯಾಖ್ಯಾಂ ಕರಿಷ್ಯಾಮಿ ಯಥಾಮತಿ ॥
ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ।

ಮೂ ॥ ಚೇತನಾಚೇತನಜಗನ್ನಿಯಂತ್ರೇಽಶೇಷಸಂವಿದೇ ।
ನಮೋ ನಾರಾಯಣಾಯಾಜಶರ್ವಶಕ್ರಾದಿವಂದಿತ ॥ ೧ ॥

ಅ ॥ ಬ್ರಹ್ಮ ರುದ್ರ ಇಂದ್ರ ಮೊದಲಾದ ಸೂರ್ಯಾದಿ ದೇವತೆಗಳಿಂದ ನಮಸ್ಕಾರ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಶ್ರೀ ಪರಮಾತ್ಮನೇ ಚೇತನ ಅಚೇತನ ಎಲ್ಲಾ ಜಗತ್ತಿಗೆ ನಿಯಾಮಕನೂ, ಸೃಷ್ಟಿ ಕರ್ತನೂ, ಸಾರ್ವಜ್ಞ ಮೊದಲಾದ ಸರ್ವಗುಣಪರಿಪೂರ್ಣನೂ, ದೋಷ ವಿದೂರನೂ, ಲಕ್ಷ್ಮೀಪತಿಯೂ, ಆದ ನಾರಾಯಣನೆನಿಸಿಕೊಂಡ ನಿನಗೆ ನಮಸ್ಕಾರವು. ॥ ೧ ॥

ಮೂ ॥ ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದಾರ್ಥತತ್ಪರೇ ।
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಸ್ಫುಟಂ ॥ ೨ ॥
ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಂ ।
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಸ್ಸರಃ ॥ ೩ ॥

ಅ ॥ ನಾನು ಭಾಷ್ಯ ಅನುವ್ಯಾಖ್ಯಾನಗಳನ್ನು ಮಾಡಿದ್ದರೂ ಮಂದಬುದ್ಧಿಗಳಿಗೂ ಪಂಡಿತರಿಗೂ ಉಪಕಾರಕವಾದ, ವೇದಾರ್ಥಗಳಿಗೆ ಮುಖ್ಯಪಾಲಕರಾದ (ಅಂದರೆ ಸಮಸ್ತ ವೇದಗಳ ಮುಖ್ಯಾರ್ಥ ಭೂತರಾದ) ವೇದವ್ಯಾಸರು ಮಾಡಿದ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನಭೂತವಾದ ಅನುವ್ಯಾಖ್ಯಾನದಲ್ಲಿ ಹೇಳಿದ ಸೂತ್ರ ಪ್ರಯೋಜಕಗಳಾದ ಪೂರ್ವಪಕ್ಷ ಯುಕ್ತಿಗಳನ್ನು ಪ್ರತಿಪಾದಿಸುವ ವಾಕ್ಯಗಳೂ, ತತ್ತ್ವ ನಿರ್ಣಯ ಸಮರ್ಥಗಳಾದ ಸಿದ್ಧಾಂತ ಯುಕ್ತಿಗಳನ್ನು ಪ್ರತಿಪಾದಿಸುವ ವಾಕ್ಯಗಳೂ ಇವುಗಳ ವಿವರಣ ರೂಪವಾದ ಗ್ರಂಥವನ್ನು ಆ ಶ್ರೀ ಹರಿಯ ಪ್ರೀತಿಗಾಗಿಯೇ ಆ ಶ್ರೀ ಹರಿಯ ಅನುಗ್ರಹದಿಂದ ಮಾಡುತ್ತೇನೆ ॥ ೨ ॥ ೩ ॥

## ಜಿಜ್ಞಾಸಾಧಿಕರಣ ॥ ೧ ॥

**ಮೂ ॥ ಜೀವಸ್ಯಾತಿರಿಕ್ತೇಶ್ವರಾಭಾವಾತ್ತಸ್ಯ ಚ ಸ್ವಯಂ ಪ್ರಕಾಶತ್ವಾನ್ನ ಜಿಜ್ಞಾಸ್ಯತೇತಿ ಪ್ರಾಪ್ತೇ 'ಅಥಾತೋ ಬ್ರಹ್ಮಜಿಜ್ಞಾಸೇ'ತ್ಯಾಹ ॥ 'ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇ'ತಿ ಬ್ರಹ್ಮಶಬ್ದೇನ ಪೂರ್ಣಗುಣತ್ವೋಕ್ತೇರ್ನಾನುಭವಸಿದ್ಧಾಲ್ಪಗುಣಜೀವಾಭೇದಃ । 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ' ಇತಿ ಶ್ರುತೇರಿತಿ ॥ ೧ ॥**

ಅ ॥ ಶ್ರೀ ಹರಿಯು ವಿಚಾರ ವಿಷಯನೆಂದು ಅಭಿಮತನು. ಆದರೆ ಶ್ರೀ ಹರಿಯು ಜೀವರಿಂದ ಭಿನ್ನನಲ್ಲ. (ಏಕೆಂದರೆ ಪ್ರಮಾಣವಿಲ್ಲ. ಪ್ರತ್ಯಕ್ಷ ಅನುಮಾನಗಳು ಈಶ್ವರ ಗ್ರಾಹಕಗಳಲ್ಲ. ಆಗಮವು ಕಾರ್ಯಪರವು) (ಜೀವನೇ ವಿಚಾರವಿಷಯನಾಗಲಿ, ಎಂದರೆ) ಜೀವನು ಸ್ವಪ್ರಕಾಶನು, ಸ್ವಪ್ರಕಾಶ ಜ್ಞಾನಾಶ್ರಯನು, ಅಥವಾ ಮಾನಸ ಪ್ರತ್ಯಕ್ಷದಿಂದ ನಿಶ್ಚಿತನು. ಆದಕಾರಣ ಜೀವನು ವಿಚಾರ ವಿಷಯನಾಗುವುದಿಲ್ಲ. (ಏಕೆಂದರೆ ಸಂಶಯಗ್ರಸ್ತವಾದುದು ವಿಚಾರ ವಿಷಯವಾಗುವುದು. ನಿಶ್ಚಿತವಾದ ಅರ್ಥದಲ್ಲಿ ಸಂಶಯವು ಕೂಡಲಾರದು) ಎಂದು ಪೂರ್ವಪಕ್ಷವು ಬಂದರೆ (ಇದನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು) 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಹೇಳಿದ್ದಾರೆ. (ಶ್ರುತಿವಿಹಿತವಾದ ಪ್ರಯುಕ್ತ) ಜಿಜ್ಞಾಸಾವನ್ನು ಮಾಡಲೇಬೇಕು. ಶ್ರೀ ಹರಿಯೇ ವಿಚಾರಕ್ಕೆ ವಿಷಯನು. ಜೀವರಿಂದ ಭಿನ್ನನಾದ ಶ್ರೀ ಹರಿಯು ಇದ್ದಾನೆಂಬುವಲ್ಲಿ ಪ್ರಮಾಣವಿಲ್ಲವೆಂದು ಹೇಳಕೂಡದು) ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯು ಜಿಜ್ಞಾಸಾವನ್ನು ವಿಧಾನವಮಾಡಿ ತದ್ಬ್ರಹ್ಮ ಎಂದು (ಜಿಜ್ಞಾಸ್ಯವಲ್ಲಿ ಬ್ರಹ್ಮ ಶಬ್ದವನ್ನು ಹೇಳಿದೆ. ಇದರಿಂದ ಜೀವರಿಂದ ಭಿನ್ನನಾದ ಪರಮೇಶ್ವರನಾದ ಶ್ರೀ ವಿಷ್ಣುವೇ ಜಿಜ್ಞಾಸಾ ವಿಷಯನೆಂದು ತಿಳಿಯುತ್ತದೆ.) (ಹೇಗೆಂದರೆ) ಬ್ರಹ್ಮಶಬ್ದದಿಂದ ಜಿಜ್ಞಾಸಾ ವಿಷಯನಾದ ಶ್ರೀ ಹರಿಗೆ ಸರ್ವಗುಣ ಪರಿಪೂರ್ಣತ್ವವನ್ನು ಹೇಳಿದೆ. ಜೀವರು ಅಲ್ಪ ಗುಣಗಳುಳ್ಳವರೆಂದು ಸರ್ವಾನುಭವಸಿದ್ಧವು. ಪೂರ್ಣ ಗುಣಗಳುಳ್ಳ ಶ್ರೀ ಹರಿಗೆ ಅತ್ಯಲ್ಪ ಗುಣಗಳುಳ್ಳ ಜೀವರಿಂದ ಅಭೇದವೆಂಬುದು ಸರ್ವಾನುಭವವಿರುದ್ಧವಷ್ಟೆ. (ಆದಕಾರಣ ಶ್ರೀ ಹರಿಗೆ ಜೀವರಿಂದ ಅಭೇದವು ಸರ್ವಥಾ ಕೂಡಲಾರದು) (ಬ್ರಹ್ಮ ಶಬ್ದಕ್ಕೆ ಗುಣ ಪರಿಪೂರ್ಣನೆಂಬ ಅರ್ಥವು ಹೇಗೆ ಕೂಡುತ್ತದೆಂದರೆ) (ಶ್ರುತಿಯಲ್ಲಿಯೇ ಶ್ರೀ ವಿಷ್ಣುವು) ಬ್ರಹ್ಮನೆಂದು ಯಾವ ಕಾರಣದಿಂದ ಹೇಳಿಸಿಕೊಳ್ಳಲ್ಪಡುತ್ತಾನೆಂದು (ಶಂಕಾ ಮಾಡಿಕೊಂಡು) ಈ ಶ್ರೀ ವಿಷ್ಣುವಿನಲ್ಲಿ ಸಾರ್ವಜ್ಞ ಮೊದಲಾದ ಸರ್ವಗುಣಗಳೂ ಪೂರ್ಣಗಳಾಗಿವೆ, ಎಂಬ ಶ್ರುತಿಯಿಂದ (ಶ್ರೀ ವಿಷ್ಣುವಿಗೆ ನಿರವಧಿಕ ಗುಣಗಳಿರುವುದರಿಂದ ಬ್ರಹ್ಮನೆಂದು ಹೆಸರು ಎಂದುಕ್ತವಾಯ್ತು.) (ಏವಂ ಚ ಮುಕ್ತಿಯನ್ನು ಹೊಂದುವುದಕ್ಕಾಗಿ ವೇದಾರ್ಥಭೂತನಾದ ಶ್ರೀ ವಿಷ್ಣುವಿನ ಜಿಜ್ಞಾಸಾವನ್ನು ಮುಮುಕ್ಷುವು ಮಾಡಲೇಬೇಕು.) ॥ ೧ ॥

## ಜನ್ಮಾಧಿಕರಣ ॥ ೨ ॥

**ಮೂ ॥ ನ ಜೀವ ಏವಾಯಂ ಬ್ರಹ್ಮಶಬ್ದಃ । 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿನಾ ಜನ್ಮಾದಿಕಾರಣತ್ವಸ್ಯೈವ ಬ್ರಹ್ಮಲಕ್ಷಣತ್ವೋಕ್ತೇಃ ॥ ೨ ॥**

ಅ ॥ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮ ಎಂಬ ಶಬ್ದವು ಜೀವಪರವಾಗಿರುವುದೆಂದು ಹೇಳಕೂಡದು. (ಏಕೆಂದರೆ) ಯತೋ ವಾ ಇಮಾನಿ ಯಾವ ಶ್ರೀ ಹರಿ

ಯಿಂದಲೇ ಬ್ರಹ್ಮರುದ್ರ ಮೊದಲಾದ ಸಮಸ್ತ ಜೀವರೂ ಹುಟ್ಟುತ್ತಾರೋ, ಇದು ಮೊದಲಾದ ಶ್ರುತಿಗಳಿಂದ ಸಕಲ ಜಗಜ್ಜನ್ಮಾದಿ ನಿಮಿತ್ತ ಕಾರಣತ್ವವೇ ಬ್ರಹ್ಮನಿಗೆ ಲಕ್ಷಣವೆಂದು ಹೇಳಿದೆ. ಏವ ಶಬ್ದದಿಂದ ಜೀವಾದಿಗಳಲ್ಲಿ ಈ ಲಕ್ಷಣವು ಸರ್ವಥಾ ಅಸಂಭಾವಿತವೇ ಎಂದುಕ್ತವಾಯ್ತು ॥ ೨ ॥

## ಶಾಸ್ತ್ರಯೋನಿತ್ವಾಧಿಕರಣ ॥ ೩ ॥

**ಮೂ ॥ ನ ಚ ರುದ್ರಾದೌ ಸಮಮೇತಲ್ಲಕ್ಷಣಂ । ಶಾಸ್ತ್ರೈಕಸಮಧಿಗಮ್ಯತ್ವಾತ್ಕಾರಣತ್ವಸ್ಯ ॥ ೩ ॥**

ಅ॥ ರುದ್ರ ಮೊದಲಾದ ಜೀವ ವಿಶೇಷರಲ್ಲಿ ಪಾಶುಪತ ಮೊದಲಾದ ಆಗಮಗಳಲ್ಲಿ ಹೇಳಿದ ರೀತ್ಯಾ ಅನುಮಾನದಿಂದ ಈ ಜಗಜ್ಜನ್ಮಾದಿ ಕಾರಣತ್ವ ರೂಪವಾದ ಲಕ್ಷಣವು ಸಾಧಾರಣವಾಗಿದೆ. (ಅಂತರೆ ಈ ಬ್ರಹ್ಮನಿಗೆ ಹೇಳಿದ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿಯು:) (ವಸ್ತುತಸ್ತು ಜೀವರಲ್ಲಿ ಈ ಲಕ್ಷಣವು ಸರ್ವಥಾ ಕೂಡದಿರುವುದರಿಂದ ಅಲೌಕಿಕವಾದುದನ್ನು ಕಲ್ಪಿಸುವುದು ಯುಕ್ತವಲ್ಲ.) ಹೀಗೆ ಈ ಲಕ್ಷಣಕ್ಕೆ ಅತಿವ್ಯಾಪ್ತಿಯು ಬರುತ್ತದೆಂಬುವುದು ಯುಕ್ತವಲ್ಲ. (ಏಕೆಂದರೆ) ಸಕಲ ಜಗಜ್ಜನ್ಮಾದಿಗಳಿಗೆ ನಿಮಿತ್ತ ಕಾರಣನಾದವನನ್ನು ಋಗ್ವೇದ ಮೊದಲಾದ ಶಾಸ್ತ್ರಗಳಿಂದಲೇ ತಿಳಿಯಬೇಕು. (ಅನುಮಾನವಾದರೂ, ರುದ್ರಾದಿಗಳನ್ನು ಪಕ್ಷೀಕರಿಸಿಕೊಂಡು ಜಗತ್ಕಾರಣರೆಂದಾಗಲೀ ಕಾರಣತ್ವವು ರುದ್ರಾದಿಗಳಲ್ಲಿದೆ ಎಂದಾಗಲೀ ಸಾಧಿಸಬೇಕು. ಈ ಎರಡು ಕಲ್ಪಗಳಲ್ಲಿಯೂ ಜಗತ್ಕಾರಣತ್ವವು ಪ್ರಸಿದ್ಧವಾಗಿರಬೇಕು. ಇಲ್ಲವಾದರೆ ಅಪ್ರಸಿದ್ಧ ವಿಶೇಷತ್ವ, ಆಶ್ರಯಾಸಿದ್ಧಿ ಎಂಬ ದೋಷಗಳು ಬರುತ್ತವೆ. ಪ್ರಸಿದ್ಧಿಯನ್ನು ಅನುಮಾನದಿಂದ ಹೇಳಬೇಕು. ಶಾಸ್ತ್ರಾನನುಸಾರಿಯಾದ ಅನುಮಾನವು ಪ್ರತಿಪಕ್ಷಾದಿಗಳಿಂದ ದುಷ್ಟವೇ. ಆದಕಾರಣ ಅನುಮಾನದಿಂದ ಸಾಧಿಸಲು ಆಗುವುದಿಲ್ಲ. ಮತ್ತೆ ಶಾಸ್ತ್ರದಿಂದಲೇ ಶಾಸ್ತ್ರವು ಶ್ರೀ ವಿಷ್ಣುವನ್ನೇ ಜಗತ್ಕಾರಣನೆಂದು ಪ್ರತಿಪಾದಿಸುತ್ತದೆ.) ॥ ೩ ॥

## ಸಮನ್ವಯಾಧಿಕರಣ ॥ ೪ ॥

ಅವ ॥ ಶಾಸ್ತ್ರವು ರುದ್ರಾದಿಗಳು ಜಗಜ್ಜನ್ಮಾದಿ ಕಾರಣರೆಂದು ಪ್ರತಿಪಾದಿಸುತ್ತದೆ. ಪಾಶುಪತಾದಿ ಶಾಸ್ತ್ರಗಳಲ್ಲಿ ಹಾಗೆ ಹೇಳಿದೆ. ಹಾಗಾದರೆ 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಇತ್ಯಾದಿ ಶಾಸ್ತ್ರ ಬಲದಿಂದ ವೇದಾದಿಗಳು ಶ್ರೀ ವಿಷ್ಣುವೇ ಜಗತ್ಕಾರಣನೆಂದು ಪ್ರತಿಪಾದಿಸುವುದರಿಂದ ಪಾಶುಪತಾದಿಗಳ ಉಕ್ತಿಯಲ್ಲಿ ವಿಶ್ವಾಸವಿಲ್ಲವೆನ್ನಕೂಡದು. ನಮ್ಮ ಪ್ರತೀತಿಯು ಸಂವಾದ ರೂಪವಾಗಿದ್ದುದರಿಂದ ಅದರಲ್ಲಿ ವಿಶ್ವಾಸವಿದೆ. ನಮಗೆ 'ಧ್ಯಾತ್ವಾ ಶಿವಂ ಶಾಂತಿಮತ್ಯಂತಮೇತಿ' 'ಹಿರಣ್ಯಗರ್ಭಸ್ಸಮವರ್ತತಾಗ್ರೇ' ಇತ್ಯಾದಿಗಳಲ್ಲಿ ರುದ್ರಾದಿಗಳು ಜಗತ್ಕಾರಣರೆಂದು ಪ್ರತೀತವಾಗುತ್ತದೆ ಎಂದು ಪೂರ್ವಪಕ್ಷವು ಬಂದರೆ–

**ಮೂ ॥ ನ ಚ ಪಾಶುಪತಶಾಸ್ತ್ರೋದಿತತ್ವಾದಿ ಶಾಸ್ತ್ರಪ್ರತಿಪಾದ್ಯತ್ವೇ ಕಾರಣಂ ।**
**ಕಿಂತೂಪಕ್ರಮಾದಿಲಕ್ಷಣಃ ಸಮನ್ವಯ ಏವ ॥ ೪ ॥**

ಅ ॥ ರುದ್ರನೂ ಚತುರ್ಮುಖಾದಿಗಳೂ ಜಗಜ್ಜನ್ಮಾದಿಕಾರಣರೆಂದು ವೇದಾದಿಶಾಸ್ತ್ರಗಳಲ್ಲಿ ಹೇಳಿದೆ ಎಂದು ಪಾಶುಪತ ಶಾಸ್ತ್ರ ಮೊದಲಾದವುಗಳಲ್ಲಿ ಹೇಳಿದ್ದೂ ನಮ್ಮ ಪ್ರತೀತಿಯೂ ಕೂಡ ರುದ್ರನೂ ಚತುರ್ಮುಖಾದಿಗಳೂ ಜಗತ್ಕಾರಣರೆಂದು ವೇದಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತರಾಗಿದ್ದಾರೆಂಬುವಲ್ಲಿ

ಪ್ರಮಾಣವಾಗುವುದಿಲ್ಲ. (ಏಕೆಂದರೆ ಪಾಶುಪತಾದಿ ಶಾಸ್ತ್ರಗಳಲ್ಲಿ ವಿಶ್ವಾಸ ಕಾರಣವಿಲ್ಲ. ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ ಎಂಬುವುದಕ್ಕೆ ಇತರ ಪ್ರಮಾಣಾನುಸಾರ ಅರ್ಥಾಂತರವನ್ನೇ ಹೇಳಬೇಕಾದುದರಿಂದ ನಮ್ಮ ಪ್ರತೀತಿಯೂ ದುಷ್ಟವು.) (ಹಾಗಾದರೆ ಶಾಸ್ತ್ರ ತಾತ್ಪರ್ಯವನ್ನು ನಿರ್ಣಯಿಸಲಿಕ್ಕೆ ಪ್ರಮಾಣವು ಯಾವುದೆಂದರೆ) ಉಪಕ್ರಮ ಉಪಸಂಹಾರಾದಿ ರೂಪವಾದ ಶಕ್ತಿ ತಾತ್ಪರ್ಯ ಲಕ್ಷಣಾನ್ಯತರ ರೂಪ ಸಂಬಂಧವೇ ಶಾಸ್ತ್ರ ತಾತ್ಪರ್ಯ ನಿರ್ಣಯದಲ್ಲಿ ಕಾರಣವು. (ಅಂತೂ ಪಾಶುಪತಾದಿಶಾಸ್ತ್ರಗಳಲ್ಲಿ ರುದ್ರಾದಿಗಳೇ ಜಗತ್ಕಾರಣರೆಂದು ಹೇಳಿದ್ದರೂ ಅದು ಉಪಕ್ರಮಾದಿಲಿಂಗಗಳಿಂದ ವಿರುದ್ಧವಾಗಿರುವುದರಿಂದ ಗ್ರಾಹ್ಯವಲ್ಲ. ಮತ್ತೆ ಉಪಕ್ರಮಾದಿ ಲಿಂಗಗಳಿಂದ ಸಿದ್ಧವಾದುದೇ ಗ್ರಾಹ್ಯವು. ಅವುಗಳು ಶ್ರೀ ವಿಷ್ಣುವಿನಲ್ಲಿ ಹೊರತು ರುದ್ರಾದಿಗಳಲ್ಲಿಲ್ಲ. ಆದಕಾರಣ ಶ್ರೀವಿಷ್ಣುವೇ ಜಗಜ್ಜನ್ಮಾದಿಕಾರಣನೆಂದು ಮುಖ್ಯ ವೃತ್ತಿಯಿಂದ ಸಮಸ್ತ ವೇದಾದಿ ಶಾಸ್ತ್ರಗಳಿಂದ ವೇದ್ಯನು.) || ೪ ||

## ಈಕ್ಷತ್ಯಧಿಕರಣ || ೫ ||

ಅವ || ಶ್ರೀ ಪರಮಾತ್ಮನೇ ಮುಖ್ಯವೃತ್ತಿಯಿಂದ ಶಾಸ್ತ್ರಪ್ರತಿಪಾದ್ಯನೆಂಬುವುದು ಯುಕ್ತವಲ್ಲ. 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಗಳಲ್ಲಿ ಶ್ರೀಹರಿಯು ಅವಾಚ್ಯನೆಂದು ಹೇಳಿದೆ ಎಂದರೆ-

**ಮೂ || ನ ಚ ತಸ್ಯಾವಾಚ್ಯತ್ವಂ ಶ್ರುತ್ಯಭಿಪ್ರಾಯಃ| 'ಸರ್ವೇ ವೇದಾ ಯತ್ಪದಮಾಮನಂತಿ' ಇತ್ಯಾದಿ ಶ್ರುತಿಸಹಿತಾನುಭವಸ್ಯ ಬಲವತ್ತ್ವಾತ್ || ೫ ||**

ಅ || ಪರಮಾತ್ಮನು ಅವಾಚ್ಯನೆಂದು 'ಯತೋ ವಾಚಃ' ಎಂಬುವ ಶ್ರುತಿಗೆ ಅಭಿಪ್ರಾಯವಾಗಿದ್ದರೆ ಹಾಗಾಗಬಹುದಿತ್ತು. ಹಾಗೆ ಅಲ್ಲ. (ಮತ್ತೆ 'ಪುರುಷಮೀಕ್ಷತೇ' ಪ್ರಣವೋಪಾಸಕನು ಚತುರ್ಮುಖನ ಉಪದೇಶದಿಂದ ಶ್ರೀ ಪರಮಾತ್ಮನನ್ನು ನೋಡುತ್ತಾನೆಂದು ಹೇಳಿದುದರಿಂದ ಈಕ್ಷಣೀಯತ್ವವು ಶ್ರುತವಾದ ಕಾರಣ ಅವಾಚ್ಯನೆಂದು ಹೇಳಿದ್ದು ಸಂಪೂರ್ಣವಾಗಿ ಅಗೋಚರನೆಂಬ ಅಭಿಪ್ರಾಯದಿಂದ) 'ಸರ್ವೇ ವೇದಾಃ' ಸಮಸ್ತ ವೇದಗಳೂ ಯಾವ ಶ್ರೀ ಹರಿಯ ಸ್ವರೂಪವನ್ನು ತಿಳಿಸುತ್ತವೋ, ಎಂಬ ಶ್ರುತಿ ಸಹಿತವಾದ ಅನುಭವವು ಕೇವಲ ಶ್ರುತಿಗಿಂತ ಪ್ರಬಲವಾದ ಕಾರಣ (ಶ್ರುತಿಯನ್ನು ಬಾಧಿಸುತ್ತದೆಂಬುವುದು ಯುಕ್ತವು.) || ೫ ||

## ಆನಂದಮಯಾಧಿಕರಣ || ೬ ||

**ಮೂ || ನ ಚಾವಯವತ್ವವಿರೋಧಃ | ನೇಹ ನಾನಾಸ್ತಿ ಕಿಂಚನೇತ್ಯಾದಿ ಶ್ರುತೇರವಯವಾದ್ಯಭೇದಾತ್ || ೬ ||**

ಅ || (ಬ್ರಹ್ಮಪುಚ್ಛಮ್ ಎಂದುಕ್ತವಾಗಿದೆ. ಬ್ರಹ್ಮನೆಂದರೆ ಶ್ರೀಹರಿಯು. ಆನಂದಮಯನೂ ಶ್ರೀಹರಿಯೆಂದಾದರೆ ಆಗ ಬ್ರಹ್ಮ ಪುಚ್ಛಂ ಎಂದು ಹೇಳುವುದರಿಂದ ತನಗೇ ತಾನೇ ಅವಯವನೆಂದಾಗಬೇಕಾಗುವುದು) ತಾನು ತನಗೆ ಅವಯವನೆಂಬುವುದು ವಿರುದ್ಧವು. (ಯಾವುದು ಯಾವುದರ ಅವಯವವೋ, ಅದು ಅದರಿಂದ ಭಿನ್ನವು, ಎಂದು ಅವಯವ ಅವಯವಿಗಳಿಗೆ ಭೇದವೇ ಕಂಡದೆ, ಮತ್ತು ಒಂದೇ ವಸ್ತುವಿಗೆ ಆಶ್ರಯಾಶ್ರಯಿಭಾವವೂ ವಿರುದ್ಧವೇ, ಎಂದರೆ) ಹಾಗೆ ಹೇಳ ಕೂಡದು. ನೇಹ ನಾನಾಸ್ತಿ ಕಿಂಚನ ಈ ಪರಬ್ರಹ್ಮನಲ್ಲಿ ಅತ್ಯಲ್ಪವೂ ಅವಯವ ಅವಯವಿಗಳಿಗೆ ಭೇದವಿಲ್ಲ, ಇತ್ಯಾದಿ ಶ್ರುತಿಗಳ ಬಲದಿಂದ ಅವಯವ ಅವಯವಿಗಳಿಗೆ ಭೇದವಿಲ್ಲ. (ಶ್ರೀ ಪರಮಾತ್ಮನಿಗೂ ಅವನ ಅವಯವಗಳಿಗೂ

ಭೇದವನ್ನು ನಿರಾಕರಿಸುವ ಶ್ರುತಿಯು ಭೇದ ವ್ಯಾಪ್ತಿಯನ್ನ ಪೇಕ್ಷಿಸುತ್ತದೆ. ಅವಯವ ಅವಯವಿ ಭಾವ ದಿಂದಲೇ ಭೇದವು ಪ್ರಾಪ್ತವಾಗುತ್ತದೆ. ಇಲ್ಲವಾದವೆ ನಿರವಯವವನು ಎಂದೇ ಹೇಳಬೇಕಾಗುವುದು.) ಅಂತೂ ಅವಯವ ಅವಯವ್ಯಾದಿ ಭಾವವನ್ನಂಗೀಕರಿಸಿಕೊಂಡು ನಿರಾಕರಿಸುವ ಶ್ರುತಿಯು ವಿರೋಧವನ್ನು ನಿರಾಕರಿಸುತ್ತದೆ.) ॥ ೬ ॥

## ಅಂತರಧಿಕರಣ ॥ ೭ ॥

ಮೂ ॥ ನ ಚ 'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ । ದಿವ ಆಕ್ಯಾನಂ ಸವಿತಾರಂ ಬೃಹಸ್ಪತಿಂ । ಚತುರ್ಹೋತಾರಂ ಪ್ರದಿಶೋಽನುಕ್ಲೃಪ್ತಂ । ವಾಚೋ ವೀರ್ಯಂ ತಪಸಾನ್ವವಿಂದತ್" ಇತ್ಯಾದಿ ಶಬ್ದಾನಾಮನ್ಯವಿಷಯತ್ವಂ ॥ ಶ್ರುತಿಸಂದೇಹೇಽ ನನ್ಯಥಾಸಿದ್ಧಲಿಂಗೇನ ನಿರ್ಣಯೋಪಪತ್ತೇಃ ॥ ೭ ॥

ಅ ॥ (ಅಂತಸ್ಥ ಪುರುಷನಲ್ಲಿ ಇಂದ್ರಾದಿ ಶಬ್ದಗಳು ಶ್ರುತಗಳಾಗಿವೆ. ಹೇಗೆಂದರೆ) ಜಗತ್ತಿಗೆ ಆಶ್ರಯನೂ, ನಾಲ್ಕು ಅಂತಃಕರಣಗಳಲ್ಲಿ ವಿಷಯಗಳನ್ನು ಹೋಮಿಸುವವನೂ, ಸರ್ವತ್ರ ವ್ಯಾಪ್ತನೂ, ಸಮಸ್ತ ವೇದಗಳಿಗೆ ಮುಖ್ಯಾರ್ಥಭೂತನೂ, ಆದ ಇಂದ್ರನನ್ನೂ ಅಗ್ನಿಯನ್ನೂ, ಭಾರತಿಗೆ ಪತಿಯಾದ ವಾಯುವನ್ನೂ, ಸೂರ್ಯನನ್ನೂ, ಬೃಹಸ್ಪತಿಯನ್ನೂ, ಚತುರ್ಮುಖನು ತಪಸ್ಸಿನಿಂದ ತಿಳಿದುಕೊಂಡನು. ಇತ್ಯಾದಿ ಶ್ರುತಿಗಳಲ್ಲಿ ಇಂದ್ರ ಮೊದಲಾದ ಶಬ್ದಗಳು ಶ್ರೀ ಹರಿಯಿಂದ ಭಿನ್ನರಾದವರನ್ನು ಹೇಳುತ್ತವೆ. ಎಂಬುವುದು ರೂಢಿಯಿಂದಲೂ ಯೋಗದಿಂದಲೂ ಪ್ರಸಿದ್ಧವೇ ಆಗಿದೆ. ಆದ ಕಾರಣ ಇಂದ್ರಾದಿಗಳೇ ಅಂತಸ್ಥರು ಎಂದರೆ) ಹಾಗೆ ಹೇಳಕೂಡದು. ಶ್ರುತಿ ವಿಷಯದಲ್ಲಿ ಶ್ರುತಿಲಿಂಗಗಳಿಂದ ಸಂಶಯವು ಬಂದರೆ ಅನನ್ಯಥಾಸಿದ್ಧಲಿಂಗದಿಂದ ನಿರ್ಣಯವುಂಟಾಗುತ್ತದೆ. (ಅಂದರೆ ಇಂದ್ರಾದಿಶ್ರುತಿಗಳು ಇಂದ್ರಾದಿಗಳನ್ನು ಹೇಳುವಂತೆ ಭಗವಂತನನ್ನೂ ಹೇಳುತ್ತವೆ. (ಸ ಬ್ರಹ್ಮಾ ಸ ಶಿವಃ ಸ ಇಂದ್ರಃ) ಇತ್ಯಾದಿಗಳಿಂದ ರೂಢಿಯೂ ಪರವ್ಯೈಶ್ವರ್ಯಾದಿಗಳು ಇದ್ದುದರಿಂದ ಯೋಗವೂ ಇದೆ. ಸಪ್ತಾಶ್ವಯುಕ್ತ ರಥವತ್ತ್ವಾದಿಲಿಂಗಗಳು ಸೂರ್ಯನಿಗೂ ಸೂರ್ಯಾಧಿಷ್ಠಾನನಾದ ಶ್ರೀಹರಿಗೂ ಕೂಡುತ್ತವೆ. ಆದಕಾರಣ ಇಂದ್ರಾದಿ ವಿಷಯಕವೋ, ಭಗವದ್ವಿಷಯಕವೋ, ಎಂದು ಸಂದೇಹವೇ ಬರುವುದು. ನಿರ್ಣಯವಾಗುವುದಿಲ್ಲ. ಸಮುದ್ರಾಂತಸ್ಥತ್ವ ಮೊದಲಾದ ಲಿಂಗಗಳು ಶ್ರೀ ಹರಿಯಲ್ಲಿಯೂ ಇರತಕ್ಕವು. ಇತರರಲ್ಲಿರತಕ್ಕವುಗಳಲ್ಲ. ಆದಕಾರಣ ಶ್ರುತಿವಿಷಯದಲ್ಲಿ ಶ್ರುತಿಯಿಂದ ಸಂದೇಹವು ಬರುವಾಗ ಅನನ್ಯಥಾಸಿದ್ಧಲಿಂಗದಿಂದ (ಅಂದರೆ ಶ್ರೀ ಹರಿಯಲ್ಲಿಯೇ ಇರತಕ್ಕದಾದುದರಿಂದ ಯಾವ ರೀತಿಯಿಂದಲೂ ಇತರರಲ್ಲಿ ಇಲ್ಲದಿರುವ ಲಿಂಗದಿಂದ) ನಿರ್ಣಯವು ಬರುತ್ತದೆ. ಏವಂ ಆ ಶ್ರುತ್ಯಾದಿಗಳು ಶ್ರೀಹರಿಯಲ್ಲಿಯೇ ಮುಖ್ಯವು. ಇಂದ್ರಾದಿಗಳಲ್ಲಿ ಅಮುಖ್ಯವು. ಪರವ್ಯೈಶ್ವರ್ಯಾದಿಗಳೂ ಶ್ರೀ ಹರಿಯಲ್ಲಿ ನಿರವಧಿಕವು. ಅಪರಾಧೀನವು. ಇಂದ್ರಾದಿಗಳಲ್ಲಿ ನ್ಯೂನವು. ಈಶ್ವರಾಧೀನವು. ರೂಢಿಯೂ ಶ್ರೀಹರಿಯಲ್ಲಿ ಅನ್ಯನಿಮಿತ್ತವಲ್ಲ. ಇಂದ್ರಾದಿಗಳಲ್ಲಿ ಭಗವತ್ಸನ್ನಿಧಾನ ನಿಮಿತ್ತವು. ಆದಕಾರಣ ಅಂತಸ್ಥನು ಶ್ರೀ ವಿಷ್ಣುವೇ) ॥ ೭ ॥

## ಆಕಾಶಾಧಿಕರಣ ಪ್ರಾಣಾಧಿಕರಣ, ಗಾಯತ್ರ್ಯಧಿಕರಣ ।

ಮೂ ॥ (೧) ಅಧಿಭೂತಾಧ್ಯಾತ್ಮಾಧಿವೇದಗತಾಕಾಶಾಮಪಿ ಶಬ್ದಾನಾಮಚೇತನ ಜೀವಾನ್ವಯ ವ್ಯತಿರೇಕ ಶಿಶ್ನಶ್ರೀಷು ವಿದ್ಯಮಾನೇಷ್ವಪಿ ಭಗವದ್ವಿಷಯತ್ವಮೇವಾನನ್ಯಥಾಸಿದ್ಧ ಲಿಂಗೈಃ ॥ (೨) ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ ಇತ್ಯಾದಿ

**ಶಬ್ದಸಹಿತಲಿಂಗೈಶ್ಚ (೩) ಸಂದಿಗ್ಧಶ್ರುತಿಲಿಂಗಾಭ್ಯಾಂ ಯುಕ್ತಾಭ್ಯಾಮಪ್ಯಸಂದಿಗ್ಧಯೋಃ ಕೇವಲಯೋರಪಿ ಬಲವತ್ತ್ವಾತ್ ॥ ೮ ॥ ೯ ॥ ೧೧ ॥**

ಅ ॥ (ಆಕಾಶವು ಭೂತಾಕಾಶವೇ ಆಗದೇಕೆ ಯೋಗರೂಢಿಗಳು ಅಲ್ಲಿಯೇ ಇರುವವು. ಇಂದ್ರಾದಿಗಳು ಚೇತನರಾದುದರಿಂದ ಅವರಿಗೆ ಪರಾಧೀನತ್ವಾದಿಗಳು ಕೂಡಿದರೂ ಆಕಾಶವು ಅಚೇತನವು, ಅದರಲ್ಲಿರುವ ಅವಕಾಶಪ್ರದತ್ವಾದಿಗಳು ಸ್ವಭಾವವೇ. ಆಗಂತುಕವಲ್ಲ. ಆದಕಾರಣ ಆಕಾಶವು ಪರಾಧೀನವಾಗಲಾರದು. ಪ್ರಾಣಶಬ್ದವಾಚ್ಯನು ಮುಖ್ಯಪ್ರಾಣನೇ. ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿಯೇ ಪ್ರಸಿದ್ಧವು. ಗಾಯತ್ರಿಯು ಛಂದೋವಿಶೇಷವೇ. ಗಾಯತ್ರೀ ಶಬ್ದವು ಛಂದೋ ವಿಶೇಷದಲ್ಲಿಯೇ ಪ್ರಸಿದ್ಧವು. ಹಾಗೆ ಅಂಗೀಕರಿಸಿದರೆ ಬಾಧಕವು ಇಲ್ಲ. ಭಗವಂತನಲ್ಲಿ ಪ್ರಸಿದ್ಧಿಯಿಲ್ಲ ಎಂದರೆ) ಭೂತಗಳಲ್ಲಿ ಪ್ರಸಿದ್ಧಗಳಾದ ಆಕಾಶ ಪೃಥಿವ್ಯಾದಿ ಶಬ್ದಗಳೂ, ಇಂದ್ರಿಯ ಪ್ರಾಣ ಶರೀರಗಳಲ್ಲಿ ಪ್ರಸಿದ್ಧಗಳಾದ ಚಕ್ಷುರಾದಿ ಶಬ್ದಗಳೂ, ವೇದ(ಅವಾಂತರ ಭೇದಸಹಿತಗಳಾದ ಜಗತ್ಯಾದಿ ಛಂದಸ್ಸುಗಳು)ಗಳಲ್ಲಿ ಪ್ರಸಿದ್ಧಗಳಾದ ಗಾಯತ್ರೀ ಉಷ್ಣಿಗಾದಿ ಶಬ್ದಗಳೂ, ಇವುಗಳಿಗೆ ಕ್ರಮವಾಗಿ, ಅಚೇತನತ್ವ, ಪ್ರಾಣವಿದ್ದರೇನೇ ಜೀವನ, ಪ್ರಾಣವಿಲ್ಲದಿದ್ದರೆ ಜೀವನವಿಲ್ಲ, ಹೀಗೆ ಜೀವಾನ್ವಯ ವ್ಯತಿರೇಕವತ್ತ್ವ, ನಿತ್ಯತ್ವಗಳು ಇದ್ದರೂ ಪರೋವರೀಯಸ್ತ್ವ, ಶ್ರೀಲಕ್ಷ್ಮೀಪತಿತ್ವ, ಗಾನ ತ್ರಾಣ ಕರ್ತೃತ್ವ ಮೊದಲಾದ ಶ್ರೀ ವಿಷ್ಣುವು ಹೊರತು ಬೇರೆಯವರಲ್ಲಿ ಸರ್ವಥಾ ಇಲ್ಲದಿರುವ ಅನ್ಯಥಾ ಅಸಿದ್ಧ ಲಿಂಗಗಳಿಂದ ಆಕಾಶ ಪ್ರಾಣ ಗಾಯತ್ರೀ ಶಬ್ದಗಳು ಶ್ರೀ ಭಗವಂತನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. (ಗಾಯತ್ರ್ಯಧಿಕರಣದಲ್ಲಿ ಇತೋಽಭ್ಯಧಿಕವಾದ ಪ್ರಮಾಣವನ್ನು ಹೇಳುತ್ತಾರೆ) (೨) ಶ್ರೀ ಹರಿಗೆ ಹಿಂದೆ ಹೇಳಿದ ಮಹಿಮೆಯು ಮಾತ್ರವಲ್ಲ. ಆ ಮಹಿಮೆಗಿಂತಲೂ ಪುರುಷನು (ಷಡ್ಗುಣ ಪರಿಪೂರ್ಣನಾದ ಶ್ರೀ ಹರಿಯು) ಅತ್ಯಧಿಕ ಮಹಿಮೆಯುಳ್ಳವನು, ಇದು ಮೊದಲಾದ ಪುರುಷ ಶ್ರುತಿಯಿಂದ ಕೂಡಿದ ಪುರುಷಸಂಕೀರ್ತಿತತ್ವ. 'ಪಾದೋಽಸ್ಯ ವಿಶ್ವಾ ಭೂತಾನಿ' ಹೀಗೆ ಭೂತಪಾದತ್ವ ಮೊದಲಾದ ಅನನ್ಯಥಾ ಸಿದ್ಧಲಿಂಗಗಳಿಂದಲೂ ನಿರವಕಾಶ ಶ್ರುತಿಯಿಂದಲೂ ಗಾಯತ್ರೀ ಶಬ್ದವಾಚ್ಯನು ಶ್ರೀ ವಿಷ್ಣುವೇ. (೩) (ಇದಕ್ಕೂ ಯುಕ್ತಿಯು ಹೇಗೆ ಆಗುವುದೆಂದರೆ) ಆಕಾಶ ಪ್ರಾಣ ಗಾಯತ್ರೀ ಶ್ರುತಿ(ಶಬ್ದ)ಗಳು ಆಕಾಶಾದಿವಾಚಕಗಳೂ ಭಗವದ್ವಾಚಕ ಶಕ್ತಿಯುಕ್ತಗಳಾಗಿರುವುದರಿಂದ ಭಗವದ್ವಾಚಕಗಳೂ ಆಗಿವೆ. ಆದಕಾರಣ ಸಂದಿಗ್ಧಗಳಾಗಿವೆ. ಅಚೇತನತ್ವಾದಿ ಲಿಂಗಗಳೂ ಅನುವ್ಯಾಖ್ಯಾನದಲ್ಲಿ ಹೇಳಿದ ರೀತ್ಯಾ ಸಂದಿಗ್ಧಗಳು. ಪರೋವರೀಯಸ್ತ್ವಾದಿಲಿಂಗಗಳೂ ಪುರುಷ ಸೂಕ್ತಾದಿಗಳೂ ಶ್ರೀವಿಷ್ಣುವನ್ನು ಮಾತ್ರ ಹೇಳತಕ್ಕವುಗಳಾದುದರಿಂದ ಅಸಂದಿಗ್ಧಗಳು. ಸಂದಿಗ್ಧ ಶ್ರುತಿಲಿಂಗಗಳಿಗಿಂತಲೂ ಅಸಂದಿಗ್ಧಗಳಾದ ಕೇವಲ ಶ್ರುತಿ ಲಿಂಗಗಳಿಗೂ ಪ್ರಾಬಲ್ಯವಿದೆ. (ಏವಂಚ ಸಾವಕಾಶಗಳಾದ ಅನೇಕ ಶ್ರುತಿಲಿಂಗಗಳಿಗಿಂತಲೂ ನಿರವಕಾಶವಾದುದು ಒಂದೇ ಇದ್ದರೂ ಪ್ರಬಲವು. ಇಲ್ಲಿ ನಿರವಕಾಶಗಳಾದ ಶ್ರುತಿ ಲಿಂಗಗಳು ಎರಡೂ ಇದ್ದ ಪ್ರಯುಕ್ತ ಸುತರಾಂ ಪ್ರಬಲವು.) ॥ ೮ ॥ ೯ ॥ ೧೧ ॥

## ಉತ್ತರಪ್ರಾಣಾಧಿಕರಣ ॥ ೧೨ ॥

**ಮೂ ॥ (೧) ಪಟಾಪೃಥಕ್ಸಿದ್ಧತ್ವಮನ್ಯತ್ರ ಶ್ರುತಿಲಿಂಗಾದೇಃ । (೨) ಅನ್ಯಗತಲಿಂಗಾದೀನಾಮಪಿ ತದ್ಗತಭಗವದಪೇಕ್ಷಯಾ ಯುಕ್ತೇಃ ॥ ೧೨ ॥**

ಅ ॥ ಶ್ರೀ ಹರಿಯಿಂದ ಇತರರಾದ ಇಂದ್ರಾದಿಗಳಲ್ಲಿರುವ ಇಂದ್ರಾದಿ ಶಬ್ದಗಳೂ ವೃತ್ರಹನನಾದಿ ಲಿಂಗಗಳೂ ಅನ್ಯಥಾ ಅಸಿದ್ಧಗಳು (ನಿರವಕಾಶಗಳಾಗಿವೆ) ಹೇಗೆಂದರೆ— 'ಇಂದ್ರೋ ವೈ ವೃತ್ರಂ'

ಹತ್ವಾ ಮಹಾನಭೂತ್'' ವಿಶ್ವಾಮಿತ್ರಂ ಹ್ಯೇತದಹ್ನಃ ಶಂಸಿಷ್ಯಂತಮಿಂದ್ರ ಉಪನಿಷಸಾದ ಎಂಬ ಇಂದ್ರ ಶ್ರುತಿಗಳೂ, ವೃತ್ರಹನನ, ಮಹಾವ್ರತ ಯಾಜತ್ವ ಲಿಂಗಗಳೂ ನಿರವಕಾಶಗಳು. ಪ್ರಾಣ ಸಂವಾದಾದಿಗಳೂ ಅದರೊಂದಿಗೆ ಇರುವ ಪ್ರಾಣಶ್ರುತಿಯೂ ನಿರವಕಾಶವೇ. ಶತಾಯುಷ್ಟ್ವಾದಿ ಲಿಂಗಗಳೂ ಪುರುಷ ಶ್ರುತಿಯೂ ಪ್ರಾಣೋ ವಾ ಅಹಮಸ್ಮಿ ಎಂಬ ವಾಕ್ಯವೂ ನಿರವಕಾಶವು. ಆದಕಾರಣ ಇಂದ್ರ ಪ್ರಾಣಾದಿ ಶಬ್ದಗಳು ಇಂದ್ರಾದಿಗಳನ್ನೇ ಹೇಳುತ್ತವೆ. ಭಗವಂತನನ್ನೇ ಹೇಳುತ್ತವೆ ಎಂಬುವುದು ಕೂಡಲಾರದು ಎಂದರೆ ಹಾಗೆ ಹೇಳಕೂಡದು. (೨) ಇಂದ್ರಾದಿಗಳಲ್ಲಿರತಕ್ಕವುಗಳಾದಾಗ್ಯೂ ವೃತ್ರಾಸುರವಧ ಮೊದಲಾದ ಲಿಂಗಗಳು ಮುಖ್ಯವಾಗಿ ಇಂದ್ರಾದಿಗಳಲ್ಲಿ ಅಂತರ್ಗತನಾದ ಭಗವಂತನ ಸನ್ನಿಧಾನ ವಿಶೇಷದಿಂದಲೇ ಯುಕ್ತವು. ಮತ್ತು ಪರಮೈಶ್ವರ್ಯ ಮೊದಲಾದುದು ಮುಖ್ಯವಾಗಿ ಭಗವಂತನಲ್ಲಿಯೇ ಇರುವುದರಿಂದ ಮುಖ್ಯತಃ ಇಂದ್ರ ಮೊದಲಾದ ಶಬ್ದ ವಾಚ್ಯನು ಶ್ರೀ ಭಗವಂತನೇ. (ಆದಕಾರಣ ಇಂದ್ರಾದಿಗಳಲ್ಲಿ ಲಿಂಗಾದಿಗಳು ಸಾವಕಾಶಗಳಾಗಿವೆ. ಶ್ರೀ ಪರಮಾತ್ಮನಲ್ಲಿಯೇ ನಿರವಕಾಶಗಳು.) ॥ ೧೨ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೧ನೇ ಅಧ್ಯಾಯದಲ್ಲಿ ೧ನೇ ಪಾದವು ಸಮಾಪ್ತವಾಯಿತು.

## ಸರ್ವತ್ರಪ್ರಸಿದ್ಧೋಪದೇಶಾಧಿಕರಣ ॥ ೧ ॥

ಅ ॥ ಏತಂ ಹ್ಯೇವ ಬಹ್ವೃಚಾಃ ಇತ್ಯಾದಿಗಳಲ್ಲಿ ಸೂರ್ಯನ ಶ್ರುತಿಲಿಂಗಗಳು ಕಾಣುವುದರಿಂದ ಆದಿತ್ಯನು ಪ್ರತಿಪಾದ್ಯನು. ಜೀವನ ಲಿಂಗಗಳಾದ ಚಕ್ಷುರ್ಮಯತ್ವಾದಿಗಳು ಶ್ರುತಗಳಾಗಿರುವುದರಿಂದ ಜೀವನಾಗಲೀ ಪ್ರತಿಪಾದ್ಯನು. ಸರ್ವೇಷು ಭೂತೇಷು ಎಂದು ಅಲ್ಪವಾದ ಸ್ಥಾನವು ಶ್ರುತವಾಗಿರುವುದರಿಂದ ಶ್ರೀ ಪರಬ್ರಹ್ಮನು ಪರವಾಗಲಾರದು. ಶ್ರೀ ಹರಿಯು ಗುಣಪರಿಪೂರ್ಣನಾದುದರಿಂದ ಸರ್ವತ್ರ ವ್ಯಾಪ್ತನೆಂದು ಹೇಳಿದೆ. ಪರಬ್ರಹ್ಮ ಸಾಧಕವಾದ ಪ್ರಮಾಣವು ಯಾವುದೂ ಇಲ್ಲ, ಎಂದರೆ–ಬ್ರಹ್ಮ ಶಬ್ದವೂ ಅಶ್ರುತತ್ವಾದಿ ಲಿಂಗಗಳೂ ಶ್ರುತಗಳಾಗಿರುವುದರಿಂದಲೂ ಸ್ಮೃತಿಸಮಾಖ್ಯೆಯಿಂದಲೂ ಸರ್ವತ್ರ ಹೇಳಲ್ಪಟ್ಟವನು ಶ್ರೀನಾರಾಯಣನೇ. ಅಣುವಾದ ಜೀವನಿಗೆ ಸರ್ವಶರೀರಸ್ಥತ್ವವು ಕೂಡಲಾರದು. ಎಂದರೆ ಇದಯುಕ್ತವು. ಶ್ರುತಿಲಿಂಗಗಳು ಈಶ್ವರನೆಂಬ ಕಲ್ಪದಲ್ಲಿ ಕೂಡುವುದಿಲ್ಲ, ಎಂದು ಪೂರ್ವ ಪಕ್ಷ ಮಾಡಿದಾಗ ಅತ್ಯರಿಂದಲೇ ಸಿದ್ಧಾಂತದಲ್ಲಿ ನಿರ್ಣಯ ಮಾಡುವುದು ಯುಕ್ತವಲ್ಲ ಏಕೆಂದರೆ ಸಮಬಲವುಳ್ಳದ್ದು ಬಾಧಕವಾಗಲಾರದು. ಎಂದರೆ—

**ಮೂ ॥ ಬಹುಲಿಂಗಸಹಿತಶ್ರುತೇರಪಿ ಸಾವಕಾಶಾಯಾಃ ನಿರವಕಾಶಶ್ರುತ್ಯಾದೀನಾಮೇವ ಬಲವತ್ತ್ವಂ । ಬಹವೋ ಹ್ಯತ್ರಾದಿತ್ಯಶಬ್ದಾಃ । ಕ್ಷಿತ್ಯಾದಿಷೂಕ್ತ್ಯಾಽಽದಿತ್ಯೇನೋಕ್ತಿರಿತ್ಯಾದಿಲಿಂಗಂ ಚ । ತಥಾಪಿ ನಿರವಕಾಶಾ ಏತಮೇವೇತ್ಯವಧಾರಣಾದಯಃ ॥೧॥**

ಅ ॥ (ಯದ್ಯಪಿ ಪೂರ್ವಪಕ್ಷ ಶ್ರುತ್ಯಾದಿಗಳು ಸಿದ್ಧಾಂತದಲ್ಲಿಯೂ ಇವೆ. ಆದರೂ ಪೂರ್ವ ಪಕ್ಷದಲ್ಲಿರತಕ್ಕವುಗಳು ಸಾವಕಾಶ (ಅರ್ಥಾಂತರವನ್ನು ಹೇಳಲಿಕ್ಕೆ ಬರುವವುಗಳು) ಗಳಾಗಿವೆ. ಸಿದ್ಧಾಂತದಲ್ಲಿರತಕ್ಕವುಗಳು ನಿರವಕಾಶಗಳು (ಅರ್ಥಾಂತರವನ್ನು ಹೇಳಲಿಕ್ಕೆ ಬಾರದಿರುವವುಗಳು) ಸಾವಕಾಶವಾದ ಬಹಳವಾದ ಲಿಂಗ ಸಹಿತವಾದ ಶ್ರುತಿಗಿಂತಲೂ ಬಹುಲಿಂಗಗಳಿಂದ ಕೂಡಿದ ಶ್ರುತಿಗಿಂತಲೂ ಪರಪಕ್ಷಾನುಪಪತ್ತಿಗಿಂತಲೂ, ನಿರವಕಾಶಗಳಾದ ಶ್ರುತಿ ಲಿಂಗ ಸಮಾಖ್ಯಾ ಪರಪಕ್ಷಾನುಪಪತ್ತಿಗಳಿಗೇನೇ ಪ್ರಾಬಲ್ಯವು. ಆದಿತ್ಯನನ್ನು ಪ್ರತಿಪಾದಿಸುವ ಶಬ್ದಗಳು 'ಯತ್ಪ್ರಾಣಮಾದಿತ್ಯೇ' 'ಸೂರ್ಯ ಆತ್ಮಾ ಜಗತಃ' 'ಚಕ್ಷುರ್ಮಿತ್ರಸ್ಯ' ಇದು ಮೊದಲಾದವುಗಳು ಬಹಳ ಇವೆ. 'ಏತಮುಕ್ಥಂ' ಇತ್ಯಾದಿಗಳಿಂದ ಭೂಮ್ಯಾದಿಗಳಲ್ಲಿದ್ದಾನೆಂದು ಹೇಳಿ "ಏತಮಾದಿತ್ಯೇ" ಆದಿತ್ಯನಲ್ಲಿದ್ದಾನೆಂದು ಹೇಳಲಿಲ್ಲ, ಇದು ಮೊದಲಾದುದು ಲಿಂಗವೂ ಇದೆ, ಆದಿ ಪದದಿಂದ ಚಕ್ಷುರ್ಮಯತ್ವ ಮೊದಲಾದ ಜೀವಲಿಂಗವು (ಹೀಗೆ ಯದ್ಯಪಿ ಪೂರ್ವಪಕ್ಷದಲ್ಲಿಯೂ ಶ್ರುತಿ ಲಿಂಗಾದಿಗಳು ಇವೆ) ಆದಾಗ್ಯೂ (ಅವು ಸಾವಕಾಶಗಳಾಗಿವೆ. ಹೇಗೆಂದರೆ ಆದಿತ್ಯಾದಿ ಶ್ರುತಿಗಳು ಅಂತಸ್ಥಾಧಿಕರಣದಲ್ಲಿ ಹೇಳಿದ ರೀತ್ಯಾ ಶ್ರೀ ವಿಷ್ಣುಪರಗಳು. ಏತಮುಕ್ಥಂ ಎಂದು ಹೇಳಿದ್ದೂ ಏತಮಾದಿತ್ಯೇ ಎಂಬುವುದಕ್ಕೂ ಉಪಲಕ್ಷಣವು. ಚಕ್ಷುರ್ಮಯತ್ವಾದಿಗಳೂ ಶ್ರೀ ಹರಿಗೇನೇ ಮುಖ್ಯವು. ಸರ್ವಗತ ವ್ಯಾಪ್ತನಾದವನಿಗೆ ಅಲ್ಪ ಸ್ಥಾನಸ್ಥಿತಿಯೂ ಯುಕ್ತವೇ. ಹೀಗೆ ಸಾವಕಾಶಗಳಾಗಿವೆ.) ಸಿದ್ಧಾಂತದಲ್ಲಿರತಕ್ಕ ಹೇತುಗಳೂ ಏತಮೇವ ಎಂದು ಅವಧಾರಣಸಹಿತಗಳಾದ ಬ್ರಹ್ಮಶಬ್ದಾದಿಗಳೂ ನಿರವಕಾಶಗಳೇ ಆಗಿವೆ. ॥ ೧ ॥

## ಅತ್ತೃತ್ವಾಧಿಕರಣ ॥ ೨ ॥

ಅವ ॥ ದೇವಮಾತೆಯಾದ ಅದಿತಿಯೇ ಅದಿತಿ ಪ್ರತಿಪಾದಕ ಶ್ರುತಿಯಿದ್ದ ಪ್ರಯುಕ್ತ ಅತ್ತೃ ಶಬ್ದ ವಾಚ್ಯಳು. ಶ್ರೀ ವಿಷ್ಣುವಿನಲ್ಲಿ ಅಸಂಭಾವಿತ ಲಿಂಗವಿದ್ದಪ್ರಯುಕ್ತ ವಿಷ್ಣುವೆಂದು ಹೇಳಕೂಡದು, ಎಂದರೆ–ಚರಾಚರ ಅತ್ತೃತ್ವ (ಸರ್ವ ಜಗತ್ಸಂಹರ್ತೃತ್ವ) ಲಿಂಗದಿಂದಲೂ ಪ್ರಕರಣದಿಂದಲೂ ಶ್ರೀವಿಷ್ಣುವೇ ಅತ್ತೃ ಶಬ್ದವಾಚ್ಯನೆಂದು ಸಿದ್ಧಾಂತ ಮಾಡಿಯದೆ. ಅದು ಅಯುಕ್ತವು. ಶ್ರುತಿ ಲಿಂಗಗಳಿಗಿಂತ ಲಿಂಗ ಪ್ರಕರಣಗಳು ದುರ್ಬಲಗಳು, ಎಂದರೆ—

ಸೂ ॥ ಸಂದಿಗ್ಧಶ್ರುತಿಲಿಂಗಾಭ್ಯಾಂ ನಿಶ್ಚಿತಲಿಂಗಪ್ರಕರಣಯೋರೇವ ಬಲವತ್ತ್ವಂ ।
ಸಂದಿಗ್ಧಾ ಶ್ರುತಿರ್ಲಿಂಗಂ ಬಾಧಿತಶಬ್ದೋಽದಿತಿತ್ವಂ ಚ ॥ ೨ ॥

ಅ ॥ ಸಾವಕಾಶಗಳಾಗಿರುವುದರಿಂದ ಶ್ರುತಿಲಿಂಗಗಳು ಸಂದಿಗ್ಧಗಳು. ನಿರವಕಾಶಗಳಾಗಿರುವುದರಿಂದ ಲಿಂಗಪ್ರಕರಣಗಳು ನಿಶ್ಚಿತಗಳು. ಆದಕಾರಣ ಸಂದಿಗ್ಧ ಶ್ರುತಿ ಲಿಂಗಗಳಿಗಿಂತ ನಿಶ್ಚಿತಗಳಾದ ಲಿಂಗಪ್ರಕರಣಗಳಿಗೇನೇ ಪ್ರಾಬಲ್ಯವು. (ಸಂದಿಗ್ಧಗಳಾದ ಶ್ರುತಿಲಿಂಗಗಳು ಯಾವವೆಂದರೆ) ಸಂದಿಗ್ಧವಾದ ಶ್ರುತಿಯು ಅದಿತಿಶಬ್ದವು. ಸಂದಿಗ್ಧವಾದ ಲಿಂಗವು ಅದಿತಿತ್ವವು. (ಹೇಗೆಂದರೆ— 'ಅದಿತಿರ್ದೇವತಾಮಯೀ' ಇತ್ಯಾದಿ ಪ್ರಯೋಗವಿದ್ದುದರಿಂದ ಅದಿತಿಶಬ್ದವು ದೇವಮಾತೆಗೆ ಪ್ರತಿಪಾದಕವಾಗುತ್ತದೆ. ಆದರೆ ಅತ್ತೀತಿ ಅದಿತಿಃ ಎಂಬ ವ್ಯುತ್ಪತ್ತಿಯಿಂದ ಮುಖ್ಯತಃ ವಿಷ್ಣು ವಾಚಕವು. ಹೀಗೆಯೇ ಅದಿತೇರದಿತಿತ್ವಂ ಅದಿತಿಯ ಧರ್ಮವು ಅದಿತಿತ್ವವು. ಯಾವುದು ಸರ್ವಾತ್ತೃತ್ವವು ಉಕ್ತವಾಗಿದೆಯೋ, ಅದೇ ಅದಿತಿತ್ವವು. (ಅದಿತಿ ಶಬ್ದ ಪ್ರವೃತ್ತಿ ನಿಮಿತ್ತವು) (ಅಂತೂ ಅದಿತಿ ಶಬ್ದವೂ ಸಂಹರ್ತೃತ್ವಲಿಂಗವೂ ಮುಖ್ಯತಃ ಶ್ರೀ ವಿಷ್ಣುವಿನಲ್ಲಿಯೇ ಕೂಡುವುದರಿಂದ ಅತ್ತೃಶಬ್ದವಾಚ್ಯನು ಶ್ರೀವಿಷ್ಣುವೇ) ॥ ೨ ॥

## ಗುಹಾಪ್ರವಿಷ್ಟತ್ವಾಧಿಕರಣ ॥ ೩ ॥

ಅ ॥ ಋತಂ ಪಿಬಂತೌ ಎಂಬ ವಾಕ್ಯದಲ್ಲಿ ಜೀವೇಶ್ವರರು ಭೋಕ್ತೃಗಳು. ಈಶ್ವರನಿಗೆ ಭೋಕ್ತೃತ್ವವಿಲ್ಲದಿದ್ದರೂ ಭೋಕ್ತನಾದ ಜೀವನ ಸಾಹಚರ್ಯದಿಂದ ಭೋಕ್ತೃತ್ವವು ಕೂಡುತ್ತದೆ. 'ಯಃ ಸೇತುಃ' ಎಂಬ ವಾಕ್ಯ ಬಲದಿಂದ ಕೇವಲ ಈಶ್ವರನನ್ನೇ ಏಕೆ ಇಟ್ಟುಕೊಳ್ಳಬಾರದೆಂದರೆ ದ್ವಿವಚನ ಶ್ರುತಿಯೂ ಕರ್ಮಫಲಭೋಗವೂ ಛಾಯಾತಪತ್ವವೂ ಶ್ರೀಹರಿಗೆ ಕೂಡಲಾರದು. ಎಂದರೆ-ಹೃದಯ ಗುಹಾಪ್ರವೇಶರೂಪವಾದಲಿಂಗದಿಂದಲೂ ಯಃ ಸೇತುಃ ಎನ್ನುವ ವಿಶೇಷಣದಿಂದಲೂ ಶ್ರೀ ಹರಿಯೇ ದ್ವಿವಚನಾಂಶವಾದ ಋತಂ ಪಿಬಂತೌ ಎಂಬ ಶ್ರುತಿಪ್ರತಿಪಾದ್ಯನು. ದ್ವಿವಚನಾಂಶವಾದ ಶ್ರುತಿಯು ಈಶ್ವರನಲ್ಲಿ ಕೂಡಲಾರದೆಂದರೆ

ಸೂ ॥ ದ್ವಿವಚನಶ್ರುತೇರಪಿ ನಿರವಕಾಶತ್ವಂ ನಾಸ್ತಿ ।
ವಿಷ್ಣೋರೇವ ದ್ವಿರೂಪತ್ವಾತ್ ॥ ೩ ॥

ಅ ॥ ದ್ವಿವಚನಾಂಶವಾದ ಶ್ರುತಿಯು ನಿರವಕಾಶವಾಗಿ ತೋರಿದರೂ ವಸ್ತುತಃ ನಿರವಕಾಶವಲ್ಲ. (ಏಕೆಂದರೆ ಜೀವೇಶ್ವರರನ್ನು ಇಟ್ಟುಕೊಳ್ಳಬೇಕೆಂಬುವುದಕ್ಕೆ ಪ್ರಬಲಯುಕ್ತಿಯಿಲ್ಲ. ಮಾತ್ರ) ಭೇದರಹಿತನಾದ ಶ್ರೀ ವಿಷ್ಣುವಿಗೇನೇ ಎರಡು ರೂಪಗಳಿವೆ. (ಆದಕಾರಣ ವಿಷ್ಣುವೆಂಬ ಅರ್ಥಕ್ಕೇನೇ ಪ್ರಾಬಲ್ಯವಿರುವುದು ಹೇಗೆಂದರೆ ದ್ವಿವಚನ ಶ್ರುತಿಯು ಇಬ್ಬರು ಎಂಬ ಅರ್ಥವನ್ನು ಪ್ರತಿಪಾದಿಸುತ್ತದೆ. ಭಿವರ್ಾ

ಸಮಂತಾತ್ ಇತ್ಯಾದಿ ಶ್ರುತಿಗಳಲ್ಲಿ ಒಬ್ಬ ಶ್ರೀ ವಿಷ್ಣುವಿಗೇನೇ ೩ ರೂಪಗಳೆಂದು ಹೇಳಿದೆ. ಅಲ್ಲದೆ ಋತಂ ಪಿಬಂತೌ ಎಂದು ದ್ವಿವಚನದಿಂದ ಆರಂಭಿಸಿ ಯಃ ಸೇತುರೀಜಾನಾನಾಂ ಎಂದು ಏಕವಚನದಿಂದ ಒಬ್ಬನೇ ಎಂದು ಅವಸಾನಿಸಿಯದೆ. ಶುಭಂ ಪಿಬತ್ಯಸೌ ನಿತ್ಯಂ ಎಂದು ಈಶ್ವರನಿಗೆ ಶುಭ ಭೋಕ್ತೃತ್ವವೂ ತೋರುತ್ತದೆ. ಅತಃ ಪಾಪಿನಾಂ ನಿತ್ಯಂ ಇತ್ಯಾದ್ಯುಕ್ತ ರೀತ್ಯಾ ಛಾಯಾತಪತ್ವವೂ ತೋರುತ್ತದೆ. ಆದಕಾರಣ ಅತ್ತಾ ಅಂತರಾತ್ಮ ಎಂಬ ೩ ಭಗವದ್ರೂಪಗಳು ಪ್ರತಿಪಾದ್ಯಗಳು) ॥ ೩ ॥

## ಅಂತರಧಿಕರಣ ॥ ೪ ॥

ಅವ ॥ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಛಾಂದೋಗ್ಯ ವಾಕ್ಯದಲ್ಲಿ ಅಕ್ಷಿಯಲ್ಲಿರತಕ್ಕವನು ಅಗ್ನಿಯೇ ಆಗಬೇಕು. ಏಕೆಂದರೆ– 'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ' ಎಂದು ಅಗ್ನಿಯೇ ಅಕ್ಷಿ ಆದಿತ್ಯರಲ್ಲಿರುವವನೆಂದು ಹೇಳಿದೆ. ಅಕ್ಷಿಗೋಳ ಆದಿತ್ಯಮಂಡಲಗಳಿಗೆ ಒಬ್ಬನು ಆಶ್ರಯನೆಂದು ಇದ್ದರೂ ಅಗ್ನಿಯನ್ನು ಇಟ್ಟುಕೊಳ್ಳಬಾರದೆನ್ನುವುದು ಯುಕ್ತವಲ್ಲ. 'ಅಥ ಹಾಗ್ನಯಃ ಸಮೂದಿರೇ' 'ಆಹವನೀಯೋಽನುಶಶಾಸ' ಇತ್ಯಾದಿ ಪ್ರಕಾರ ಬಹುಧಾ ಅಗ್ನಿ ಶ್ರುತಿಯಿದೆ. ಅಗ್ನಿ ವಿಷಯವೆಂದು ಸ್ಪಷ್ಟವಾಗಿ ತೋರುವುದರಿಂದ ಅಗ್ನ್ಯಾದಿಶ್ರುತಿಯು ಭಗವದ್ವಿಷಯಕವಾಗಲಾರದು. 'ಸೋಽಹಮಸ್ಮಿ' ಎಂಬುವ ಅರ್ಥಕ್ಕೆ ಅಧ್ಯಾಸವಿದೆ. 'ಅಪಹತೇ ಪಾಪಕೃತ್ಯಾಂ' ಇತ್ಯಾದಿ ಅರ್ಥವಾದವೂ ಇದೆ. ಸೋಽಹಮಸ್ಮಿ ಎಂದು ಹೇಳಿ ಪುನಃ 'ಸ ಏವಾಹಮಸ್ಮಿ' ಎಂದು ಸಾವಧಾರಣವಾಗಿ ಹೇಳಿದುದರಿಂದ ಪ್ರಾಣೋ ವಾ ಅಹಮಸ್ಮಿ ಎನ್ನುವುದರಂತೆ ಅಂತರ್ಯಾಮಿ ಪರವೆಂದೂ ಹೇಳಕೂಡದು. ಆದಕಾರಣ ಚಕ್ಷುರಂತಸ್ಥನು ಅಗ್ನಿಯೇ. ವಿಷ್ಣುವಲ್ಲ. ಎಂದರೆ—

**ಮೂ॥ ಸೋಽಹಮಸ್ಮಿ ಸ ಏವಾಹಮಸ್ಮೀತ್ಯಾದ್ಯಧ್ಯಾಸಾರ್ಥವಾದಸಹಿತ ಬಹುಶ್ರುತಿಭ್ಯೋಽಪಿ ನಿರವಕಾಶೋಪಪತ್ತೇರೇವ ಪ್ರಾಬಲ್ಯಂ ॥ ೪ ॥**

ಅ ॥ 'ಸೋಽಹಮಸ್ಮಿ' 'ಸ ಏವಾಹಮಸ್ಮಿ' ಇದು ಮೊದಲಾದ ಅಧ್ಯಾಸ ಅಪಹತೇ ಪಾಪಕೃತ್ಯಾಂ ಇದು ಮೊದಲಾದ ಅರ್ಥವಾದ ಇವುಗಳಿಂದ ಕೂಡಿದ ಅಥ ಹಾಗ್ನಯಃ ಇದು ಮೊದಲಾದ ಬಹು ಶ್ರುತಿಗಳಿಗಿಂತಲೂ ನಿರವಕಾಶವಾದ ಅಮೃತತ್ವ ಅಭಯತ್ವಾದಿ ರೂಪಉಪಪತ್ತಿಗೇನೇ ಪ್ರಾಬಲ್ಯವು. (ಅಂದರೆ– ಚಕ್ಷುರಂತರ್ಗತನು ಶ್ರೀ ವಿಷ್ಣುವೇ, ಅಗ್ನಿಯಲ್ಲ. ಏಕೆಂದರೆ ಏತದಮೃತಮಭಯಮೇತದ್ಬ್ರಹ್ಮ ಎಂದು ಚಕ್ಷುರಂತರ್ಗತನಿಗೆ ನಿರವಕಾಶಗಳಾದ ಅಮೃತತ್ವ ಅಭಯತ್ವಾದಿಗಳನ್ನು ಹೇಳಿದೆ. ಅವು ತ್ರಿಪಾದಸ್ಯಾಮೃತಂ ದಿವಿ ಎಂಬ ಪುರುಷ ಸೂಕ್ತದಿಂದಲೂ 'ಅಭಯಂ ತಿತೀರ್ಷತಾಂ ಪಾರಂ' ಎಂಬ ಕಾಠಕ ಶ್ರುತಿಯಿಂದಲೂ ಶ್ರೀ ವಿಷ್ಣುವಿಗೇನೇ ತೋರುತ್ತವೆ. ಮತ್ತು 'ಏತದ್ಬ್ರಹ್ಮ ಏಷ ಆತ್ಮಾ' ಎಂದು ಹೇಳಿದ ಆತ್ಮ ಬ್ರಹ್ಮಾದಿ ಶಬ್ದಗಳೂ ವ್ಯಾಪ್ತ ಶಕ್ತಿಗಳೂ ಸ್ವರೂಪ ಶಕ್ತಿ ಪೂರ್ಣಾನಂದ ಪೂರ್ಣಜ್ಞಾನಾದಿಗಳು ಇವುಗಳನ್ನೆಲ್ಲಾ ಹೇಳಿದುದರಿಂದಲೂ ಚಕ್ಷುರಂತರ್ಗತನು ಶ್ರೀ ವಿಷ್ಣುವೇ.) (ಅಂತೂ ಉಪಪತ್ತಿಯು ನಿರವಕಾಶವು. ಸೋಽಹಮಸ್ಮಿ ಇತ್ಯಾದಿಗಳು ಅಂತರ್ಯಾಮಿ ವಿವಕ್ಷಯಾ ಸಾವಕಾಶವು. ಅವಧಾರಣವು ಅಂತರ್ಯಾಮಿಗೆ ವಿಶೇಷವಿಲ್ಲವೆಂತು ಪ್ರತಿಪಾದಿಸ ತಕ್ಕುದು. ಅಧ್ಯಾಸಾದಿಗಳು ಆ ಅರ್ಥದಲ್ಲಿಯೇ ತಾತ್ಪರ್ಯೋದ್ಯೋತಕಗಳು.) ॥ ೪ ॥

## ಅಂತರ್ಯಾಮ್ಯಧಿಕರಣ ॥ ೫ ॥

ಅವ ॥ ನಿರವಕಾಶವಾದ ಅಮೃತತ್ವಾದಿ ಲಿಂಗದಿಂದ ಚಕ್ಷುರಿಂದ್ರಿಯದಲ್ಲಿರತಕ್ಕವನು ಶ್ರೀಹರಿಯೇ ಎಂದು ಪ್ರತಿಪಾದಿಸಿದರೂ ಅಂತರ್ಯಾಮಿಯಾದವನು ಶ್ರೀ ವಿಷ್ಣುವಿನಿಂದ ಭಿನ್ನನೇ ಆಗಬೇಕು. ಏಕೆಂದರೆ ಶ್ರೀವಿಷ್ಣುವಿಗೆ ಪೃಥಿವ್ಯಾದಿ ಶರೀರವು ಕೂಡಲಾರದು. ಎಂದರೆ—

**ಮೂ ॥ ಪೃಥಿವ್ಯಾದಿಶರೀರತ್ವಂ ಚ ನ ನಿರವಕಾಶಂ ।**

**ಯೌಗಿಕ ಶರೀರತ್ವೋಪಪತ್ತೇರ್ವಿಷ್ಣೋರಪಿ ॥ ೫ ॥**

ಅ ॥ ಪೃಥಿವ್ಯಾದಿ ಶರೀರವು ವಿಷ್ಣುವಿನಲ್ಲಿ ಅವಕಾಶವನ್ನು ಹೊಂದುವುದಿಲ್ಲವೆಂದಲ್ಲ. (ಹೇಗೆಂದರೆ-ಶ್ರೀ ವಿಷ್ಣುವಿಗೆ ಪಾಂಚಭೌತಿಕವಾದ ಪೃಥಿವ್ಯಾದಿಶರೀರವು ಇಲ್ಲದಿದ್ದರೂ) ಶೀರ್ಯತೇ ನಿತ್ಯಮೋ ವಾಸ್ಯಾದ್ವಿಷ್ಣೋಸ್ತು ಜಗದೀದೃಶಂ ಜಗತ್ತು ಶ್ರೀ ವಿಷ್ಣುವಿನಿಂದ ನಾಶಹೊಂದುವುದರಿಂದ ಶರೀರವೆನಿಸುತ್ತದೆ, ಎನ್ನುವ ಯೋಗವೃತ್ತಿಯಿಂದ ಪೃಥಿವ್ಯಾದಿಗಳು ಶ್ರೀವಿಷ್ಣುವಿಗೆ ಶರೀರವೆನಿಸುತ್ತವೆ. ಹೀಗೆ ವಿಷ್ಣುವಿಗೆ ಪಾಂಚಭೌತಿಕ ಶರೀರವಿಲ್ಲದಿದ್ದರೂ ಯೋಗವೃತ್ತಿಲಬ್ಧವಾದ ಶರೀರ ಶಬ್ದವಾಚ್ಯತ್ವವು ಕೂಡುತ್ತದೆ.) ॥ ೫ ॥

## ಅದೃಶ್ಯತ್ವಾಧಿಕರಣ ॥ ೬ ॥

ಅವ॥ ಅಕ್ಷರಾತ್ಸಂಭವತೀಹ ವಿಶ್ವಂ ಎನ್ನುವಲ್ಲಿ ಅಕ್ಷರ ಶಬ್ದವು ಪ್ರಧಾನಾದಿಗಳಲ್ಲಿ ರೂಢವಾದ ಪ್ರಯುಕ್ತ ಯತ್ತದದ್ರೇಶ್ಯಂ ಎಂದು ಹೇಳಿದ ಅದೃಶ್ಯತ್ವವು ಶ್ರೀವಿಷ್ಣುವಿಗೆ ಅಲ್ಲ. ಯೋಗ ವೃತ್ತಿಯಿಂದ ಅಕ್ಷರ ಶಬ್ದವು ಶ್ರೀವಿಷ್ಣುವಿನಲ್ಲಿ ಕೂಡಿದರೂ ಇಲ್ಲಿ ವಿಷ್ಣು ಪರವೆಂದು ಅಂಗೀಕರಿಸಲಾಗುವುದಿಲ್ಲ. ಏಕೆಂದರೆ-**ಅಕ್ಷರಾತ್ಪರತಃ ಪರಃ** ಎನ್ನುವ ಮೇಲಿನ ಶ್ರುತಿಯಲ್ಲಿ ಅದೃಶ್ಯತ್ವಾದಿ ಗುಣಗಳುಳ್ಳ ಜಗತ್ತಿಗೆ ಕಾರಣವಾದ ಅಕ್ಷರದಿಂದ ಉತ್ತಮೋತ್ತಮನನ್ನು ಹೇಳಿದೆ. ಶ್ರೀ ವಿಷ್ಣುವಿನಿಂದುತ್ತಮವನ್ನಂಗೀಕರಿಸಲಾಗುವುದಿಲ್ಲ. ಎಂದರೆ—

**ಮೂ ॥ ಅಕ್ಷರಾತ್ಪರತಃ ಪರಃ ಇತಿ ಶ್ರುತೇರಪಿ ನಾಕ್ಷರಾತ್ಸಂಭವತೀಹ**

**ವಿಶ್ವಮಿತ್ಯಸ್ಯಾ ನಿರವಕಾಶತ್ವಂ।ಅಕ್ಷರಾತ್ಪರತಃಪರಸ್ಯಾಪ್ಯಕ್ಷರಾಂತರತ್ವವಚನಾತ್॥೬॥**

ಅ ॥ **ಅಕ್ಷರಾತ್ಪರತಃ ಪರಃ** ಎಂಬ ಶ್ರುತಿಗಿಂತಲೂ **ಅಕ್ಷರಾತ್ಸಂಭವತೀಹ ವಿಶ್ವಂ** ಎಂಬ ಶ್ರುತಿಗೆ ನಿರವಕಾಶತ್ವವಿಲ್ಲ. (ಅಂದರೆ ಅಕ್ಷರನಿಂದ ಉತ್ತಮೋತ್ತಮನನ್ನು ಹೇಳತಕ್ಕ **ಅಕ್ಷರಾತ್ಪರತಃ ಪರಃ** ಎನ್ನುವ ಶ್ರುತಿಯು ಇದ್ದರೂ **ಅಕ್ಷರಾತ್ಸಂಭವತೀಹ ವಿಶ್ವಂ** ಅಕ್ಷರನಿಂದ ಜಗತ್ತು ಹುಟ್ಟುತ್ತದೆ, ಎನ್ನುವ ಅಕ್ಷರ ಶ್ರುತಿಯು ವಿಷ್ಣುವಿನಲ್ಲಿ ನಿರವಕಾಶವಾಗುವುದಿಲ್ಲ. (ಅಂದರೆ ಅಲ್ಲಿಯೂ ಅಕ್ಷರ ಶಬ್ದವಾಚ್ಯನು ಶ್ರೀ ವಿಷ್ಣುವೇ.) ಏಕೆಂದರೆ ಈ ಜಗತ್ಕಾರಣನಾದ ಅಕ್ಷರನಿಗೇನೇ ಮೇಲಿನ ಶ್ರುತಿಯಲ್ಲಿ ಅಕ್ಷರನಿಂದ ಉತ್ತಮೋತ್ತಮತ್ವವು ಹೇಳಲ್ಪಡುತ್ತದೆ. ಅಕ್ಷರನಿಂದ ಉತ್ತಮೋತ್ತಮತ್ವವೂ ಅಕ್ಷರತ್ವವೂ ಒಬ್ಬನಿಗೇನೇ ಕೂಡಲಾರದೆಂದರೆ) **ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ** ಇತ್ಯಾದಿಗಳಿಂದಅಕ್ಷರ ಎನಿಸಿಕೊಂಡವುಗಳು ಮೂರು ಇವೆ ಎಂದು ಹೇಳಿದುದರಿಂದ) ಅಕ್ಷರಧಿಂದುತ್ತಮೋತ್ತಮನಿಗೂ ಅಕ್ಷರಾಂತರತ್ವವು ಕೂಡುತ್ತದೆ. (ಅಂದರೆ ಮುಖ್ಯತಃ ಅಕ್ಷರ ಶಬ್ದವಾಚ್ಯನು ಶ್ರೀ ವಿಷ್ಣುವೇ.) ॥ ೬ ॥

# ವೈಶ್ವಾನರಾಧಿಕರಣ ॥ ೭ ॥

ಅ ॥ ವೈಶ್ವಾನರ ಶ್ರುತಿಯು ಶ್ರೀ ವಿಷ್ಣು ದೇವತಾ ಭೂತವಿಶೇಷಗಳಲ್ಲಿ ಸಾಧಾರಣವಾಗಿರುವುದರಿಂದ ಶ್ರೀವಿಷ್ಣುವೇ ಎಂದು ನಿರ್ಣಯಿಸಲಿಕ್ಕೆ ಕಾರಣವಿಲ್ಲದಿರುವುದರಿಂದ ಶ್ರೀವಿಷ್ಣುವೇ ಸರ್ವಶಬ್ದವಾಚ್ಯನೆಂದ ವಧಾರಣವು ಕೊಡುವುದಿಲ್ಲ ಎಂದರೆ

**ಮೂ ॥ ಶ್ರುತಿಸಾಧಾರಣ್ಯೇऽಪಿ ವಿಶೇಷ ಶ್ರುತ್ಯಾದೇರ್ನಿಶ್ಚಯಃ ।**
**ಉಭಯತ್ರ ವಿಶೇಷಶ್ರುತ್ಯಾದೌ ಪುನಃ ಸಾವಕಾಶತ್ವನಿರವಕಾಶತ್ವಬಲಾನ್ನಿಶ್ಚಯಃ॥೭॥**

ಅ ॥ ವೈಶ್ವಾನರ ಶ್ರುತಿಯು ಶ್ರೀವಿಷ್ಣುವಿನಲ್ಲಿಯೂ ಅಗ್ನ್ಯಾದಿಗಳಲ್ಲಿಯೂ ಸಾಧಾರಣವಾಗಿದ್ದಾಗ್ಯೂ ಅಶ್ಯಾನಂ ವೈಶ್ವಾನರಮುಪಾಸ್ತೇ ಎಂದು ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವಾದ ಆತ್ಮ ಪದವನ್ನು ವೈಶ್ವಾನರ ಎಂಬ ಪದದಲ್ಲಿ ವಿಶೇಷಣವಾಗಿ ಕೊಟ್ಟಿರುವುದರಿಂದಲೂ 'ಅಹಂ ವೈಶ್ವಾನರಃ' ಇತ್ಯಾದಿ ನಿರವಕಾಶಗಳಾದ ಶ್ರುತಿಸ್ಮೃತಿಗಳ ಸಮಾಖ್ಯಾ ಬಲದಿಂದಲೂ ಶ್ರೀವಿಷ್ಣುವೇ ಶ್ರುತಿವಾಚ್ಯನೆಂದು ನಿರ್ಣಯವು ಕೂಡುತ್ತದೆ. (ಹೀಗಾದರೆ 'ಅಯಮಗ್ನಿರ್ವೈಶ್ವಾನರಃ' ಇತ್ಯಾದಿ ವೈಶ್ವಾನರ ವಿದ್ಯೆಗಳಲ್ಲಿಯೂ ವೈಶ್ವಾನರ ಎಂಬ ಶಬ್ದದಲ್ಲಿ ಅಗ್ನಿ: ಎಂದು ವಿಶೇಷಣ ಕೊಟ್ಟಿರುವುದರಿಂದಲೂ ಹೋಮಾಧಿಕರಣತ್ವ ಮೊದಲಾದ ಅಗ್ನಿಧರ್ಮಗಳು ಶ್ರುತಗಳಾಗಿರುವುದರಿಂದಲೂ ಪುನಃ ಸಂಶಯವೇ ಉಂಟಾಗುವುದರಿಂದ ನಿರ್ಣಯವಾಗುವುದಿಲ್ಲ ಎಂದರೆ) ಎರಡು ಕಡೆಗಳಲ್ಲಿಯೂ ವಿಶೇಷ ಶ್ರುತ್ಯಾದಿಗಳು ಇದ್ದರೂ ಪುನಃ ಸಾವಕಾಶತ್ವ ನಿರವಕಾಶತ್ವಗಳ ಬಲದಿಂದ ನಿಶ್ಚಯವು ಆಗುತ್ತದೆ. (ಅಂದರೆ ಅಥ ಹೇಮವಾನಾಶ್ಯಾನಂ ಇತ್ಯಾದಿಗಳಿಂದ ಸರ್ವನಾಮ ಲಿಂಗಾದಿಗಳು ಶ್ರೀ ಹರಿಯಲ್ಲಿಯೇ ಇರುತ್ತವೆಂದು ಹೇಳಿದೆ. ಆದ ಕಾರಣ ಇವುಗಳು ಸಾವಕಾಶಗಳು. ಭಗವತ್ಪರವಾಗಿ ಅರ್ಥಮಾಡಲಿಕ್ಕೆ ಶಕ್ಯಗಳಾಗುತ್ತವೆ.) (ಆತ್ಮಶಬ್ದಾದಿಗಳು ಮುಖ್ಯತಃ ಶ್ರೀ ಹರಿಯಲ್ಲಿಯೇ ಇರುವವುಗಳು. ಇತರರಲ್ಲಿ ಮುಖ್ಯತಃ ಇರುವುದಿಲ್ಲ. ಆದ ಕಾರಣ ಅವುಗಳು ನಿರವಕಾಶಗಳು. ಹಾಗಾದರೆ ಆತ್ಮಾದಿ ವಿಶೇಷಣಗಳು ವ್ಯರ್ಥವೆಂದರೆ–ಉಪಾಸನಾರ್ಥವಾಗಿ ಹೇಳಿದ್ದು.)

ಇತಿ ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತೇ ಶ್ರೀಮದ್ಬ್ರಹ್ಮಸೂತ್ರವ್ಯಾಖ್ಯಾನ್ಯಾಯವಿವರಣೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೧ನೇ ಅಧ್ಯಾಯದಲ್ಲಿ ೨ನೇ ಪಾದವು ಸಮಾಪ್ತವಾಯ್ತು–

# ೩ನೇ ಪಾದ

ಅವ॥ ಅನುವ್ಯಾಖ್ಯಾನದಲ್ಲಿ ೩ನೇ ಪಾದದ ಅಧಿಕರಣ ವಿಷಯಗಳನ್ನು ಸಂಗ್ರಹಿಸಿ ಹೇಳಿರುವರು. ಲಿಂಗಂ ಸಾಧಾರಣಂ ಶಬ್ದಾ ಸ್ಥಾನಂ ಲಿಂಗಮನುಗ್ರಹಃ। ಪುನಶ್ಶಬ್ದಾ ಲಿಂಗಶಬ್ದಾ ವಿಚಾರ್ಯಾ ದ್ವಿತ್ರಿಕಾ ಇಹ॥ ೧) ರುದ್ರ ವಾಯು ವಿಷ್ಣುಗಳಲ್ಲಿ ಸಾಧಾರಣವಾದ ದ್ಯುಭ್ವಾದ್ಯಾಯತ್ವ ಲಿಂಗವೂ ೨) ಪ್ರಾಣ ವಿಷ್ಣುಗಳಲ್ಲಿ ಸಾಧಾರಣವಾದ ಭೂಮ ಶಬ್ದ, ೩) ವಿಷ್ಣು ಚೇತನ ಪ್ರಕೃತಿಗಳಲ್ಲಿ ಸಾಧಾರಣವಾದ ಅಕ್ಷರ ಶಬ್ದ, ೪) ವಿಷ್ಣು ಪ್ರಕೃತಿಗಳಲ್ಲಿ ಸಾಧಾರಣವಾದ ಸೃಷ್ಟಿ ಸ್ಥಾನವು, ೫) ವಿಷ್ಣು ಆಕಾಶ ಜೀವರಲ್ಲಿ ಸಾಧಾರಣವಾದ ಹೃತ್ಪದ್ಮಸ್ಥ ರೂಪಲಿಂಗ, ೬) ಜ್ಞಾನಿಸುಖ ವಿಷ್ಣು ಇವರಲ್ಲಿ ಸಾಧಾರಣವಾದ ಅನುಕೂಲ್ಯದಿಂದ ಗ್ರಹಣವು. ೭) ಈಶಾನ ಶಬ್ದ ೧೦) ವಜ್ರ ಶಬ್ದ, ೧೧) ಜ್ಯೋತಿಶ್ಶಬ್ದ, ೧೨) ಆಕಾಶ ಶಬ್ದ, ಇವುಗಳು, ೧೩) ಸ್ವಪ್ನಾದಿ ದರ್ಶನ ರೂಪಲಿಂಗ, ೧೪) ಬ್ರಾಹ್ಮಣ ಶಬ್ದ ಇವುಗಳು ವಿಚಾರಾರ್ಹಗಳು.

ಇದರ ಅರ್ಥವು ಸ್ವಲ್ಪ ಕಠಿಣವಾದ ಕಾರಣ ಅದನ್ನು ನ್ಯಾಯಮಾಲಾ ವಾಕ್ಯವಿವರಣ ಪ್ರಸಂಗದಿಂದ ವಿವರಿಸುತ್ತಾರೆ.

ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಎಂಬ ಪ್ರಥಮಾಧಿಕರಣ ಸಾಧಾರಣವಾದ ಲಿಂಗವು ವಿಚಾರ್ಯವೆಂದುಕ್ತವಾಗಿದೆ. ಆ ಲಿಂಗವು ಯಾವುದು? ಎಲ್ಲಿ ಹೇಗೆ ಸಾಧಾರಣವಾದುದು? ಸಾಧಾರಣವಾಗಿರುವುದಾದರೆ ಅದು ಕೇವಲ ಭಗವದ್ವಿಷಯಕವಾಗುವುದು ಹೇಗೆ? ಎಂದರೆ—

ಮೂ॥ ಹರಿಃ ಓಂ॥ ೧) ಪ್ರಾಣಾನಾಂ ಗ್ರಂಥಿರಸಿ। ರುದ್ರೋ ವೈ ಲೋಕಾಯತನಂ॥ ೨) ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ॥ ೩) ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚಾಲೋಕಾಶ್ಚಾಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ ಭವಂತೀತ್ಯಾದೇರ್ದ್ಯುಭ್ವಾದ್ಯಾಯತನತ್ವಮಜ್ಞಾನಾಂ ಸಾಧಾರಣಂ ಲಿಂಗಂ ॥೧॥

ಅ॥ (ಯಸ್ಮಿನ್ದ್ಯೌಃ ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವ ಲಿಂಗವು ವಿಚಾರ್ಯವು. ಆ ಲಿಂಗವು ರುದ್ರ ವಾಯು ವಿಷ್ಣು ಇವರಲ್ಲಿ ಸಾಧಾರಣವು. ಪ್ರಾಣಾನಾಂ ಇತ್ಯಾದಿ ವಾಕ್ಯವು ರುದ್ರಪರವೆಂದು ತೋರುತ್ತದೆ. ಹೇಗೆಂದರೆ) (೧) ಎಲೋ ರುದ್ರನೇ ನೀನು ಇಂದ್ರಿಯಾಭಿಮಾನಿ ದೇವತೆಗಳಿಗೆ ಆಶ್ರಯನಾಗಿರುತ್ತಿ. ಸಮಸ್ತ ಲೋಕಗಳಿಗೂ ಆಶ್ರಯನು. (೨) (ವಾಯುನಾ ಇತ್ಯಾದಿ ಶ್ರುತಿಯು ವಾಯುಪರವೆಂದು ತಿಳಿಯುತ್ತದೆ) ಎಲೋ ಗೌತಮರೇ ಸರ್ವ ಜಗತ್ತಿಗೆ ಆಶ್ರಯರಾದ ವಾಯು ದೇವರಿಂದಲೇ ಈ ಲೋಕವೂ ಪರಲೋಕವೂ ಸಮಸ್ತ ಭೂತಗಳೂ ಸಂಗತಗಳಾಗಿವೆ. (ಅಂದರೆ ವಾಯು ದೇವರ ಆಶ್ರಯದಿಂದಲೇ ಇರುತ್ತವೆ.) (೩) ಸರ್ವೇ ವಾ ಇತ್ಯಾದಿ ಶ್ರುತಿಯು ಶ್ರೀವಿಷ್ಣು ವಿಷಯಕವು.) ಈ ಎಲ್ಲಾ ಇಂದ್ರಿಯಗಳೂ ದೇಹವುಳ್ಳ ಜೀವರೂ ದೇವತೆಗಳೂ ಸ್ವರ್ಗಲೋಕದಲ್ಲಿರುವ ಕಲ್ಪವೃಕ್ಷ ಮೊದಲಾದ ವಸ್ತುಗಳೂ, ಭೂರಾದಿಲೋಕಗಳೂ, ಭೂರಾದಿ ಲೋಕಗಳಿಗೆ ಅಭಿಮಾನಿಗಳಾದ ದೇವತೆಗಳೂ ಭೂರಾದಿ ಲೋಕಗಳಿಂದ ಇತರಗಳಾದ ವೈಕುಂಠಾದಿ ಲೋಕಗಳೂ, ಆ ಲೋಕಗಳಲ್ಲಿರತಕ್ಕ ಮುಕ್ತರೂ, ಎಲ್ಲರೂ ಶ್ರೀ ವಿಷ್ಣುವಿನಲ್ಲಿಯೇ ಸಂಬದ್ಧರು. ಚೆನ್ನಾಗಿ ಸಂಬದ್ಧರೂ ಆಗಿರುತ್ತಾರೆ. (ಅಂದರೆ ಆತನನ್ನೇ ಆಶ್ರಯಿಸಿಕೊಂಡಿರುತ್ತಾರೆ. ಇದು ಮೊದಲಾದ ಶ್ರುತಿಗಳಿಂದ ದ್ಯುಭ್ವಾದ್ಯಾಯತನತ್ವಲಿಂಗವು ನ್ಯಾಯಾನು

ಸಂಧಾನವಿಲ್ಲದವರ ಮತರೀತ್ಯಾ ರುದ್ರಾದಿಗಳಲ್ಲಿ ಸಾಧಾರಣವು. (ಯುಕ್ತ್ಯಾದಿಗಳನ್ನನುಸಂಧಾನ ಮಾಡುವವರಿಗೆ ರುಚಂ ದ್ರಾವಯತೇ ಯಸ್ಮಾತ್ ಇತ್ಯಾದ್ಯುಕ್ತರೀತ್ಯಾ ಸರ್ವ ಶಬ್ದವೂ ಭಗವತ್ಪರವೇ ಎಂದು ಸಿದ್ಧವಾಗುವುದು. ॥ ೧ ॥

## ಭೂಮಾಧಿಕರಣ ॥ ೨ ॥

ಅವ ॥ ಭೂಮಾಧಿಕರಣದಲ್ಲಿ ನಾಮಾತ್ಮಕವಾದ ಸಾಧಾರಣ ಶಬ್ದವು ವಿಚಾರ್ಯವು.

ಮೂ ॥ ಪ್ರಾಣೋವಾ ಆಶಾಯಾ ಭೂಯಾನ್ವಿಷ್ಣುರ್ವೈ ದೇವೇಭ್ಯೋ ಭೂಯಾಂ
ಸ್ತಸ್ಮಾದ್ಭೂಯಾನ್ನಾಮೇತ್ಯಾದೇರ್ಭೂಮತಬ್ದೋಃ ಅನ್ಯೇಷಾಂ ಸಾಧಾರಣಃ ॥ ೨ ॥

ಅ ॥ ಮುಖ್ಯಪ್ರಾಣನು ಭಾರತಿಗಿಂತ ಶ್ರೇಷ್ಠನು ಎಂದುಪಕ್ರಮಿಸಿ ಭೂಮನನ್ನು ಹೇಳಿದುದರಿಂದ ಭೂಮ ಶಬ್ದವು ಪ್ರಾಣ ವಿಷಯಕವೆಂದು ತೋರುತ್ತದೆ. ವಿಷ್ಣುವೇ ದೇವತೆಗಳಿಂದ ಶ್ರೇಷ್ಠನು, ಆದಕಾರಣ ಭೂಯಾನ್ ಎಂದು ಹೆಸರು, ಇದು ಮೊದಲಾದ ಪೂರ್ಣಮದಃ ಪೂರ್ಣಮಿದಂ ಇದು ಮೊದಲಾದ ಶ್ರುತ್ಯಂತರ ಸಮಾಖ್ಯೆಯಿಂದ ವಿಷ್ಣು ವಿಷಯಕವೆಂದು ತೋರುತ್ತದೆ. ಆದಕಾರಣ ಭೂಮ ಶಬ್ದವು ನ್ಯಾಯ ವಿಮರ್ಶರಹಿತರಾದವರ ಮತರೀತಿಯಾಗಿ ಪ್ರಾಣ ವಿಷ್ಣುಗಳಲ್ಲಿ ಸಾಧಾರಣವು. (ಭೂಮ ಶಬ್ದವು ಧರ್ಮವಾಚಕವಾದ ಕಾರಣ ಧರ್ಮಿವಾಚಕವಾದ ಭೂಯಾನ್ ಎಂಬುವುದರ ಸಮಾನಾರ್ಥಕವು ಹೇಗೆ? ನಾಮಾತ್ಮಕವೂ ಹೇಗೆ ಆಗುವುದೆಂದರೆ– 'ಯೋವೈ ಭೂಮಾ ತತ್ಸುಖಂ' ಎಂಬ ಉತ್ತರ ವಾಕ್ಯಾನುಸಾರ ಧರ್ಮ ಧರ್ಮಿಗಳಿಗೆ ಅಭೇದವೆಂಬ ಅಭಿಪ್ರಾಯದಿಂದ ಹೇಳಿದ್ದೆಂದು ತಿಳಿಯಬೇಕು) ॥ ೨ ॥

## ಅಕ್ಷರಾಧಿಕರಣ ॥ ೩ ॥

ಮೂ ॥ ವಿಷ್ಣೋಶ್ಚೇತನಪ್ರಕೃತೇಶ್ಚಾವಿನಾಶಿತ್ವಸಾಮ್ಯಾದಕ್ಷರಶಬ್ದಸ್ಸಾಧಾರಣಃ ॥ ೩ ॥

ಅ ॥ (ಅವಿನಾಶಿತ್ವವು ಅಕ್ಷರ ಶಬ್ದ ಪ್ರವೃತ್ತಿ ನಿಮಿತ್ತವು. ಅಕ್ಷರ ಶಬ್ದವು ಶ್ರೀ ವಿಷ್ಣು ಚೇತನ ಪ್ರಕೃತಿಗಳಲ್ಲಿ ಪ್ರಸಿದ್ಧವೂ ಆಗಿದೆ. ಆದಕಾರಣ) ಶ್ರೀ ವಿಷ್ಣುವಿಗೂ ಲಕ್ಷ್ಮೀದೇವಿಗೂ ಅವಿನಾಶಿತ್ವವು ಸಮಾನವಾದ ಕಾರಣ ಅವರಿಬ್ಬರಲ್ಲಿಯೂ ಅಕ್ಷರ ಶಬ್ದವು ಸಾಧಾರಣವಾಗಿದೆ ॥ ೩ ॥

## ಸದಧಿಕರಣ ॥ ೪ ॥

ಮೂ ॥ ಕಾರಣತ್ವಸಾಮ್ಯಾದ್ವಿಷ್ಣೋರಚೇತನಪ್ರಕೃತೇಶ್ಚ ಸದೇವ ಸೋಮ್ಯೇತ್ಯಾದಿ
ಸೃಷ್ಟಿಸ್ಥಾನಂ ಚ ಸಾಧಾರಣಂ ॥ ॥ ೪ ॥

ಅ ॥ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿಗಳಿಂದ ಜಗತ್ತಿನ ಸೃಷ್ಟಿಗಾಗಿ ಸತ್ ಶಬ್ದ ವಾಚ್ಯವಾದುದು ಪ್ರಲಯ ಕಾಲದಲ್ಲಿ ಇತ್ತು ಎಂದು ಹೇಳಿದೆ.) ಶ್ರೀ ವಿಷ್ಣುವಿಗೂ ಅಚೇತನಪ್ರಕೃತಿಗೂ ಜಗತ್ಕಾರಣತ್ವವು ಸಮಾನವಾಗಿರುವುದರಿಂದ ಸದೇವ ಸೋಮ್ಯ ಇತ್ಯಾದಿ ಸೃಷ್ಟಿಸ್ಥಾನ (ಜಗತ್ಸೃಷ್ಟಿಗಾಗಿ ಪ್ರಲಯ ಕಾಲದಲ್ಲಿರುವಿಕೆ) ದಲ್ಲಿರತಕ್ಕ ಸತ್ ಎಂಬ ನಾಮವು ಉಭಯತ್ರ ಸಾಧಾರಣವು.




## ದಹರಾಧಿಕರಣ ॥ ೫ ॥

**ಮೂ ॥ ಲಿಂಗಂ ಹೃತ್ಪದ್ಮಸ್ಥಿತತ್ವಂ ಸಾಧಾರಣಂ ॥** ॥ ೫ ॥

ಅ ॥ ಹೃತ್ಪದ್ಮಸ್ಥಿತತ್ವರೂಪಲಿಂಗವು (ಹೃದಯದಲ್ಲಿರುವಿಕೆ) ವಿಷ್ಣು ಆಕಾಶ ಜೀವರಲ್ಲಿ ಸಾಧಾರಣವು ॥ ೫ ॥

## ಅನುಕೃತ್ಯಧಿಕರಣ ॥ ೬ ॥

ಅವ ॥ ಈ ಅಧಿಕರಣದಲ್ಲಿ ಅನುಗ್ರಹವು ಸಾಧಾರಣವಾದುದು ವಿಚಾರ್ಯವೆಂದುಕ್ತವಾಗಿದೆ. ಅದನ್ನು ವಿವರಿಸುತ್ತಾರೆ.

**ಮೂ ॥ ಕಥಂ ನು ತದ್ವಿಜಾನೀಯಾಮಿತ್ಯಾನುಕೂಲ್ಯೇನ ಗ್ರಹಣಂ ತಸ್ಯೇತಿ**
**ವಿಚಾರ್ಯಮನುಗ್ರಹಃ ॥** ॥ ೬ ॥

ಅ ॥ ಅದನ್ನು ಯಾವ ಉಪಾಯದಿಂದ ನಾನು ತಿಳಿಯುವೆನು, ಎಂದು ಜ್ಞಾನಕ್ಕಾಗಿ ಪ್ರಾರ್ಥಿತತ್ವರೂಪವಾದ ಅನುಕೂಲ್ಯೇನ ಗೃಹ್ಯಮಾಣತ್ವರೂಪವಾದ ಲಿಂಗರೂಪ ಅನುಗ್ರಹವು ಯದ್ವಿಷಯಕವು. (ಅಂದರೆ ಜ್ಞಾನಿಗಳ ಸುಖವನ್ನು ವಿಷಯೀಕರಿಸುತ್ತದೋ, ಶ್ರೀ ವಿಷ್ಣುವನ್ನು ವಿಷಯೀಕರಿಸುತ್ತದೋ) ಎಂದು ವಿಚಾರ್ಯವು ॥ ೬ ॥

ಅವ ॥ ಮೇಲಿನ ಅಧಿಕರಣಗಳಲ್ಲಿ ನಾಮಾತ್ಮಕಗಳಾದ ಸಾಧಾರಣ ಶಬ್ದಗಳು ವಿಚಾರ್ಯಗಳೆಂದು ಉಕ್ತವಾಗಿದೆ. ಅದನ್ನು ವಿವರಿಸುತ್ತಾರೆ.

**ಮೂ ॥ ಪುನಶ್ಶಬ್ದಾಃ ಈಶಾನೋ ವಜ್ರೋ ಜ್ಯೋತಿರಾಕಾಶ ಇತಿ ॥** ॥ ೭-೧೨ ॥

ಅ ॥ ಪುನಃ ವಾಮನಾಧಿಕರಣದಲ್ಲಿ ಈಶಾನ ಶಬ್ದವು, (೭) ಕಂಪನಾಧಿಕರಣದಲ್ಲಿ ವಜ್ರ ಶಬ್ದವೂ (೧೦) ಜ್ಯೋತಿರಧಿಕರಣದಲ್ಲಿ ಜ್ಯೋತಿಃ ಶಬ್ದವೂ (೧೧) ಆಕಾಶಾಧಿಕರಣದಲ್ಲಿ ಆಕಾಶ ಶಬ್ದವೂ (೧೨) ಹೀಗೆ ಈ ಶಬ್ದಗಳು ವಿಚಾರ್ಯಗಳು. (೮) (ದೇವತಾಧಿಕರಣದಲ್ಲಿ ವೇದ ವಿದ್ಯಾಧಿಕಾರವು ದೇವತೆಗಳಿಗೆ ಇದೆ ಎಂದೂ,(೯)ನೇ ಅಪಶೂದ್ರಾಧಿಕರಣದಲ್ಲಿ ಶೂದ್ರರಿಗೆ ವೇದ ವಿದ್ಯಾಧಿಕಾರವು ಇಲ್ಲವೆಂದೂ ಹೇಳಿದುದರಿಂದ ಆ ೨ ಅಧಿಕರಣಗಳಲ್ಲಿ ಸಮನ್ವಯವನ್ನು ಹೇಳದಿದ್ದುದರಿಂದ ಅವುಗಳನ್ನು ಇಲ್ಲಿ ಸೇರಿಸಲಿಲ್ಲ.)॥೭-೧೨॥

ಅವ ॥ ಸುಷುಪ್ತ್ಯಧಿಕರಣದಲ್ಲಿ ಯಾವ ಲಿಂಗವು ವಿಚಾರ್ಯವೆಂದರೆ--

**ಮೂ ॥ ಲಿಂಗಂ ಸ್ವಪ್ನಾದಿದರ್ಶನಂ ತಸ್ಯೇತಿ ॥** ॥ ೧೩ ॥

ಅ ॥ ಸ್ವಪ್ನಾದಿದರ್ಶನತ್ವರೂಪವಾದ ಲಿಂಗವು ಜೀವನಿಗೋ ಶ್ರೀವಿಷ್ಣುವಿಗೋ ಎಂದು ವಿಚಾರ್ಯವು ॥ ೧೩ ॥

**ಮೂ ॥ ತಟಸ್ಥೋ ಬ್ರಾಹ್ಮಣ ಇತಿ ॥** ॥ ೧೪ ॥

ಅ ॥ ಪತ್ಯಾದಿಶಬ್ದೇಭ್ಯಃ ಎಂಬ ಬ್ರಾಹ್ಮಣಾಧಿಕರಣದಲ್ಲಿ ನಿಶ್ಯಮಹಿಮತ್ವ ಲಿಂಗದಿಂದಲೂ, ಅಜಃ ಎಂಬ ಶ್ರುತಿಯಿಂದಲೂ, ವಿಷ್ಣು ಚತುರ್ಮುಖ ಇಬ್ಬರಲ್ಲಿ ಸಾಧಾರಣವಾದ ಬ್ರಾಹ್ಮಣ ಶಬ್ದವು ವಿಚಾರ್ಯವು ॥ ೪ ॥

ಅವ ॥ ಈ ಪಾದದ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡದಿರುವುದರಿಂದ ಪೂರ್ವಪಕ್ಷ ಸಿದ್ಧಾಂತಗಳ ಯುಕ್ತಿಗಳನ್ನು ಹೇಳಿದುದರಿಂದಲೇ ವ್ಯಾಖ್ಯಾನ ಮಾಡಿದಂತೆ ಆಯಿತೆಂದು ತಿಳಿದುಕೊಂಡು ಈ ಪಾದದ ಅಧಿಕರಣಗಳ ಪೂರ್ವಪಕ್ಷ ನ್ಯಾಯಗಳನ್ನು ಸಂಗ್ರಹಿಸಿ ಅನುವ್ಯಾಖ್ಯಾನದಲ್ಲಿ ಹೇಳಿರುವರು. ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ । ಅದೃಷ್ಟಿರನ್ಯಥಾಭಾವೋ ವಿಪರೀತ ಶ್ರುತಿಭ್ರಮಃ ॥ ಲಿಂಗಾವಕಾಶರಾಹಿತ್ಯಭ್ರಮಸ್ತ್ವಾದೃಗ್ವ್ಯಯಂ ತಥಾ । ಬಹುತ್ವಾದೃಕ್ತ್ವ ಮುಕ್ತ ಸ್ವವಿರೋಧೋಽರ್ಥಾತ್ತಥಾಗತಿಃ ॥ ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ॥ ಹೀಗೆ ಪೂರ್ವಪಕ್ಷನ್ಯಾಯಗಳುಕ್ತಗಳಾಗಿವೆ. ದ್ಯುಭ್ವಾದ್ಯಧಿಕರಣದಲ್ಲಿ ಯಸ್ಮಿನ್ ದ್ಯೌಃ ಎಂಬ ವಾಕ್ಯದಲ್ಲಿ ಹೇಳಿದ ದ್ಯುಭ್ವಾದ್ಯಾಯತನತ್ವವು ಶ್ರೀ ವಿಷ್ಣುವಿಗೋ, ರುದ್ರಾದಿಗಳಿಗೋ, ಎಂದು ಸಂಶಯವು ಬಂದರೆ—ರುದ್ರಾದಿಗಳಿಗೇನೇ ಎಂದು ಪೂರ್ವಪಕ್ಷವು. ಶ್ರೀ ವಿಷ್ಣುವಿಗೇನೇ ಎಂದು ಸಿದ್ಧಾಂತವು. ಹೇಗೆಂದರೆ—ಅದರಲ್ಲಿ ಬಾಹುಲ್ಯಂ ಲಿಂಗಶಬ್ದಾನಾಂ ಎಂದು ಹೇಳಿದ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ ೧ ॥ ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನ ಓತಂ 'ಪ್ರಾಣಾ ಓತಾಃ' ಇತ್ಯತ್ರೋಕ್ತಾನಾಂ ಲಿಂಗಾನಾಮನ್ಯತ್ರ ರುದ್ರಾದಿವಿಷಯತ್ವೇ ಶಬ್ದಬಾಹುಲ್ಯಂ (೨) ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ । ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ ಮನೋ ವೈ ರುದ್ರ ಓತಂ ಚ ಪ್ರೋತಂ ಚ ರುದ್ರೋ ವಾ ವ ಲೋಕಾಧಾರ ಇತ್ಯಾದಿಕಂ ಶಬ್ದಬಾಹುಲ್ಯಂ ॥ ೧ ॥**

ಅ ॥ (೧) ಯಾರಲ್ಲಿ ಸ್ವರ್ಗ ಪೃಥಿವೀ ಅಂತರಿಕ್ಷ ಲೋಕಗಳು ಆಶ್ರಿತಗಳಾಗಿವೆಯೋ, ಮನಸ್ಸೂ ಪ್ರಾಣಗಳೂ ಆಶ್ರಿತಗಳಾಗಿವೆಯೋ, ಇತ್ಯಾದಿ ವಿಷಯ ವಾಕ್ಯದಲ್ಲಿ ಪ್ರತಿಪಾದಿತಗಳಾದ ದ್ಯುಪೃಥಿವ್ಯಾದ್ಯಾಶ್ರಯತ್ವಾದಿ ಲಿಂಗಗಳು ಅಥವಾ ಲಿಂಗಪ್ರತಿಪಾದಕ ಶಬ್ದಗಳು ರುದ್ರಾದಿಗಳನ್ನು ವಿಷಯೀಕರಿಸುತ್ತವೆ, ಎಂದು ಸಾಧಿಸಲಿಕ್ಕೆ ಪ್ರಾಣಾನಾಂ ಇತ್ಯಾದಿ ಉದಾಹರಿಸುವ ಶ್ರುತ್ಯಂತರದಲ್ಲಿ ಅಂತಕಃ ಕೃತ್ತಿವಾಸಾಃ ಪಿನಾಕೀ ಎಂದು ಹೇಳಿದ ಲಿಂಗವೂ, ರುದ್ರಾದಿ ಶಬ್ದಗಳೂ ಇವುಗಳ ಬಾಹುಲ್ಯವು ಹೇತುವು. (೨) (ಅನ್ಯತ್ರ ಎಂದು ಹೇಳಿದ ಶ್ರುತ್ಯಂತರವನ್ನುದಾಹರಿಸುತ್ತಾರೆ) ರುದ್ರನೇ ನೀನು ಇಂದ್ರಿಯಗಳಿಗೆ ಆಧಾರನಾಗಿರುತ್ತೀ. ಅಂತಕ (ನಾಶಕ)ನಾಗಿ ನನ್ನನ್ನು ಪ್ರವೇಶಿಸದೇಇ. ರುದ್ರನು ಇಂದ್ರಿಯಗಳಿಗೆ ನಿಯಾಮಕನು, ಚರ್ಮಧಾರಿಯು, ಪಿನಾಕವೆಂಬ ಆಯುಧವನ್ನು ಧರಿಸಿರುವವನೂ ಮನೋಭಿಮಾನಿಯೂ, ಎಲ್ಲವೂ ಅವನಲ್ಲಿಯೇ ಆಶ್ರಿತವಾಗಿದೆ. ಚೆನ್ನಾಗಿ ಸಂಬದ್ಧವಾಗಿದೆ. ರುದ್ರನೇ ಸಮಸ್ತ ಲೋಕಗಳಿಗೂ ಆಧಾರನು, ಇದು ಮೊದಲಾದ ವಾಕ್ಯಗಳಲ್ಲಿ ಹೇಳಿದ ಲಿಂಗ ಶಬ್ದ ಇವುಗಳ ಆಧಿಕ್ಯವು ಹೇತುವು. (ಅಂತೂ ಅಂತಕಃ ಕೃತ್ತಿವಾಸಾಃ ಎಂದು ಹೇಳಲ್ಪಟ್ಟ ಅಂತಕತ್ವಾದಿಲಿಂಗ ರುದ್ರಮೊದಲಾದ ಶಬ್ದ ಇವುಗಳ ಆಧಿಕ್ಯವು ಹೇತುವು) ಈ (ಸಮಾಖ್ಯೆಯಿಂದ ಯಸ್ಮಿನ್ ದ್ಯೌಃ ಇತ್ಯಾದಿ ವಾಕ್ಯೋಕ್ತವಾದ ದ್ಯುಭ್ವಾದ್ಯಾಧಾರತ್ವವು ರುದ್ರಾದಿ ವಿಷಯಕವೇ ಎಂದು ಪೂರ್ವಪಕ್ಷವು.) ॥ ೧ ॥

ಅವ || ಭೂಮಾಧಿಕರಣದಲ್ಲಿ ಪ್ರಾಣೋ ವಾ ಆಶಾಯಾ ಭೂಯಾನ್ ಎನ್ನುವಲ್ಲಿ ಹೇಳಲ್ಪಟ್ಟ ಭೂಮವು, ಪ್ರಾಣೋ ವಾ ಆಶಾಯಾ ಭೂಯಾನ್ ಎಂಬ ಉಪಕ್ರಮ, ವಿಷ್ಣುರ್ವೈ ದೇವೋ ಭೂಯಾನ್ ಎಂಬ ಶ್ರುತಿ, ಇವುಗಳಿಂದ ಮುಖ್ಯವಾಯುವೋ ವಿಷ್ಣುವೋ ಎಂದು ಸಂದೇಹವು ಬಂದರೆ ಮುಖ್ಯವಾಯುವೆಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ಅನುಕ್ತಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ || ಪ್ರಾಣೋವಾ ಆಶಾಯಾ ಭೂಯಾನಿತ್ಯುಕ್ತತ್ವಾತ್ ಪ್ರಾಣಾದ್ಭೂಯಸೋಽನುಕ್ತಿಃ || ೨ ||**

ಅ || (ನಾಮ ವಾಗಾದಿಗಳಲ್ಲಿ ತಾರತಮ್ಯವನ್ನು ಆಶಾಪರ್ಯಂತ ಹೇಳಿ) ಆರತಿಗಿಂತ ಮುಖ್ಯ ಪ್ರಾಣನು ಶ್ರೇಷ್ಠನೆಂದು ಪ್ರಾಣನಿಗೆ ಉತ್ತಮತ್ವವನ್ನು ಹೇಳಿ ಪ್ರಾಣನಿಗಿಂತ ಉತ್ತಮನಾದ ಇನ್ನೊಬ್ಬನನ್ನು ಹೇಳಲಿಲ್ಲ. (ಆದಕಾರಣ ಭೂಮ ಶಬ್ದವಾಚ್ಯನು ಮುಖ್ಯ ವಾಯುವೇ) || ೨ ||

ಅಕ್ಷರಾಧಿಕರಣದಲ್ಲಿ 'ತದ್ವಾ ಏತದಕ್ಷರಂ ಗಾರ್ಗಿ' ಎಂದು ಹೇಳಲ್ಪಟ್ಟ ಅಕ್ಷರವು, (ಅಕ್ಷರ ಶಬ್ದ ಪ್ರವೃತ್ತಿ ನಿಮಿತ್ತವಾದ ಅವಿನಾಶಿತ್ವವು) ಚೇತನಪ್ರಕೃತಿ. ಶ್ರೀವಿಷ್ಣು ಇಬ್ಬರಲ್ಲಿಯೂ ಸಮವಾಗಿರುವುದರಿಂದ ಚೇತನ ಪ್ರಕೃತಿಯೋ ವಿಷ್ಣುವೋ ಎಂದು ಸಂದೇಹವು ಬಂದರೆ–ಚೇತನ ಪ್ರಕೃತಿಯೇ ಎಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ವಿರುದ್ಧತಾ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ || ಅತ್ತೇತ್ಯುಕ್ತತ್ವಾತ್ ನ ತದಶ್ನಾತಿ ಕಿಂಚನೇತಿ ವಿರುದ್ಧತಾ || ೩ ||**

ಅ || (ಈ ಅಕ್ಷರನು ಶ್ರೀವಿಷ್ಣುವೆಂದಾದರೆ ಆತನಿಗೆ) ಅತ್ತಾ ಚರಾಚರಗ್ರಹಣಾತ್ ಎಂದು ಸರ್ವಾತ್ತೃತ್ವವನ್ನು ಹೇಳಿದುದರಿಂದ, ತಿರುಗಿ ಆತನು ಯಾವುದನ್ನೂ ಉಣ್ಣುವುದಿಲ್ಲ ಎಂದು ಅನಶನವನ್ನು ಹೇಳುವುದಕ್ಕೆ ಹಿಂದೆ ಹೇಳಿದ ಸರ್ವಾತ್ತೃತ್ವದಿಂದ ವಿರೋಧವು ಬರುವುದು, ಎಂಬ ವಿರುದ್ಧತ್ವವು ಪೂರ್ವಪಕ್ಷ ಯುಕ್ತಿಯು. || ೩ ||

ಸದಧಿಕರಣದಲ್ಲಿ ಸದೇವ ಸೋಮ್ಯೇದಮಗ್ರ ಆಸೀತ್ ಇತ್ಯಾದಿ ಸೃಷ್ಟಿ ಸ್ಥಾನದಲ್ಲಿಗಳಲ್ಲಿ ಸತ್ ಶಬ್ದವಾಚ್ಯವಾದುದು ಪ್ರಧಾನ ವಿಷ್ಣು ಇಬ್ಬರಲ್ಲಿಯೂ ಕಾರಣತ್ವವು ಸಮಾನವಾಗಿರುವುದರಿಂದ ಜಡಪ್ರಕೃತಿಯೋ ಶ್ರೀವಿಷ್ಣುವೋ ಎಂದುಸಂದೇಹವು ಬಂದರೆ ಪ್ರಧಾನವೇ ಎಂದು ಪೂರ್ವಪಕ್ಷವು, ವಿಷ್ಣುವೇ ಎಂದು ಸಿದ್ಧಾಂತವು, ಅದರಲ್ಲಿ ಅದೃಷ್ಟಿಃ ಎಂಬ ನ್ಯಾಯವನ್ನು ಪೂರ್ವ ಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ || ಬಹು ಸ್ಯಾಂ ಪ್ರಜಾಯೇಯೇತ್ಯನ್ಯಸ್ಯಾನ್ಯಭಾವಾದೃಷ್ಟಿಃ || ೪ ||**

ಅ || ಬಹು ಸ್ಯಾಂ ಪ್ರಜಾಯೇಯ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಪಂಚ ರೂಪವಾಗಿ ಪರಿಣಾಮವು ಜಗತ್ತಿಗಿಂತ ಅತ್ಯಂತ ಭಿನ್ನನೆಂದು ಪ್ರಮಿತನಾದ ನಿರ್ವಿಕಾರನಾದ ಶ್ರೀವಿಷ್ಣುವಿಗೆ ಕೂಡುವುದಿಲ್ಲ. ಅಥವಾ ವಿಕಾರಿಕಾರಣನಿಂದ ಭಿನ್ನನಾದ ಶ್ರೀವಿಷ್ಣುವಿಗೆ ಪ್ರಪಂಚರೂಪವಾಗಿ ಪರಿಣಾಮವು ಕೂಡುವುದಿಲ್ಲ. ಏಕೆಂದರೆ ಒಂದು ಪದಾರ್ಥಕ್ಕೆ ಅದಕ್ಕಿಂತ ಭಿನ್ನವಾದ ವಸ್ತುವಿನ ಸ್ವಭಾವವು ಬರುವುದಿಲ್ಲವಷ್ಟೆ || ೪ ||

ದಹರಾಧಿಕರಣದಲ್ಲಿ 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ' ಇದು ಮೊದಲಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವು ಆಕಾಶಕ್ಕೋ ಶ್ರೀವಿಷ್ಣುವಿಗೋ ಎಂದು ಸಂದೇಹವು ಬಂದರೆ ಆಕಾಶಕ್ಕೇನೇ ಎಂದು ಪೂರ್ವಪಕ್ಷವು. ಶ್ರೀ ವಿಷ್ಣುವಿಗೇನೇ ಎಂದು ಸಿದ್ಧಾಂತವು. ಅದರಲ್ಲಿ ಅನ್ಯಯಾಭಾವಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ 'ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯ'ಮಿತ್ಯನೇನ 'ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ' ಇತ್ಯಸ್ಯಾನ್ವಯಾಭಾವಃ ॥ ೫ ॥

ಅ ॥ ಇದರೊಳಗೆ ಅಲ್ಪವಾದ ಆಕಾಶವಿದೆ. ಅದರೊಳಗೆ ಯಾವುದಿದೆಯೋ ಅದನ್ನು ಹುಡುಕಬೇಕು. ಎಂದು ಹುಡುಕಲಿಕ್ಕೆ ಯೋಗ್ಯವೆಂದು ಹೇಳಲ್ಪಟ್ಟ ದಹರಾಕಾಶದಲ್ಲಿದ್ದ ವಸ್ತುವು ಶ್ರೀ ವಿಷ್ಣುವೆಂದಂಗೀಕರಿಸಿದರೆ ತಸ್ಮಿನ್ಯದಂತಃ ಎನ್ನುವುದಕ್ಕೆ ಸಮಾನಾರ್ಥಕವಾದ ಕಿಂ ತದತ್ರ ವಿದ್ಯತೇ ಇದರೊಳಗೆ ಯಾವುದಿದೆ ಎಂಬ ಪ್ರಶ್ನೆಗೆ ಬ್ರಹ್ಮ ವಿದ್ಯತೇ ಪರಬ್ರಹ್ಮನು ಇದ್ದಾನೆಂದು ಉತ್ತರ ಕೊಡಬೇಕಿತ್ತು. ಹಾಗೆ ಹೇಳದೆ ಯಾವಾನ್ವಾ ಅಯಮಾಕಾಶಃ ಈ ಆಕಾಶವು ಎಷ್ಟು ಪರಿಮಾಣವುಳ್ಳದ್ದೋ ಅಷ್ಟು ಪರಿಮಾಣವುಳ್ಳದ್ದು ಹೃದಯದೊಳಗಿನ ಆಕಾಶವು ಎಂದು ಹೇಳಿದ ಪರಿಹಾರವಾಕ್ಯಕ್ಕೆ ಅನ್ವಯವಿರುವುದಿಲ್ಲ, ಎಂಬ ಅನ್ವಯಾಭಾವವೇ ಪೂರ್ವಪಕ್ಷ ಯುಕ್ತಿಯು. (ಅಂದರೆ ವಿಷ್ಣುವೆಂದು ಇಟ್ಟುಕೊಂಡರೆ ಅನ್ವಯವು ಕೂಡುವುದಿಲ್ಲ. ಆಕಾಶವೆಂದು ಇಟ್ಟುಕೊಂಡರೆ ಅನ್ವಯವು ಕೂಡುತ್ತದೆ.) ತಸ್ಮಿನ್ಯದಂತಃ ಎನ್ನುವುದರಿಂದ ಯಾವಾನ್ವಾ ಅಯಂ ಎನ್ನುವುದಕ್ಕೆ ಅನ್ವಯವು ಇಲ್ಲ, ಇಷ್ಟೇ ಹೇಳುವುದನ್ನು ಬಿಟ್ಟು 'ದಹರೋಽಸ್ಮಿನ್ನಂತರಾಕಾಶಃ' ಅಯಾವಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ ಎಂದೂ ಅಧಿಕಾಂಶವನ್ನು ಹೇಳಿದ್ದು ಪೂರ್ವಪಕ್ಷದಲ್ಲಿ ಅನ್ವಯಾಭಾವ ರೂಪದೋಷವಿಲ್ಲ ಎಂದು ತೋರಿಸುವುದಕ್ಕಾಗಿ. ಹೇಗೆಂದರೆ ದಹರೋಽಸ್ಮಿನ್ನಂತರಾಕಾಶಃ ಎಂದು ಹೇಳಿದ ಆಕಾಶವು ಸರ್ವಾಧಾರವಾದ ಪ್ರಯುಕ್ತ ಹೃತ್ಪದ್ಮಸ್ಥವೆಂದಂಗೀಕರಿಸಿದರೆ ಅನ್ವಯವು ಕೂಡುತ್ತದೆ. ಹೃದಯಾಕಾಶದಲ್ಲಿದ್ದುದನ್ನು ಉಪಾಸನಾ ಮಾಡಬೇಕೆಂದು ಹೇಳಿದಾಗ ಕಿಂ ತದತ್ರ ವಿದ್ಯತೇ ಎಂಬ ಪ್ರಶ್ನೆಗೆ ಯಾವಾನ್ವಾ ಅಯಮಾಕಾಶಃ ಎಂದು ಹಿಂದೆ ಹೇಳಿದ ಆಕಾಶವನ್ನೇ ವಿಶಿಷ್ಯ 'ಉಭೇ ಅಸ್ಮಿನ್' ಇತ್ಯಾದಿ ಪರಿಹಾರವಾಕ್ಯವು ಕೂಡುತ್ತದೆ. ಅಂತೂ ವಿಷ್ಣುವೆಂದಂಗೀಕರಿಸಿದರೆ ಅನ್ವಯವು ಕೂಡುವುದಿಲ್ಲ. ಆಕಾಶವೆಂದಂಗೀಕರಿಸಿದರೆ ಅನ್ವಯವು ಕೂಡುತ್ತದೆ. ಆದಕಾರಣ ಆಕಾಶವೇ ಹೃತ್ಪದ್ಮಸ್ಥವೆಂದಂಗೀಕರಿಸಬೇಕು. ॥ ೫ ॥

ಅನುಕೃತ್ಯಧಿಕರಣದಲ್ಲಿ ಕಥಂನು ತದ್ವಿಜಾನೀಯಾಂ ಅದನ್ನು ಹೇಗೆ ತಿಳಿದೇನು? ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ [illegible] ಗೃಹ್ಯಮಾಣತ್ವವು ಜ್ಞಾನಿಸುಖ ವಿಷ್ಣು ಇಬ್ಬರಲ್ಲಿಯೂ ಸುಖ ಶಬ್ದವು ಸಾಧಾರಣವಾಗಿರುವುದರಿಂದ ಜ್ಞಾನಿ ಸುಖಕ್ಕೋ, ಶ್ರೀ ವಿಷ್ಣುವಿಗೋ ಎಂದು ಸಂಶಯವು ಬಂದರೆ ಜ್ಞಾನಿ ಸುಖಕ್ಕೇನೇ ಎಂದು ಪೂರ್ವಪಕ್ಷವು. ಶ್ರೀವಿಷ್ಣುವಿಗೇನೇ ಎಂದು ಸಿದ್ಧಾಂತವು. ಅದರಲ್ಲಿ ವಿಪರೀತ ಶ್ರುತಿಭ್ರಮಃ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ—

ಮೂ ॥ 'ತದೇತದಿತಿ ಮನ್ಯಂತೇ' 'ಕಥಂ ನು ತದ್ವಿಜಾನೀಯಾಮಿ'ತಿ 'ತೇಷಾಂ ಸುಖಂ ಶಾಶ್ವತಂ ನೇತರೇಷಾ'ಮಿತ್ಯುಕ್ತಜ್ಞಾನಿಸುಖಗ್ರಹಣಮಿತಿ ವಿಪರೀತಶ್ರುತಿ ಭ್ರಮಃ ॥ ೬ ॥

ಅ ॥ ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ ಆ ಇದನ್ನು ಪರಮ ಸುಖರೂಪವನ್ನಾಗಿ ತಿಳಿಯುತ್ತಾರೆ. ಎಂಬಲ್ಲಿ ತತ್, ಏತತ್ ಎಂಬ ಶಬ್ದಗಳಿಂದಲೂ, ಕಥಂನು ತದ್ವಿಜಾನೀಯಾಂ ಅದನ್ನು ಹೇಗೆ ತಿಳಿಯುವೆನು, ಎಂಬಲ್ಲಿದ್ದ ತತ್ ಶಬ್ದದಿಂದಲೂ ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ= ಸರ್ವ ಸ್ವತಂತ್ರನೂ ಸರ್ವರನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವವನೂ ಸಮಸ್ತ ಪ್ರಾಣಿಗಳಿಗೆ ಅಂತರ್ಯಾಮಿಯೂ, ಇಂತಹ ಯಾವ ಶ್ರೀಹರಿಯು ಒಂದೇ ರೂಪವನ್ನು

ಬಹುಪ್ರಕಾರ ಮಾಡುತ್ತಾನೋ ಅಂತಹ ಹೃದಯಾಂತರ್ಗತನಾದ ಶ್ರೀ ಹರಿಯನ್ನು ಯಾವ ಜ್ಞಾನಿಗಳು ತಿಳಿಯುತ್ತಾರೋ, ಅಂತಹವರಿಗೇನೇ ಶಾಶ್ವತವಾದ ಆನಂದವು. ಬೇರೆಯವರಿಗೆ ಇಲ್ಲ, ಎಂದು ಹೇಳಿದ ಜ್ಞಾನಿ ಸುಖವನ್ನೇ ಪರಾಮರ್ಶ ಮಾಡಿ ಕೊಳ್ಳಬೇಕು. 'ಏಕೋ ವಶೀ' ಇತ್ಯಾದಿಗಳಿಂದ ಪ್ರಕೃತನಾದ ಶ್ರೀ ವಿಷ್ಣುವನ್ನು ಪರಾಮರ್ಶಮಾಡಿಕೊಳ್ಳಕೂಡದು. ಜ್ಞಾನಿಗಳ ಸುಖವು ನಪುಂಸಕಲಿಂಗ ಸುಖಶಬ್ದದಿಂದ ಪ್ರಕೃತವಾಗಿದೆ. ಅದಕ್ಕೆ ತದೇತತ್ ಎಂಬ ಸುಖಶಬ್ದ ಸಮಾನಾಧಿಕರಣದಿಂದಲೂ'ಕಥಂನು ತದ್ವಿಜಾನಿಯಾಂ' ಎಂಬ ವಾಕ್ಯದಲ್ಲಿರುವ ತತ್ ಶಬ್ದದಿಂದಲೂ ಪರಾಮರ್ಶವು ಕೂಡುತ್ತದೆ. 'ಏಕೋ ವಶೀ' ನಿತ್ಯೋ ನಿತ್ಯಾನಾಂ' ಇತ್ಯಾದಿ ಪುಲ್ಲಿಂಗದಿಂದ ಪ್ರಕೃತನಾದ ಶ್ರೀ ಪರಮಾತ್ಮನಿಗೆ ಪರಾಮರ್ಶವು ಕೂಡುವುದಿಲ್ಲ. ಹೀಗೆ) ವಿಪರೀತ ಶ್ರುತಿಯೇ ಪೂರ್ವಪಕ್ಷಪ್ರಾಪಕವು. ಪೂರ್ವಪಕ್ಷಿಯ ಅಭಿಪ್ರಾಯವು ಭ್ರಮೆಯಾದ ಪ್ರಯುಕ್ತ ಎರಡು ಕಡೆಗಳಲ್ಲಿಯೂ ಭ್ರಮಪದ ಪ್ರಯೋಗವು) || ೮ ||

ವಾಮನಾಧಿಕರಣದಲ್ಲಿ ಈಶಾನೋ ಭೂತಭವ್ಯಸ್ಯ' ಎಂಬ ಶ್ರುತಿಯಲ್ಲಿ 'ಹೇಳಲ್ಪಟ್ಟ ಈಶಾನನು ಪ್ರೇರಕತ್ವವು ಇಬ್ಬರಲ್ಲಿಯೂ ಇದ್ದುದರಿಂದ ಮುಖ್ಯವಾಯುವೋ ವಿಷ್ಣುವೋ ಎಂದು ಸಂಶಯವು ಬಂದರೆ ಮುಖ್ಯ ವಾಯುವೇ ಎಂದು ಪೂರ್ವಪಕ್ಷವು ಶ್ರೀವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ಲಿಂಗಾವಕಾಶರಾಹಿತ್ಯಭ್ರಮಃ ಎಂಬ ಪೂರ್ವ ಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || 'ಊರ್ಧ್ವಂ ಪ್ರಾಣಮುನ್ನಯತೀ'ತ್ಯಾದಿಲಿಂಗಾನಾಂ ಪ್ರಾಣಾದನ್ಯತ್ರಾವಕಾಶ
ರಾಹಿತ್ಯಮಿತಿ ಭ್ರಮಃ । 'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ಪೃಥ
ಗೇವ ಸನ್ನಿಧತ್ತೇ' ಇತ್ಯಾದಿ ವಾಕ್ಯಾದ್ಭ್ರಮಃ || ೯ ||

ಅ || (ಈಶಾನೋ ಭೂತಭವ್ಯಸ್ಯ ಎಂಬ ವಿಷಯ ವಾಕ್ಯದ ಶೇಷರೂಪವಾದ) ಊರ್ಧ್ವಂ ಪ್ರಾಣಮುನ್ನಯತಿ ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಲಿಂಗಗಳಿಗೆ ಮುಖ್ಯಪ್ರಾಣನಿಗಿಂತ ಭಿನ್ನನಾದ ಶ್ರೀವಿಷ್ಣುವಿನಲ್ಲಿ ಅವಕಾಶವಿಲ್ಲವೆಂದು ಭ್ರಮವು. (ಈ ಭ್ರಮೆಗೆ ಯಾವುದು ಕಾರಣವೆಂದರೆ) ಏವಮೇವೈಷಃ ಇತ್ಯಾದಿ. ಹೀಗೆಯೇ ಈ ಮುಖ್ಯಪ್ರಾಣನು ಬೇರೆ ಪ್ರಾಣಗಳನ್ನು ಪ್ರತ್ಯೇಕವಾಗಿಯೇ ಇರಿಸುತ್ತಾನೆ. 'ಯೋಽಯಂ ಮಧ್ಯಮಃ ಪ್ರಾಣಃ' 'ತಂವಿದಂಗ ನಮಾಸತೇ' ಎಂಬ ವಾಕ್ಯಗಳ ಅನುಸಾರವಾಗಿ ಭ್ರಮವು. (ಏವಂಚ ಮುಖ್ಯಪ್ರಾಣನ ದೆಸೆಯಿಂದ ಭಿನ್ನನಾದ ಶ್ರೀವಿಷ್ಣುವಿನಲ್ಲಿ ಅವಕಾಶ ಇಲ್ಲದಿರುವ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗ ಸಮುದಾಯದಿಂದ ಈಶಾನನು ಮುಖ್ಯವಾಯುವೇ. (ಪೂರ್ವಪಕ್ಷಿಯ ಗ್ರಹಿಕೆಯು ಭ್ರಮೆಯಾದ ಪ್ರಯುಕ್ತ ಭ್ರಮಃ ಎಂದು ಹೇಳಿದ್ದು) || ೯ ||

ಕಂಪನಾಧಿಕರಣದಲ್ಲಿ ಮಹದ್ಭಯಂ ವಜ್ರಮುದ್ಯತಂ ಎಂಬ ಶ್ರುತ್ಯುಕ್ತವಾದ ವಜ್ರವು ಪ್ರಸಿದ್ಧಲಿಂಗ ಇವುಗಳಿಂದ ಇಂದ್ರಾಯುಧವೋ ಶ್ರೀ ವಿಷ್ಣುವೋ ಎಂದು ಸಂದೇಹವು ಬಂದರೆ ಇಂದ್ರಾಯುಧವೇ ಎಂದು ಪೂರ್ವ ಪಕ್ಷವು. ಶ್ರೀ ವಿಷ್ಣುವೇ ಎಂದು ಸಿದ್ಧಾಂತವು.ಅದರಲ್ಲಿ ತಾದೃಗ್ದ್ವಯಂ ಎಂಬ ಪೂರ್ವ ಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || ವಜ್ರಶಬ್ದ ಉದ್ಯತತ್ವಲಿಂಗಂ ಚ ತಾದೃಗ್ದ್ವಯಂ || ೧೦ ||

ಅ || ವಜ್ರ ಶಬ್ದ ಉದ್ಯತತ್ವಲಿಂಗ ಇವೆರಡೂ ತಾದೃಕ್ (ಅಂದರೆ ಇಂದ್ರಾಯುಧದಿಂದ ಭಿನ್ನನಾದ ಶ್ರೀ ಪರಮಾತ್ಮನಲ್ಲಿ ಅವಕಾಶವಿಲ್ಲದವುಗಳು) ಶ್ರುತಿಲಿಂಗಗಳು ವಿಜಾತೀಯಗಳಾದುದರಿಂದ ದ್ವಯಂ ಎಂದು ಹೇಳಿದ್ದು. (ಅಂತೂ ವಜ್ರ ಶಬ್ದ ವಾಚ್ಯವಾದುದು ಇಂದ್ರಾಯುಧವೇ) || ೧೦ ||

ಜ್ಯೋತಿರಧಿಕರಣದಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸು ಇಬ್ಬರಲ್ಲಿಯೂ ಜ್ಞಾನರೂಪತ್ವವಿದ್ದುದರಿಂದ ಜೀವನೋ ಶ್ರೀ ವಿಷ್ಣುವೋ ಎಂದು ಸಂಶಯವು ಬಂದರೆ ಜೀವನೇ ಎಂದು ಪೂರ್ವ ಪಕ್ಷವು. ಶ್ರೀ ವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ಬಹುಶಾದೃಕ್ತ್ವಂ ಎಂಬ ನ್ಯಾಯವನ್ನು ಪೂರ್ವಪಕ್ಷಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ ಆದಿತ್ಯಾದಿಜ್ಯೋತಿಷ್ಟ್ವಮುಭಯಲೋಕಸಂಚರಣಮಾದಿತ್ಯೇನೈವಾಯಂ
ಜ್ಯೋತಿಷಾಽಽಸ್ತೇ' ಇತ್ಯವಧಾರಣಮಿತ್ಯಾದೀನಾಂ ಪರಮಾತ್ಮನ್ಯವಕಾಶಾಭಾವೋ
ಬಹುಶಾದೃಕ್ತ್ವಂ ॥ ೧೧ ॥

ಅ ॥ ಕಿಂ ಜ್ಯೋತಿರಯಂ ಪುರುಷಃ ಇತ್ಯಾದಿತ್ಯಜ್ಯೋತಿಃ ಎಂದು ಹೇಳಲ್ಪಟ್ಟ ಆದಿತ್ಯಾದಿ ಜ್ಯೋತಿಷ್ಟ್ವವೂ, 'ಸ ಸಮಾನಸ್ಸನ್ನುಭೌ ಲೋಕಾವನುಸಂಚರತಿ । ಎಂದು ಹೇಳಲ್ಪಟ್ಟ ಉಭಯ ಲೋಕ ಸಂಚರಣವೂ 'ಆದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ ಆದಿತ್ಯ ಜ್ಯೋತಿಸ್ಸಿನಿಂದಲೇ ಇರುತ್ತಾನೆಂದು ಅವಧಾರಣವೂ ಇದುಮೊದಲಾದ 'ಚಂದ್ರಮಸೈವಾಯಂ ಜ್ಯೋತಿಷಾಽಽಸ್ತೇ' ಇಮಂ ಲೋಕಮತಿಕ್ರಾಮತಿ ಮೃತ್ಯೋರೂಪಾಣಿ ಸ ವಾಽಯಂ ಪುರುಷೋ ಜಾಯಮಾನಃ' ಇದು ಮೊದಲಾದ ಜೀವಲಿಂಗಗಳಿಗೆ ಶ್ರೀಪರಮಾತ್ಮನಲ್ಲಿ ಅವಕಾಶವಿಲ್ಲ ಎಂಬ ಬಹುಶಾದೃಕ್ತ್ವವೇ ಪೂರ್ವಪಕ್ಷಯುಕ್ತಿಯು (ಅಂತೂ ಜೀವನದೆಶೆಯಿಂದ ಭಿನ್ನನಾದ ಶ್ರೀವಿಷ್ಣುವಿನಲ್ಲಿ ನ ತತ್ರ ಸೂರ್ಯೋ ಭಾತಿ' ಎಂದು ಹೇಳಿದರಿಂದ ಆದಿತ್ಯಾದಿ ಜ್ಯೋತಿಷ್ಟ್ವವು ಕೂಡುವುದಿಲ್ಲ. ಉಭಯ ಲೋಕ ಸಂಚರಣವೂ ಜೀವನಿಗೆ ಕರ್ಮವಶಾತ್ ಕೂಡುತ್ತದೆ. ಈಶ್ವರನಿಗೆ ಕರ್ಮವಿಲ್ಲದಿರುವುದರಿಂದ ಕೂಡುವುದಿಲ್ಲ. ಇದು ಮೊದಲಾದ ಜೀವನದೆಶೆಯಿಂದ ಭಿನ್ನನಾದ ಶ್ರೀವಿಷ್ಣುವಿನಲ್ಲಿ ಅವಕಾಶವಿಲ್ಲದಿರುವ ಬಹುಲಿಂಗಗಳ ದೆಶೆಯಿಂದ ಜೀವನೇ ಜ್ಯೋತಿಶ್ಶಬ್ದವಾಚ್ಯನು.) ॥ ೧ ॥

ಆಕಾಶಾಧಿಕರಣದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶವು ಭೂತಾಕಾಶವೋ, ವಿಷ್ಣುವೋ ಎಂದು ಸಂಶಯವು ಬಂದರೆ ಭೂತಾಕಾಶವೇ ಎಂದು ಪೂರ್ವಪಕ್ಷವು. ಅದರಲ್ಲಿ ಉಕ್ತಸ್ಯ ವಿರೋಧಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ ವೈ ನಾಮೇತಿ ಪ್ರಸಿದ್ಧಿದ್ಯೋತಕನಿಪಾತದ್ವಯಂ ರೂಢಿತ್ಯಾಗೇನೋಕ್ತ
ಯೌಗಿಕಾರ್ಥಸ್ವೀಕಾರೇ ವಿರೋಧಿ ॥ ೧೨ ॥

ಅ ॥ ವೈ ನಾಮ ಎಂಬ ೨ ನಿಪಾತಗಳು ಆಕಾಶ ಶಬ್ದಾರ್ಥಕ್ಕೆ ಪ್ರಸಿದ್ಧಿಯನ್ನು ತೋರಿಸಿಕೊಡುತ್ತವೆ. ಆಕಾಶ ಶಬ್ದಕ್ಕೆ ಭೂತಾಕಾಶದಲ್ಲಿ ರೂಢಿಯಿರುವುದರಿಂದ ಅದನ್ನು ಬಿಟ್ಟು ಶ್ರೀ ವಿಷ್ಣುರೂಪವಾದ ಯೌಗಿಕಾರ್ಥವನ್ನು ಸ್ವೀಕಾರ ಮಾಡಿದರೆ ವೈನಾಮ ಎಂಬ ೨ ಪ್ರಸಿದ್ಧಿದ್ಯೋತಕಗಳಾದ ನಿಪಾತಗಳಿಂದ ವಿರೋಧವು ಬರುವುದು. (ಏತಂಥ ಆಕಾಶಪದಾರ್ಥವೆಂದು ಅಪ್ರಸಿದ್ಧನಾದ ಶ್ರೀವಿಷ್ಣುವನ್ನು ಇಟ್ಟುಕೊಂಡರೆ ಪ್ರಸಿದ್ಧಿದ್ಯೋತಕ ವೈನಾಮ ಎಂಬ ೨ ನಿಪಾತಗಳ ವಿರೋಧವು ಬರುವುದರಿಂದಲೂ ಭೂತಾಕಾಶವೆಂದು ಇಟ್ಟುಕೊಂಡರೆ ವಿರೋಧಬಾರದಿರುವುದರಿಂದಲೂ ಭೂತಾಕಾಶವೇ ಆಕಾಶ ಪದವಾಚ್ಯವು ॥ ೮ ॥

ಸುಷುಪ್ತ್ಯಧಿಕರಣದಲ್ಲಿ 'ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿ ದ್ರಷ್ಟೃತ್ವವು ಲೋಕಪ್ರಸಿದ್ಧ ಅಸಂಗತ್ವಲಿಂಗ ಇವುಗಳಿಂದ ಜೀವನಿಗೋ ಶ್ರೀವಿಷ್ಣುವಿಗೋ ಎಂದು ಸಂದೇಹವು ಬಂದರೆ ಜೀವನಿಗೇನೇ ಎಂದು ಪೂರ್ವಪಕ್ಷವು. ಶ್ರೀವಿಷ್ಣುವಿಗೇನೆ ಎಂದು ಸಿದ್ಧಾಂತವು. ಅದರಲ್ಲಿ ಅರ್ಥಾತ್ತ್ರಭಾಗತಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ವಾ॥ ಜೀವೇಶ್ವರಾಭೇದೇ ಈಶ್ವರೋಕ್ತಾವಪ್ಯರ್ಥಾಜ್ಜೀವ ಏವೋಚ್ಯತೇ ಇತ್ಯರ್ಥಾತ್ತ್ರಭಾಗತಿಃ ॥ ೧೩ ॥

ಅ॥ ಅಸಂಗತ್ವ ಲಿಂಗಬಲದಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಈಶ್ವರನಿಗೆ ಎಂದು ಹೇಳಕೂಡದು. ಏಕೆಂದರೆ ಅಸಂಗತ್ವ ಲಿಂಗಬಲದಿಂದ 'ಸಯತ್ತತ್ರ ಕಿಂಚಿತ್ಪಶ್ಯತಿ' ಎಂದು ಹೇಳಿದ ಸ್ವಪ್ನಾದಿದ್ರಷ್ಟೃತ್ವವು ಈಶ್ವರನಿಗೇನೇ ಎಂದು ಸಿದ್ಧಾಂತಿಯು ಹೇಳಿದರೂ ಜೀವೇಶ್ವರರಿಗೆ ಅಭೇದವಿದ್ದ ಪ್ರಯುಕ್ತ ಚೈತನ್ಯರೂಪವಾದ ಅರ್ಥವನ್ನು ವಿವಕ್ಷೆಮಾಡಿಕೊಂಡು ಅಸಂಗತ್ವಲಿಂಗದಿಂದ ಅಸಂಗೋ ಹ್ಯಯಂ ಪುರುಷಃ'ಎಂಬಶ್ರುತಿಯಲ್ಲಿ ಜೀವನೇ ಹೇಳಿಸಿಕೊಳ್ಳಲ್ಪಡುತ್ತಾನೆ. ಹೀಗೆ ಅಸಂಗತ್ವ ಸ್ವಪ್ನಾದಿ ದ್ರಷ್ಟೃತ್ವರೂಪ ಎರಡು ವಿಶೇಷಣಗಳುಅನ್ಯಥಾ ಅನುಪಪನ್ನಗಳಾಗುವುದರಿಂದ ಜೀವೇಶ್ವರರಿಗೆ ಅಭೇದವೆಂದು ತಿಳಿಯುವುದೇ ಎಂಬ ಅರ್ಥಾತ್ತ್ರಭಾಗತಿಃ ಎನ್ನುವುದೇ ಇಲ್ಲಿ ಪೂರ್ವಪಕ್ಷಯುಕ್ತಿಯು(ಅಂದರೆ ಅಸಂಗತ್ವ ಸ್ವಪ್ನಾದಿ ದ್ರಷ್ಟೃತ್ವರೂಪ ಲಿಂಗಗಳು ಅನ್ಯಥಾನುಪಪನ್ನಗಳಾಗುವುದರಿಂದ ಜೀವೇಶ್ವರರಿಗೆ ಅಭೇದವು ಸಿದ್ಧಿಸುವ ಪ್ರಯುಕ್ತ ಲೋಕಪ್ರಸಿದ್ಧ್ಯನುಸಾರವಾಗಿ 'ಸ ಯತ್ತತ್ರ ಕಿಂಚಿತ್ಪಶ್ಯತಿ' ಎನ್ನುವಲ್ಲಿ ಹೇಳಿದ ಸ್ವಪ್ನಾದಿದ್ರಷ್ಟನು ಜೀವನೇ.) ॥ ೧೩ ॥

ಬ್ರಾಹ್ಮಣಾಧಿಕರಣದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣನು ಅಜಸ್ರ ನಿತ್ಯಮಹಿಮತ್ವ ಲಿಂಗ ಇವುಗಳಿಂದ ಚತುರ್ಮುಖನೋ, ಶ್ರೀವಿಷ್ಣುವೋ ಎಂದು ಸಂದೇಹವು ಬಂದರೆ ಚತುರ್ಮುಖನೇ ಎಂದು ಪೂರ್ವಪಕ್ಷವು. ಶ್ರೀವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ಅರ್ಥಾತ್ತ್ರಭಾಗತಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ವಾ॥ ಬ್ರಾಹ್ಮಣಶಬ್ದಸ್ಯ ಪಾಪಾಲೇಪಲಿಂಗಸ್ಯ ಚ ಚತುರ್ಮುಖಸ್ಯ ಪರಮಾತ್ಮನಾಭೇದಂ ವಿನಾವ್ಯವಕಾಶರಾಹಿತ್ಯಾದರ್ಥಾದಭೇದಪ್ರಾಪ್ತಿರಿತಿ ಸಮಸ್ತಮೇತತ್ ॥ ೧೪ ॥

ಅ॥ ಬ್ರಾಹ್ಮಣ ಶಬ್ದವೂ 'ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕರ್ಮಣಾ ಕನೀಯಾನ್' ಎಂದು ಪಾಪಾದ್ಯಲೇಪಲಿಂಗವೂ ಬ್ರಹ್ಮನಲ್ಲಿಯೇ ಇರುತ್ತವೆಂದು [illegible] ತ್ತದೆ. ಶ್ರೀ ವಿಷ್ಣು ಚತುರ್ಮುಖನಲ್ಲಿ ಬ್ರಹ್ಮನನ್ನು ಇಟ್ಟುಕೊಂಡರೆ ಕೂಡದಿರುವುದರಿಂದ ಚತುರ್ಮುಖನಿಗೆ ಶ್ರೀ ವಿಷ್ಣುವಿನಿಂದ ಅಭೇದ ಹೇಳದೆ ಅಜಸ್ರ ನಿತ್ಯಮಹಿಮತ್ವ ಲಿಂಗಗಳಿಗೆ ಅವಕಾಶವಿಲ್ಲದಿರುವುದರಿಂದ ಅರ್ಥಾತ್ ಅನ್ಯಥಾನುಪಪನ್ನಗಳಾಗುವುದರಿಂದ ಅಭೇದವು ಪ್ರಾಪ್ತವಾಗುತ್ತದೆ – ಈ ಪ್ರಕಾರ ಪೂರ್ವಾಧಿಕರಣದಂತೆ ಇಲ್ಲಿಯೂ ಶ್ರುತ್ಯುಕ್ತವಾದ ಅಸಂಗತ್ವ, ಸ್ವಪ್ನಾದಿ ದ್ರಷ್ಟೃತ್ವರೂಪವಿಶೇಷಣ ಉಭಯ ಪ್ರಮಾಣಾದಿಕರಣ್ಯ, ಚತುರ್ಮುಖನೇ ಎಂದು ನಿರ್ಬಂಧಕ್ಕೆ ಕಾರಣವಿರುವಿಕೆ ಇತ್ಯಾದಿಗಳೆಲ್ಲವೂ ಸಮಾನ ಅಭಿಪ್ರಾಯದಿಂದ ಸಮಸ್ತಂ ಎಂದು ಹೇಳಿದ್ದು ॥ ೧೪ ॥

ಹೀಗೆ ಪೂರ್ವಪಕ್ಷನ್ಯಾಯಗಳು ವಿವೃತಗಳಾದುವು.

## ಸಿದ್ಧಾಂತ ನ್ಯಾಯಗಳು

ಕಾ ಏವ ಬಲವತ್ಯಸ್ತು ಗತ್ಯಂತರ ವಿವರ್ಜಿತಾಃ । ಸಿದ್ಧಾಂತಯುಕ್ತಯೋ ಜ್ಞೇಯಾಃ ದೃಷ್ಟಾಂತೇ ಶಾಸ್ತ್ರ ಸರ್ವಶಃ ॥ ಎಂದನುವ್ಯಾಖ್ಯಾನದಲ್ಲಿ ಬಾಹುಲ್ಯಂ ಲಿಂಗಶಬ್ದಾದಿಕಂ ಇತ್ಯಾದಿ

ಹೇಳಲ್ಪಟ್ಟವುಗಳೇ ಬಲಿಷ್ಠಗಳಾಗಿ ನಿರವಕಾಶಗಳಾಗಿ ಸಿದ್ಧಾಂತನ್ಯಾಯಗಳೆಂದು ತಿಳಿಯುತ್ತವೆ. ಅವುಗಳಲ್ಲಿ ಬಾಹುಲ್ಯಾಂ ಲಿಂಗಶಬ್ದಾನಾಂ ಎಂದು ಹೇಳಿದ ನ್ಯಾಯವನ್ನೇ ೧ನೇ ದ್ಯುಭ್ವಾದ್ಯಧಿಕರಣಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ॥ ತೇಷಾಮೇವ ಲಿಂಗಶಬ್ದಾನಾಂ 'ಪ್ರಾಣಾನಾಂ ಗ್ರಂಥಿರಸೀ'ತ್ಯಾದೀನಾಂ ವಿಷ್ಣಾವೇ ಮುಖ್ಯ
ವೃತ್ತಿರಿತಿ ಬಲವತ್ತ್ವಂ । ತಸ್ಯ ಹಿ ರುಗ್ದ್ರಾವಣಾದಿಕರ್ತೃತ್ವಂ ಮುಖ್ಯಂ ॥ ೧ ॥

ಅ॥ ಆ ಹಿಂದೆ ಹೇಳಿದ 'ಪ್ರಾಣಾನಾಂ ಗ್ರಂಥಿರಸಿ' ಇದು ಮೊದಲಾದವುಗಳಲ್ಲಿ ಹೇಳಲ್ಪಟ್ಟ ಅಂತಕತ್ವಾದಿ ಲಿಂಗ, ರುದ್ರ ಮೊದಲಾದ ಶಬ್ದಗಳಿಗೆ ಶ್ರೀ ವಿಷ್ಣುವಿನಲ್ಲಿಯೇ ಮುಖ್ಯ ವೃತ್ತಿಯು. (ಅಂದರೆ ಶ್ರೀ ವಿಷ್ಣುವೇ ಸಮಸ್ತ ಇಂದ್ರಿಯಾಭಿಮಾನಿಗಳಿಗೂ ಮುಖ್ಯಾಶ್ರಯನು) ಆದ ಕಾರಣ ಆ ಲಿಂಗ ಶಬ್ದಗಳೇ ಪ್ರಬಲಗಳು. ಏತತ್ಕಾರದಿಂದ ಬಲಿಷ್ಠಗಳಾದ ಆತ್ಮಶಬ್ದ ಮುಕ್ತೋಪಸೃಪ್ಯತ್ವಾದಿಗಳು ಹೆಚ್ಚು ಇರುವಾಗ ಪ್ರಬಲಗಳೆಂದು ಸುತರಾಂ ಸಿದ್ಧಗಳಾಗುತ್ತವೆ. (ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯು ಹೇಗೆಂದರೆ) ಆ ಶ್ರೀ ವಿಷ್ಣುವಿಗೇನೇ ರೋಗಪರಿಹಾರಕತ್ವಾದಿ ರೂಪವಾದ ರುದ್ರಶಬ್ದಪ್ರವೃತ್ತಿನಿಮಿತ್ತವು ಮುಖ್ಯವಾದುದು. (ಶಬ್ದಗಳ ಮುಖ್ಯ ವೃತ್ತಿಯಲ್ಲಿ ಪ್ರವೃತ್ತಿ ನಿಮಿತ್ತಾತಿಶಯವು ಕಾರಣವು.) ಅಂತೂ ರುದ್ರಾದಿ ಶಬ್ದಗಳೂ ಅಂತಕತ್ವಾದಿಲಿಂಗಗಳೂ ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವಾಗಿರುವ ಕಾರಣ ಅಂತಹ ಬಲಿಷ್ಠಗಳಾದ ಉಕ್ತ ಲಿಂಗಗಳು ಬಹಳವಿದ್ದುದರಿಂದ ಶ್ರೀ ವಿಷ್ಣುವೇ ದ್ಯುಭ್ವಾದ್ಯಾಯತನನೆಂದು ಸಿದ್ಧಾಂತವು ॥ ೧ ॥

ಅನುಕ್ತಿಶ್ಚ ಎಂದು ಹೇಳಿದ ನ್ಯಾಯವನ್ನು ಭೂಮಾಧಿಕರಣ ಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ॥ ಪ್ರಾಣಸ್ಯ ವಿಷ್ಣೋಃ ಸಕಾಶಾದ್ಭೂಯಸ್ತ್ವಾನುಕ್ತಿಃ । ಚ ಶಬ್ದೇನ 'ಏಷ ತು ವಾ
ಅತಿವದತಿ ಯಃ ಸತ್ಯೇನಾತಿವದತೀ'ತಿ ಪ್ರಾಣಾದ್ವಿಷ್ಣೋರ್ಭೂಯಸ್ತ್ವೋಕ್ತಿಶ್ಚ ॥
॥ ೨ ॥

ಅ॥ ವಿಷ್ಣುವಿನ ದೆಸೆಯಿಂದ ಮುಖ್ಯ ಪ್ರಾಣನಿಗೆ ಶ್ರೈಷ್ಠ್ಯವನ್ನು ಹೇಳಲಿಲ್ಲ. (ಮತ್ತೆ ಶ್ರೀ ವಿಷ್ಣುವಿಗೇನೇ ಪೂರ್ಣಾನಂದ ಸರ್ವೋತ್ತಮತ್ವಗಳನ್ನು ಹೇಳಿದುದರಿಂದ ಭೂಮ ಶಬ್ದವಾಚ್ಯನು ಶ್ರೀವಿಷ್ಣುವೇ (ಮುಖ್ಯ ಪ್ರಾಣನಿಗೆ ವಿಷ್ಣ್ವಾದಿಸರ್ವರಿಗಿಂತಲೂ ಉತ್ತಮತ್ವವನ್ನಂಗೀಕರಿಸಿದರೆ ಎಲ್ಲಿಯಾದರೂ ಪ್ರಾಣನಿಗೆ ವಿಷ್ಣುವಿಗಿಂತ ಉತ್ತಮತ್ವವನ್ನು ಹೇಳಬೇಕಿತ್ತು, ಎಲ್ಲಿಯೂ ಹೇಳಲಿಲ್ಲ. ಎಲ್ಲಿಯೂ ಹೇಳದಿದ್ದುದನ್ನು ಅಂಗೀಕರಿಸಲುಚಿತವಲ್ಲ) (ಪೂರ್ಣಾನಂದತ್ವವು ವಿಷ್ಣುತ್ವನಿಶ್ಚಾಯಕವು ಹೇಗೆ ಆಗುವುದೆಂದರೆ) ಅನುಕ್ತಿಶ್ಚ ಎಂದು ಅನುವ್ಯಾಖ್ಯಾನದಲ್ಲಿದ್ದ ಚ ಶಬ್ದದಿಂದ ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ, ಪೂರ್ಣಾನಂದಃ ಪೂರ್ಣಭೂಃ ಪೂರ್ಣಕರ್ಮಾ, ಯತೋ ವಾಚೋ ನಿವರ್ತಂತೇ ಇತ್ಯಾದಿ ಶ್ರುತಿಗಳಲ್ಲಿಯೂ, ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ । ಅನ್ಯತ್ರಾತಿ ತೃಣಾಂಶಾಸ್ತು ವಿಷ್ಣ್ವಾನಂದಭಾಗಿನಃ । ಇತ್ಯಾದಿ ಸ್ಮೃತಿಗಳಲ್ಲಿಯೂ ಮುಖ್ಯ ಪ್ರಾಣನ ದೆಸೆಯಿಂದ ವಿಷ್ಣುವಿಗೇನೇ ಶ್ರೇಷ್ಠತ್ವವು ಹೇಳಿರುತ್ತದೆ. (ಪ್ರಾಣೋ ವಾ ಆಶಾಯಾ ಭೂಯಾನ್' ಎಂದುಶ್ರುತಿಯಲ್ಲಿ ಪ್ರಾಣ ಶಬ್ದವಿದ್ದುದರಿಂದ ಭೂಮ ಶಬ್ದವಾಚ್ಯನು ವಿಷ್ಣುವು ಹೇಗೆಂದರೆ) ವಿಷ್ಣುವಿಗೆ ಭೂಮತ್ವವನ್ನಂಗೀಕರಿಸಿದರೆ ಉಪಕ್ರಮದಲ್ಲಿದ್ದ ಪ್ರಾಣ ಶಬ್ದ ವಿರೋಧವಿಲ್ಲ. ಅದೂ ವಿಷ್ಣು ಪರವೇ ಆಗಿದೆ. ಪ್ರಾಣ ಶಬ್ದವಾಚ್ಯನಾದ ವಿಷ್ಣುವಿನ ದೆಸೆಯಿಂದ ಇನ್ನೊಬ್ಬನಿಗೆ ಶ್ರೇಷ್ಠತ್ವವನ್ನು ಹೇಳಿಲ್ಲ. ಇದ್ದರೆ ಎಲ್ಲಿಯಾದರೂ

ಹೇಳಬೇಕಿತ್ತು. ಆ ಶಬ್ದದಿಂದ ಉಪಕ್ರಮದಲ್ಲಿದ್ದ ಪ್ರಾಣ ಶಬ್ದಕ್ಕೆ ಮುಖ್ಯಪ್ರಾಣಪರತ್ವವಿದ್ದರೂ ಅತನಿಗೆ ಭೂಮತ್ವವು ಇಲ್ಲ. ಏಷ ತು ವಾ ಅತಿವದತಿ ಇತ್ಯಾದಿ ವಾಕ್ಯಶೇಷದಿಂದ ಸ್ತುತ್ಯಾದಿಗಳನ್ನು ಅಧ್ಯಾಹಾರ ಮಾಡಿಕೊಂಡು ಪ್ರಾಣನ ದೆಶೆಯಿಂದ ವಿಷ್ಣುವಿಗೆ ಶ್ರೇಷ್ಠತ್ವವು ಹೇಳಿದೆ. ಆದ ಕಾರಣ ಪೂರ್ಣಸುಖವನ್ನು ಹೇಳಿದುದರಿಂದಲೂ ಸರ್ವೋತ್ತಮತ್ವವನ್ನು ಹೇಳಿದುದರಿಂದಲೂ ಭೂಮಶಬ್ದವಾಚ್ಯನು ಶ್ರೀ ವಿಷ್ಣುವೇ. ॥ ೨ ॥

ವಿರುದ್ಧತಾ ಎಂದು ಹೇಳಿದ ನ್ಯಾಯವನ್ನೇ ಅಕ್ಷರಾಧಿಕರಣಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ (೧) ಸರ್ವಾಧಾರಪ್ರಕೃತ್ಯಾಧಾರತ್ವಂ ವಿಷ್ಣೋರನ್ಯಸ್ಯ ವಿರುದ್ಧಂ । (೨) 'ಪತಿಂ ವಿಶ್ವಸ್ಯಾತ್ಮೇಶ್ವರಂ' 'ವಿಶ್ವಾತ್ಮಾನಂ ಪರಾಯಣಮಿ'ತ್ಯಾದಿಶ್ರುತೇಃ । (೩) ಅನಶನೋಕ್ತಿಸ್ತ್ವನುಪಜೀವನಾರ್ಥತ್ವೇನೈವ ಸಾವಕಾಶಾ ॥ ೩ ॥**

ಅ ॥ (೧) ಏತದ್ವೈ ತದಕ್ಷರಂ ಗಾರ್ಗಿ ಎನ್ನುವಲ್ಲಿ ಹೇಳಿದ ಅಕ್ಷರನು ಬ್ರಹ್ಮನೇ. 'ಯದೂರ್ಧ್ವಂ ಗಾರ್ಗಿ ದಿವೋ ಯದವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ' ಎಂದು ಆಕಾಶಾಖ್ಯ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎನ್ನುವ ಶ್ರುತಿಯಿಂದ ಅಕ್ಷರನಿಗೆ ಹೇಳಲ್ಪಡತಕ್ಕ) ಸಮಸ್ತಕ್ಕೂ ಆಧಾರ ಭೂತವಾದ ಪ್ರಕೃತಿಯ ಆಧಾರತ್ವವು ಶ್ರೀ ವಿಷ್ಣುವಿನಿಂದ ಭಿನ್ನವಾದ ಶ್ರೀತತ್ವಕ್ಕೆ ವಿರುದ್ಧವು. (೨) (ಏಕೆಂದರೆ) ಶ್ರೀ ವಿಷ್ಣುವೇ ವಿಶ್ವಸ್ಯ ಪತಿಂ = ಸಮಸ್ತ ಲೋಕಗಳನ್ನು ರಕ್ಷಿಸುವುದರಿಂದ ಸರ್ವ ಲೋಕಗಳಿಗೂ ಆಧಾರನು. ಆತ್ಮೇಶ್ವರಂ = ಲಕ್ಷ್ಮ್ಯಾದಿ ಸಮಸ್ತ ಚೇತನರಿಗೂ ನಿಯಾಮಕನಾಗಿರುವುದರಿಂದ ಅವರಿಗೆ ಆಧಾರನು. ವಿಶ್ವಾತ್ಮಾನಂ = ಸಮಸ್ತ ಲೋಕಗಳಿಗೂ ಆಧಾರನು, ಪರಾಯಣಂ = ಲಕ್ಷ್ಮ್ಯಾದಿಗಳಿಗೂ ಆಶ್ರಯನು, ಇತ್ಯಾದಿ ಶ್ರುತಿಗಳ ದೆಶೆಯಿಂದ ಶ್ರೀ ವಿಷ್ಣುವೇ ಸರ್ವಾಶ್ರಯನೆಂದು ಸಿದ್ಧಿಸುತ್ತದೆ. (೩) ಪೂರ್ವ ಪಕ್ಷಸಾಧಕವಾಗಿ ಹೇಳಿದ 'ನ ತದಶ್ನಾತಿ ಕಿಂಚನ' ಎಂಬ ಶ್ರುತ್ಯುಕ್ತವಾದ ಅನಶನೋಕ್ತಿ ರೂಪ ಯುಕ್ತಿಯಾದರೂ ಭೋಗಗಳನ್ನು ಅಪೇಕ್ಷಿಸಿಕೊಂಡು ಶ್ರೀ ಹರಿಯು ಇರುವುದಿಲ್ಲ, ಎಂಬ ಅರ್ಥವನ್ನು ಇಟ್ಟುಕೊಂಡೇ ಸಾವಕಾಶವಾಗುತ್ತದೆ. (ಅಂತೂ ವಿಷ್ಣು ವ್ಯತಿರಿಕ್ತರಿಗೆ ಸರ್ವಾಧಾರವಾದ ಪ್ರಕೃತಿಯ ಆಧಾರತ್ವವು ಸರ್ವಥಾ ವಿರುದ್ಧವಾಗಿರುವುದರಿಂದ ಶ್ರೀ ವಿಷ್ಣುವೇ ಅಕ್ಷರ ಶಬ್ದ ವಾಚ್ಯನು, ಎಂದು ಸಿದ್ಧಾಂತವು ॥ ೩ ॥

ಅದೃಷ್ಟಿಃ ಎಂದು ಹೇಳಿದ ನ್ಯಾಯವನ್ನೇ ಸದಧಿಕರಣ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.

**ಮೂ ॥ (೧) ಅಚೇತನಸ್ಯೇಕ್ಷಣಾದೃಷ್ಟೇಃ ॥ (೨) ಬಹುಭಾವಶ್ರುತಿಸ್ತ್ವನ್ಯಭಾವಂ ವಿನಾ ತತ್ಸನ್ನಿಯಾಮಕತಯಾ ಸ್ವರೂಪಬಹುತ್ವಾರ್ಥತ್ವೇನೈವ ಯುಜ್ಯತೇ ॥ ೪ ॥**

ಅ ॥ (೧) ತದೈಕ್ಷತ ಎಂದು ದರ್ಶನವು ಶ್ರುತವಾಗಿರುವುದರಿಂದ ಸದೇವ ಇತ್ಯಾದಿ ಸತ್ ಶಬ್ದವಾಚ್ಯನು ಶ್ರೀ ವಿಷ್ಣುವೇ. ವ್ಯಾಪ್ತಿ ಮಾತ್ರವು ಅಸಾಧಕವಾಗಿರುವುದರಿಂದಲೂ ಪ್ರಧಾನವು ಅಚೇತನವಾಗಿರುವುದರಿಂದಲೂ) ಅಚೇತನ (ಜಡ) ಪ್ರಕೃತಿಗೆ ಈಕ್ಷಣವು (ನೋಡುವಿಕೆ) ಕೂಡಲಾರದು. (೨) ಪೂರ್ವ ಪಕ್ಷಿಯು ಹೇಳಿದ ಬಹು ಸ್ಯಾಂ ಪ್ರಜಾಯೇಯ ಎಂದು ಬಹುರೂಪತ್ವವನ್ನು ಹೇಳುವ ಶ್ರುತಿಯಾದರೂ ಶ್ರೀ ಹರಿಗೆ ಪರಿಣಾಮ (ವಿಕಾರ) ವಿಲ್ಲದೇನೇ ವಿಕೃತಗಳಿಗೆ ಸೃಷ್ಟಗಳಾದ ಆಯಾಯ ವಸ್ತುಗಳಿಗೆ

ನಿಯಾಮಕನಾಗಿರುವ ಭಗವಂತನ ಸ್ವರೂಪಗಳಿಗೆ ಬಹುತ್ವವಿದೆ, ಎಂಬ ಅಭಿಪ್ರಾಯದಿಂದಲೇ ಕೂಡುತ್ತದೆ. ಮತ್ತು ಏವಕಾರದಿಂದ ಜೀವನಿಗೆ ವಿಕಾರವು ಕೂಡುವುದಿಲ್ಲ. ಹೀಗೆ ಸಿದ್ಧಾಂತಯುಕ್ತಿಯು ನಿರವಕಾಶವಾಗಿದೆ. (ತಥಾ ಚ ಪ್ರಧಾನವು ಜಡವಾಗಿರುವುದರಿಂದ ಈಕ್ಷಣವು ಸರ್ವಥಾ ಕೂಡುವುದಿಲ್ಲ. ಶ್ರೀವಿಷ್ಣುವಿಗೆ ಈಕ್ಷಣವು ಕೂಡುತ್ತದೆ. ಆದಕಾರಣ ವಿಷ್ಣುವೇ ಸತ್‌ಶಬ್ದವಾಚ್ಯನೆಂದು ಸಿದ್ಧಾಂತವು) ॥ ೪ ॥

ಅನ್ವಯಾಭಾವಃ ಎಂದು ಹೇಳಿದ ನ್ಯಾಯವನ್ನು ದಹರಾಧಿಕರಣ ಸಿದ್ಧಾಂತಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ ೧) ಆಕಾಶಪಕ್ಷೇ ಏವಾನ್ವಯಾಭಾವಃ ೨) ವಿಷ್ಣುಪಕ್ಷೇ ತು 'ಯೋಽನ್ವೇಷ್ಟವ್ಯೋ ಭಗವಾನ್ ತಸ್ಯಾಂತರ್ಹೃದಯೇ ಯಾವಾನ್ವಾಽಯಮಾಕಾಶಸ್ತಾವಾನಾಕಾಶಃ ತಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ ಸ ಚ ಭಗವಾನಾತ್ಮಾಪಹತಪಾಪ್ಮೇತ್ಯನ್ವಯಃ ॥ ೫ ॥**

ಅ ॥ (೧) ಆಕಾಶವೆನ್ನುವ ಪಕ್ಷದಲ್ಲಿಯೇ ಅನ್ವಯವು ಕೂಡುವುದಿಲ್ಲ. (ಹೇಗೆಂದರೆ – ದಹರಾಕಾಶದಲ್ಲಿದ್ದುದನ್ನು ಉಪಾಸನ ಮಾಡಬೇಕೆಂದು ಹೇಳೋಣ ಕಿಂತದತ್ರ ವಿದ್ಯತೇ ಇಲ್ಲಿ ಏನಿದೆ? ಎಂದು ಪ್ರಶ್ನೆ ಮಾಡಿದಾಗ ಯಾವಾನ್ವಾ ಅಯಮಾಕಾಶಃ ಇತ್ಯಾದಿಗಳಿಗೆ ಅನ್ವಯವೇ ಕೂಡುವುದಿಲ್ಲ. ದಹರಾಕಾಶದಲ್ಲಿರುವ ತಕ್ಕ ವ್ಯಾಪ್ತಾಕಾಶವನ್ನು ಹುಡುಕಬೇಕೆನ್ನುವುದು ಕೂಡಲಾರದು. ದಹರಾ (ಅಲ್ಪಾ) ಕಾಶದಲ್ಲಿ ವ್ಯಾಪ್ತವಾದ ಆಕಾಶವಿಲ್ಲವಷ್ಟೆ. ಅಲ್ಲದೆ ದಹರಾಕಾಶದಲ್ಲಿ ವ್ಯಾಪ್ತವಾದ ಆಕಾಶವಿದೆ ಎನ್ನುವುದು ಕೂಡುವುದೂ ಇಲ್ಲ. ಮತ್ತು ದಹರಾಕಾಶವನ್ನೇ ವಿಶೇಷಣವನ್ನಾಗಿಟ್ಟುಕೊಂಡು 'ಉಭೇ ಅಸ್ಮಿನ್ ದ್ಯಾವಾಪೃಥಿವೀ ಇತ್ಯಾದಿಗಳಿಂದ ಪರಿಹಾರವೆನ್ನುವುದೂ ಯುಕ್ತವಲ್ಲ. ದಹರವು (ಅಲ್ಪವು) ವ್ಯಾಪಿಸಿಕೊಂಡು ಇರುವುದರಿಂದ ವಿಶೇಷಣವೂ ಕೂಡಲಾರದು. ಪೃಥಿವ್ಯಾದಿಗಳು ಮುಖ್ಯವಾಗಿ ಉಪಾಸ್ಯಗಳೂ ಅಲ್ಲ) (೨) ವಿಷ್ಣು ಎಂದು ಇಟ್ಟುಕೊಂಡರೆ ಯಾವ ಪರಮಾತ್ಮನನ್ನು ಹುಡುಕಬೇಕೋ, ಅವನ ಹೃದಯದೊಳಗೆ ಇರುವ ಶ್ರೀ ಪರಮಾತ್ಮನು ಬಹಿಸ್ಥಿತನಾದ ಶ್ರೀ ಪರಮಾತ್ಮನು ಎಂತಹ ಗುಣಗಳುಳ್ಳವನೋ, ಎಂತಹ ಪರಿಮಾಣವುಳ್ಳವನೋ, ಅಂತಹ ಗುಣಗಳುಳ್ಳವನೂ, ಅಂತಹ ಪರಿಮಾಣವುಳ್ಳವನೇ. ಆ ಆಕಾಶಶಬ್ದವಾಚ್ಯನಾದ ಶ್ರೀ ವಿಷ್ಣುವಿನೊಳಗೆ ಸ್ವರ್ಗ ಭೂಲೋಕಾಭಿಮಾನಿ ದೇವತೆಗಳು ಆಶ್ರಿತರಾಗಿರುತ್ತಾರೆ. ಅಂತಹ ಸರ್ವಗುಣಪರಿಪೂರ್ಣನಾದ ಶ್ರೀಹರಿಯು ಪಾಪ ದುಃಖಾದಿಗಳ ಅತ್ಯಂತಾಭಾವವುಳ್ಳವನು. (ಮತ್ತು ನಾಸ್ಯ ಜರಯೈತಜ್ಜೀರ್ಯತೇ, ನ ವಧೇನಾಸ್ಯ ಹನ್ಯತೇ ಜೀವನ ವಾರ್ಧಕ್ಯಾದಿಗಳಿಂದ ಶ್ರೀಹರಿಗೆ ವಾರ್ಧಕ್ಯಾದಿಗಳು ಬರುವುದಿಲ್ಲ. ಜೀವನ ಸಂಹಾರದಿಂದ ಶ್ರೀ ಹರಿಯು ಸಂಹೃತನಾಗುವುದಿಲ್ಲ.) (ಅಂತೂ ಆಕಾಶವೆಂದು ಇಟ್ಟುಕೊಂಡರೆ ಅನ್ವಯವು ಕೂಡದಿರುವುದರಿಂದಲೂ ವಿಷ್ಣುವೆಂದು ಇಟ್ಟುಕೊಂಡರೆ ಅನ್ವಯವು ಕೂಡುವ ಪ್ರಯುಕ್ತವೂ, ಶ್ರೀ ವಿಷ್ಣುವೇ ಹೃತ್ಪದ್ಮಸ್ಥನು ಎಂದು ಸಿದ್ಧಾಂತವು. ॥ ೫ ॥

ವಿಪರೀತಶ್ರುತಿಭ್ರಮಃ ಎಂದು ಹೇಳಿದ ನ್ಯಾಯವನ್ನು ಅನುಕೃತ್ಯಧಿಕರಣ ಸಿದ್ಧಾಂತಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ ಯಜ್ಞಾಖ್ಯಾತ್ಮಕಂ ಸುಖಂ ಸ ಭಗವಾನ್ ಯದ್ಬ್ರಹ್ಮಾನಿರ್ದೇಶ್ಯಸುಖಮಿತಿ ವದಂತಿ ತದೇತತ್ತತ್ಸ್ವರೂಪಮಿತಿ ಮನ್ಯಂತೇ । ಅತಃ ಪೂರ್ವಪಾದವಿಪರೀತ್ಯೈವ ಪ್ರತೀತಿಃ । ಪೂರ್ವಪಾದೋಕ್ತಯೋಜನಾ ತು ಭ್ರಮ ಏವ ॥ ೬ ॥**

ಅ ॥ (ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ಎಂಬ ಉಪನಿಷದ್ವಾಕ್ಯದಲ್ಲಿ ತಚ್ಛಬ್ದದಿಂದ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಎಂದು ಪ್ರಕೃತನಾದ ಶ್ರೀ ವಿಷ್ಣುವಿಗೆ ಪರಾಮರ್ಶವು.) ಯಾರ ಜ್ಞಾನದಿಂದ ಜ್ಞಾನಿಗಳಿಗೆ ಶಾಶ್ವತವಾದ ಸುಖವು ಆಗುತ್ತದೋ, ಅವನೇ ಶ್ರೀಹರಿಯು. (ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ । ಎಂಬಲ್ಲಿ) ಯಾವ ಪರಬ್ರಹ್ಮನನ್ನು ಅನಿರ್ದೇಶ್ಯಸುಖವೆನ್ನುತ್ತಾರೋ, ಆ ಅನಿರ್ದೇಶ್ಯಸುಖವನ್ನು ಈ ಪ್ರಕೃತನಾದ ಶ್ರೀ ಪರಮಾತ್ಮನ ಸತ್‌ಸ್ವರೂಪವೆನ್ನುತ್ತಾರೆ. (ಹೀಗೆ ಅಂಗೀಕರಿಸದಿದ್ದರೆ ತಮೇವ ಭಾಂತಂ ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಸೂರ್ಯಾದಿ ಭಾಸಕತ್ವಾದಿ ಹೇತುಗಳು ಕೂಡಲಾರವು.) ಆದಕಾರಣ 'ತದೇತದಿತಿ ಮನ್ಯಂತೇ' ಎನ್ನುವ ಶ್ರುತಿಯು ಹಿಂದೆ ಹೇಳಿದ ಪ್ರಕಾರ ವಿಷ್ಣುವಿಷಯಕವೇ ಆಗಿರುವುದರಿಂದ, ಜ್ಞಾನಿಸುಖವೇ ಎಂಬ ಪೂರ್ವಪಕ್ಷಕ್ಕೆ ಬಾಧಕರೂಪವೇ ಆಗಿದೆ. ಪೂರ್ವಪಕ್ಷದಲ್ಲಿ ಹೇಳಿದ ಯೋಜನೆಯಾದರೂ ಭ್ರಾಂತಿಮೂಲಕವೇ. (ಆದಕಾರಣ ಆನುಕೂಲ್ಯದಿಂದ ಗೃಹ್ಯಮಾಣತ್ವವು ಶ್ರೀ ವಿಷ್ಣುವಿಗೇನೇ ಎಂದು ಸಿದ್ಧಾಂತವು) ॥ ೮ ॥

ಲಿಂಗಾವಕಾಶರಾಹಿತ್ಯಭ್ರಮಃ ಎಂದು ಹೇಳಿದ ನ್ಯಾಯವನ್ನು ವಾಮನಾಧಿಕರಣಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.

**ಮೂ ॥ (೧) ಲಿಂಗಾನಾಂ ಪರಮಾತ್ಮನ್ಯವಕಾಶೋ ವಿದ್ಯತ ಏವೇತಿ ತದ್ರಾಹಿತ್ಯಂ ಭ್ರಮ ಏವ ॥ (೨) ವಾಮನಶ್ರುತೇರೇವಾನವಕಾಶ ಇತಿ ಈಶಾನಶಬ್ದೋಕ್ತೋ ವಿಷ್ಣುರೇವ ॥ ೯ ॥**

ಅ ॥ (೧) ಪ್ರಾಣವ್ಯವಸ್ಥಾಪಕತ್ವ, ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳಿಗೆ ಶ್ರೀ ಪರಮಾತ್ಮನಲ್ಲಿಯೇ ಅವಕಾಶವು ಇದ್ದೇ ಇದೆ. ಅವಕಾಶವಿಲ್ಲವೆನ್ನುವ ಜ್ಞಾನವು ಭ್ರಾಂತಿ ವಿಷಯಕವೇ. (೨) ವಾಮನ ಶ್ರುತಿಗೇನೇ ವಿಷ್ಣುವಿನಿಂದ ಭಿನ್ನರಾದವರಲ್ಲಿ ಸರ್ವದೇವೋಪಾಸ್ಯತ್ವಾದಿಗಳಿಗೆ ಅವಕಾಶವಿಲ್ಲ. ಆದಕಾರಣ ವಾಮನಶ್ರುತಿಯೂ ವಿಷ್ಣುಪರವೇ. ಈಶಾನ ಶಬ್ದದಿಂದ ಹೇಳಿಸಿಕೊಳ್ಳಲ್ಪಟ್ಟವನೂ ಶ್ರೀ ವಿಷ್ಣುವೇ, ಎಂದು ಸಿದ್ಧಾಂತವು. ॥ ೯ ॥

ಶಾದ್ಯಗ್ರಹಣಂ ಎಂಬ ನ್ಯಾಯವನ್ನು ವಜ್ರಾಧಿಕರಣ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.

**ಮೂ ॥ ವಜ್ರ ಶಬ್ದಸ್ಯೋದ್ಯತತ್ವಸ್ಯ ಚ ವಿಷ್ಣಾವೇವಾವಕಾಶಃ । ಉದ್ಯಮತ್ವಮೇವೋದ್ಯತತ್ವಮಿತಿ ॥ ೧೦ ॥**

ಅ ॥ (ವರ್ಜನಾತ್ ವಜ್ರಮುಚ್ಯತೇ = ದುಷ್ಟರನ್ನು ಬಿಡುವುದರಿಂದ ವಜ್ರನೆನಿಸುತ್ತಾನೆ, ಎಂಬ ವಾಕ್ಯ ಬಲದಿಂದ) ವಜ್ರ ಶಬ್ದಕ್ಕೂ, ಉದ್ಯತತ್ವಲಿಂಗಕ್ಕೂ, ಶ್ರೀವಿಷ್ಣುವಿನಲ್ಲಿಯೇ ಅವಕಾಶವು. ವಿಷ್ಣುವಿನಿಂದ ಇತರರಲ್ಲಿ ಸರ್ವಥಾ ಅವಕಾಶವಿಲ್ಲ. ಉದ್ಯತತ್ವವೆಂದರೆ—ಉದ್ಯಮತ್ವವು. (ಅಂದರೆ ಸರ್ವಜಗತ್ಸ್ರಷ್ಟೃತ್ವವು) (ಏವಂಚ ನಿರವಕಾಶವಾದ ವಜ್ರಶಬ್ದ ಉದ್ಯತತ್ವಲಿಂಗ ಇವುಗಳಿಂದ ವಜ್ರ ಶಬ್ದ ವಾಚ್ಯನು ಶ್ರೀವಿಷ್ಣುವೇ ಎಂದು ಸಿದ್ಧಾಂತವು. ॥ ೧೦ ॥

ಬಹುತ್ವಾದ್ಯುಕ್ತ್ಯಂ ಎಂದು ಹೇಳಿದ ನ್ಯಾಯವನ್ನು ಜ್ಯೋತಿರಧಿಕರಣಸಿದ್ಧಾಂತಸಂಬಂಧಿಯಾಗಿಯೂ ವಿವರಿಸುತ್ತಾರೆ.

ಮೂ ॥ (೧) ಅಯಂ ಪುರುಷ ಇತಿ ಸಂಸಾರೀ । (೨) ಆತ್ಮಶಬ್ದೋದಿತ ಏವ ವಿಷ್ಣುಃ । (೩) ಅತಃ ಆದಿತ್ಯಾದಿಜ್ಯೋತಿಷ್ಟ್ವಂ ಸಂಸಾರಿಣ ಏವ ॥ (೪) ಆದಿತ್ಯೇನೈವೇತ್ಯವಧಾರಣಂ ಬಾಹ್ಯಜ್ಯೋತಿಃ ಪ್ರಾಧಾನ್ಯಾಪೇಕ್ಷಯೇತ್ಯಾದಿ । (೫) ಲೋಕಸಂಚರಣಂ ತು ಜೀವಮಾದಾಯ ತಸ್ಯೈವಾದುಃಖೇನ ಸ್ವಾತಂತ್ರ್ಯಾತ್ ॥ ೧೧ ॥

ಅ ॥ (೧) ಹೃದ್ಯಂತರ್ಜ್ಯೋತಿಃ ಎಂಬ ವಾಕ್ಯವು ವಿಷ್ಣುಪರವಾದರೆ 'ಆದಿತ್ಯಾದಿಜ್ಯೋತಿಃ ಸಮ್ರಾಟ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಆದಿತ್ಯಾದಿ ಜ್ಯೋತಿಷ್ಟ್ವವು ಯಾರಿಗೆ ಎಂದರೆ) ಕಿಂ ಜ್ಯೋತಿರಯಂ ಪುರುಷಃ ಎಂದು ಕೇಳಿಸಿಕೊಳ್ಳಲ್ಪಟ್ಟವನು ಸಂಸಾರಿ ಜೀವನೇ. (ಏಕೆಂದರೆ ನ ತದ್ಭಾಸಯತೇ ಸೂರ್ಯಃ ಇತ್ಯಾದಿ ಪ್ರಮಾಣಗಳಿಂದ ಮುಕ್ತನಿಗೂ ಆದಿತ್ಯಾದಿ ಜ್ಯೋತಿಷ್ಟ್ವವು ಕೂಡಲಾರದು.) (೨) (ಈ ಸಂಸಾರಿಜೀವನಿಗೆ ವಾಗಾದಿಗಳು ಶಾಂತ (ನಿರ್ವ್ಯಾಪಾರ) ಗಳಾಗುವಾಗ ಆತ್ಮೈವಾಸ್ಯ ಜ್ಯೋತಿಃ ಎಂದು ಆತ್ಮಶಬ್ದದಿಂದ ತಾನೇ ಜ್ಯೋತಿಸ್ಸು ಎಂದು ಹೇಳಲು, ಕತಮ ಆತ್ಮಾ ಎಂದು ತಿರುಗಿ ಆತ್ಮನು ಯಾರೆಂದು ಪ್ರಶ್ನಿಸುವಾಗ ಯೋಽಯಂ ವಿಜ್ಞಾನಮಯಃ ಎಂಬ ವಾಕ್ಯವು ಪ್ರವೃತ್ತವಾಗಿರುವುದರಿಂದ ಅದಕ್ಕೆ ವಿಷ್ಣುಪರತ್ವವು ಹೇಗೆಂದರೆ) ಆತ್ಮೈವಾಸ್ಯ ಜ್ಯೋತಿಃ ಎಂಬ ವಾಕ್ಯದಲ್ಲಿದ್ದ ಆತ್ಮಶಬ್ದವಾಚ್ಯನು ಶ್ರೀ ವಿಷ್ಣುವೇ. (೩) ಕಿಂಜ್ಯೋತಿರಯಂ ಪುರುಷಃ ಎಂಬಲ್ಲಿದ್ದ ಪುರುಷಶಬ್ದವಾಚ್ಯನು ಸಂಸಾರಿ ಜೀವನೇ ಆಗಿರುವುದರಿಂದ ಆದಿತ್ಯಾದಿ ಜ್ಯೋತಿಷ್ಟ್ವವು ಸಂಸಾರಿ ಜೀವನಿಗೇನೇ. (ಆತ್ಮಶಬ್ದವು ವಿಷ್ಣುಪರವಾದರೆ ವಿಷ್ಣುವಿಗೆ ಅಸ್ತಮಯಾದಿಗಳಿಲ್ಲದಿರುವುದರಿಂದ ಆ ಜ್ಯೋತಿಸ್ಸು ಜೀವನಿಗೆ ಸರ್ವದಾ ಇದ್ದ ಪ್ರಯುಕ್ತ ಆದಿತ್ಯೇನೈವ ಚಂದ್ರಮಸೈವ ಎಂಬ ಅವಧಾರಣವು ಹೇಗೆ ಕೂಡುತ್ತದೆಂದರೆ) ಆದಿತ್ಯೇನೈವ ಇತ್ಯಾದಿ ಅವಧಾರಣವು ಬಾಹ್ಯ ಜ್ಯೋತಿಸ್ಸುಗಳಲ್ಲಿ ಆದಿತ್ಯನಿಗೆ ಪ್ರಾಧಾನ್ಯವನ್ನು ಇಟ್ಟುಕೊಂಡು ಹೇಳಿದ್ದು. ಇತ್ಯಾದಿ (೫) ಕರ್ಮ ಮರಣಾದಿರಹಿತನಾದ ಶ್ರೀ ವಿಷ್ಣುವಿಗೆ ಕರ್ಮನಿಬಂಧನವಾದ ಉಭಯ ಲೋಕ ಸಂಚಾರ, ಮೃತ್ಯು ರೂಪ ದರ್ಶನಾದಿಗಳು ಹೇಗೆ ಕೂಡುತ್ತವೆ ಎಂದರೆ) ಜೀವನನ್ನು ಹಿಡಿದುಕೊಂಡು ಉಭಯ ಲೋಕ ಸಂಚಾರವಾದರೂ ಶ್ರೀ ಹರಿಗೇನೇ ಸರ್ವಸ್ವಾತಂತ್ರ್ಯವಿದ್ದುದರಿಂದ ದುಃಖ ಲೇಶವಿಲ್ಲದೇನೇ ಕೂಡುತ್ತವೆ. (ಅಂತೂ ಉಭಯ ಲೋಕ ಸಂಚಾರಮೊದಲಾದ ಅನೇಕಲಿಂಗಗಳು ವಿಷ್ಣುವಿನಿಂದ ಇತರರಲ್ಲಿ ಅವಕಾಶವನ್ನು ಹೊಂದದೆ ಇದ್ದುದರಿಂದ ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನೆಂದು ಸಿದ್ಧಾಂತವು. ॥ ೧೧ ॥

ಉಕ್ತಸ್ಯ ವಿರೋಧಃ ಎಂದು ಹೇಳಿದ ನ್ಯಾಯವನ್ನು ಆಕಾಶಾಧಿಕರಣ ಸಿದ್ಧಾಂತಸಂಬಂಧಿಯಾಗಿಯೂ ವಿವರಿಸುತ್ತಾ ಪೂರ್ವಪಕ್ಷನ್ಯಾಯಕ್ಕೆ ಸಾವಕಾಶತ್ವವನ್ನು ಹೇಳುತ್ತಾರೆ.

ಮೂ ॥ (೧) ವೈ ನಾಮೇತಿ ನಿರ್ವಹಿತೃತ್ವೇ ಶ್ರುತ್ಯಾದಿಪ್ರಸಿದ್ಧಿಬಾಹುಲ್ಯಂ । (೨) ಪ್ರಸಿದ್ಧಾಕಾಶಸ್ಯೋಕ್ತಮನಾಮರೂಪತ್ವಂ ವಿರುದ್ಧಂ ॥ ೧೨ ॥

ಅ ॥ ವೈನಾಮ ಎನ್ನುವ ೨ ನಿಪಾತಗಳು ಶ್ರೀ ವಿಷ್ಣುವು ನಾಮ ರೂಪಗಳನ್ನು ನಿರ್ವಹಿಸುತ್ತಾನೆನ್ನುವಲ್ಲಿ ಲೋಕ ಪ್ರಸಿದ್ಧಿಯಿಲ್ಲದಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವಾ' ಇದು ಮೊದಲಾದ ಶ್ರುತಿಗಳ ಪ್ರಸಿದ್ಧಿಯು ಬಹುಧಾ ಉಂಟೆಂದು ತೋರಿಸುತ್ತದೆ. (೨) ಆಕಾಶೋ ವೈ ನಾಮರೂಪಯೋರ್ನಿರ್ವ

ಹಿತಾ ಎನ್ನುವಲ್ಲಿ ಆಕಾಶವನ್ನುದ್ದೇಶೀಕರಿಸಿಕೊಂಡು ನಾಮರೂಪನಿಯಾಮಕತ್ವರೂಪ ವಿಧೇಯವನ್ನು ಶ್ರುತಿಯು ಹೇಳಿದೆ. ತೈನಾಮ ಎಂಬ ೨ ನಿಪಾತಗಳು ವಿಧೇಯ ಪ್ರಸಿದ್ಧಿಯನ್ನು ಹೇಳುತ್ತವೆ. ಆದ ಕಾರಣ ಉದ್ದೇಶ್ಯರೂಪ ಆಕಾಶ ಶಬ್ದಕ್ಕೆ ಲೋಕಪ್ರಸಿದ್ಧಿಯನ್ನು ಬಿಟ್ಟು ಶ್ರುತಿಯಲ್ಲಿ ಹೇಳಿದ ನಾಮರೂಪ ನಿಯಾಮಕತ್ವರೂಪ ವಿಧೇಯ ಪ್ರಸಿದ್ಧಿಯನ್ನಂಗೀಕರಿಸಲಿಕ್ಕೆ ಕಾರಣವೇನು? ಎಂದರೆ) ೨ ನಿಪಾತಗಳು ಲೋಕಪ್ರಸಿದ್ಧಿಯನ್ನು ತೋರಿಸುತ್ತವೆಂದಂಗೀಕರಿಸಿಯಾದರೂ) ಪ್ರಸಿದ್ಧವಾದ ಆಕಾಶವನ್ನು ಇಟ್ಟುಕೊಂಡರೆ ತೇ ಯದಂತರಾ ತದ್ಬ್ರಹ್ಮ ಎಂದು ಹೇಳಿದ ಅನಾಮರೂಪತ್ವವು ವಿರುದ್ಧವು. (ಅಂದರೆ ನಾಮರೂಪಗಳಿಲ್ಲವೆಂದು ಹೇಳಿದ್ದು ವಿರುದ್ಧವಾಗುವುದು.) ತದ್ಬ್ರಹ್ಮ ಎಂದು ಹೇಳಿದ ಬ್ರಹ್ಮ ಶಬ್ದವಿರೋಧವೂ ಬರುವುದು.) ಏವಂಚ ನಾಮರೂಪಗಳಿವೆ ಎಂದು ಹೇಳಲ್ಪಟ್ಟ ಪ್ರಸಿದ್ಧಾಕಾಶಕ್ಕೆ ನಾಮ ರೂಪಗಳಿಲ್ಲವೆನ್ನುವುದು ವಿರುದ್ಧವಾಗುವುದು. ವಿಷ್ಣುವೆಂದು ಇಟ್ಟುಕೊಂಡರೆ ಅನಾಮಾ ಸೋಽಪ್ರಸಿದ್ಧತ್ವಾದರೂಪೋ ಭೂತವರ್ಜನಾತ್। ಎಂದು ಹೇಳಿದ ಪ್ರಕಾರ ವಿರೋಧವಿಲ್ಲದಿರುವುದರಿಂದ ವಿಷ್ಣುವೇ ಆಕಾಶಪದವಾಚ್ಯನು ಎಂದು ಸಿದ್ಧಾಂತವು. ॥ ೧೨ ॥

ಅರ್ಥಾನ್ತರ್ಥಾ ಗತಿಃ ಎಂದು ಹೇಳಿದ ನ್ಯಾಯವನ್ನು ಸುಷುಪ್ತ್ಯಧಿಕರಣ ಸಿದ್ಧಾಂತಸಂಬಂಧಿಯಾಗಿಯೂ ವಿವರಿಸುತ್ತಾರೆ.

ಮೂ ॥ ೧ ॥ ಸುಷುಪ್ತ್ಯುತ್ಕ್ರಾಂತ್ಯೋರ್ಜೀವೇಶಯೋರ್ಭೇದೋಕ್ತೇರಸಂಗಿತ್ವಾದಿ
ಚೇಶ್ವರಸ್ಯೈವೇತ್ಯರ್ಥಾದ್ಭೇದ ಏವ ಭವತಿ (೨) ಜೀವಸ್ಯ ತದಯುಕ್ತೇರೀಶೇ
ಸಾವಕಾಶತ್ವಾಚ್ಚ ॥ ೧೩ ॥

ಅ ॥ (ಸ್ವಪ್ನಾದಿದ್ರಷ್ಟೃತ್ವ ಅಸಂಗತ್ವಲಿಂಗಗಳು ಒಂದೇ ಕಡೆ ಇರಬೇಕಾಗಿರುವುದರಿಂದ ತದನ್ಯಥಾ ಅನುಪಪತ್ತ್ಯಾ ಜೀವೇಶ್ವರರಿಗೆ ಅಭೇದವೆಂದು ಯಾವುದು ಉಕ್ತವಾಗಿಯದೋ, ಅದು ಯುಕ್ತವಲ್ಲ. ಏಕೆಂದರೆ) ಸುಷುಪ್ತ್ಯುತ್ಕ್ರಾಂತಿ ಪ್ರಕರಣಗಳಲ್ಲಿ (ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾಽನ್ವಾರೂಢಃ ಎಂದು) ಜೀವೇಶ್ವರರಿಗೆ ಭೇದವನ್ನು ಹೇಳಿರುವುದರಿಂದಲೂ ಅಸಂಗಿತ್ವವೂ ಸ್ವಪ್ನಾದಿದ್ರಷ್ಟೃತ್ವವೂ ಶ್ರೀವಿಷ್ಣುವಿಗೇನೇ ಕೂಡುವುದರಿಂದಲೂ ಅನ್ಯಥಾ ಅನುಪಪತ್ತಿಯು ಇಲ್ಲದಿರುವ ಪ್ರಯುಕ್ತ ಜೀವೇಶ್ವರರಿಗೆ ಅಭೇದವು ಸರ್ವಥಾ ಇಲ್ಲದಿರುವುದರಿಂದ ಭೇದವೇ ಇರುತ್ತದೆ. (ಅರ್ಥಾತ್ ಅನ್ಯಥಾ ಅನುಪಪತ್ತಿ ಇಲ್ಲದಿರುವುದರಿಂದ ತಥಾ = ಭೇದದಿಂದಲೇ, ಗತಿಃ = ತಿಳಿಯುವಿಕೆ. ಅಭೇದದಿಂದ ಅಲ್ಲ) (೨) ಅಸಂಗತ್ವವು ಜೀವನಿಗೆ ಸರ್ವಥಾ ಕೂಡುವುದೇ ಇಲ್ಲ. ಈಶ್ವರನು ಸರ್ವಜ್ಞನಾದುದರಿಂದಲೂ ಸ್ವಾಪ್ನಪದಾರ್ಥಗಳು ಸತ್ಯಗಳಾಗಿರುವುದರಿಂದಲೂ ಸ್ವಪ್ನಾದಿದ್ರಷ್ಟೃತ್ವವು ಮುಖ್ಯವಾಗಿ ಪರಮಾತ್ಮನಲ್ಲಿಯೇ ಕೂಡುವುದರಿಂದ ಸಾವಕಾಶವಾಗಿದೆ. ॥ ೧೩ ॥

ಸಮುತ್ಥೋಽತಃ ಎಂಬಲ್ಲಿ ಅತಃ ಶಬ್ದದಿಂದ ಪೂರ್ವಾಧಿಕರಣದಲ್ಲಿ ಹೇಳಿದ ಅರ್ಥಾನ್ತರ್ಥಾಗತಿಃ ಎಂಬ ನ್ಯಾಯವನ್ನೇ ಬ್ರಾಹ್ಮಣಾಧಿಕರಣ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.

ಮೂ ॥ (೧) ಬ್ರಹ್ಮಣಾ ವೇದೇನ ಗಮ್ಯತೇ ಇತಿ ಬ್ರಾಹ್ಮಣಶಬ್ದೋ ವಿಷ್ಣಾವೇವ ಯುಜ್ಯತೇ
ಇತ್ಯರ್ಥಾದಪಶಬ್ದೋಽಪಿ ತಸ್ಮಿನ್ನೇವ ॥ (೨) ಚತುರ್ಮುಖಸ್ಯ ಕರ್ಮಫಲಾಭಾವಾ
ಯುಕ್ತೇಸ್ತಯೋರ್ಭೇದೋಽರ್ಥಾದಾಪದ್ಯತೇ ॥ (೩) ಉಕ್ತವಿರೋಧಶ್ಚ ತತ್ರೈವ ।

**(೪) ಭೇದಶ್ರುತಿಬಾಹುಲ್ಯಾತ್ ॥(೫)ತಲ್ಲಿಂಗಂ ನ ಶಬ್ದಶ್ಚತುರ್ಮುಖೇಽನವಕಾಶ ಇತಿ ಚ ಸಮಸ್ತಮೇತತ್ ॥ ೧೪ ॥**

ಅ ॥ (೧) ಬ್ರಹ್ಮಣಾ – ವೇದದಿಂದ, ಅಣ್ಯತೇ = ಗಮ್ಯತೇ = ತಿಳಿಯಲ್ಪಡುತ್ತಾನೆ. ಎಂಬ ವ್ಯುತ್ಪತ್ತಿಯಿಂದ ಬ್ರಾಹ್ಮಣ ಶಬ್ದವು ಶ್ರೀ ವಿಷ್ಣುವಿನಲ್ಲಿಯೇ ಯುಕ್ತವಾಗುತ್ತದೆ. ಸಂಕೋಚ ಮಾಡಲಿಕ್ಕೆ ಕಾರಣವಿಲ್ಲದಿರುವುದರಿಂದ ಬ್ರಹ್ಮ ಅಣ ಬ್ರಹ್ಮಾಣಃ ಎಂದಾಗಬೇಕಿತ್ತು. ಬ್ರಾಹ್ಮಣಃ = ಎಂದು ಹೇಗೆ? ಎಂದರೆ ಅಧಿಕಾರ್ಥಕ ಸ್ವರ ವ್ಯತ್ಯಾಸದಿಂದ ಪರಮಮುಖ್ಯ ವೃತ್ತಿಯಿಂದ ಸರ್ವವೇದ ವೇದ್ಯತ್ವವು. ಎಂಬ ಅಭಿಪ್ರಾಯದಿಂದಲೂ ಏಷ ವಿಷ್ಣೋಃ ಮಹಿಮಾ ಬ್ರಾಹ್ಮಣಸ್ಯ ಎಂಬ ಶ್ರುತ್ಯನುಸಾರವಾಗಿಯೂ ಬ್ರಾಹ್ಮಣಃ ಎಂದದ್ದು.) ಆದಕಾರಣ ಅರ್ಥಾತ್ ಬ್ರಹ್ಮಣ ಶಬ್ದ ಸಮಭಿವ್ಯಾಹಾರಾನ್ಯಥಾನುಪಪತ್ತಿಯಿಂದ ನ ಜಾಯತೇ ಇತ್ಯಜಃ ಯಾವ ಪ್ರಕಾರದಿಂದಲೂ ಯಾರಿಂದಲೂ ಹುಟ್ಟುವುದೇ ಇಲ್ಲ ಎಂಬ ವ್ಯುತ್ಪತ್ತಿಯಿಂದ ಅಜಶಬ್ದವೂ ಶ್ರೀಪರಮಾತ್ಮನಲ್ಲಿಯೇ ಮುಖ್ಯವು. ೨) (ಈ ವಾಕ್ಯದಲ್ಲಿ ಹೇಳಲ್ಪಟ್ಟ, ಬ್ರಾಹ್ಮಣ ಶಬ್ದವಾಚ್ಯನು ಚತುರ್ಮುಖನೆಂದಾದರೆ ಪಾಪಲೇಪವಿಲ್ಲ. ಇತ್ಯಾದಿಲಿಂಗ ವಿರೋಧವೂ ಸರ್ವಸ್ಯಾಧಿಪತಿಃ ಇತ್ಯಾದಿಗಳಲ್ಲಿ ಹೇಳಿದ ಪತ್ಯಾದಿ ಶಬ್ದಗಳಿಂದ ವಿರೋಧವೂ ಬರುತ್ತದೆ.)(ವಿಷ್ಣು ಚತುರ್ಮುಖರಿಗೆ ಅಭೇದವು ಎಂಬ ಅಭಿಪ್ರಾಯದಿಂದ ಪಾಪಾಲೇಪಾದಿಲಿಂಗವೂ ಪತ್ಯಾದಿ ಶಬ್ದವೂ ಚತುರ್ಮುಖನಲ್ಲಿ ಸಾವಕಾಶವೂ ಚತುರ್ಮುಖಪರವೂ ಆಗಬಹುದು ಎಂದರೆ) (ವಿಷ್ಣು ಚತುರ್ಮುಖರಿಗೆ ಅಭೇದವೆನ್ನ ಕೂಡದು. ಪ್ರಮಾಣವಿಲ್ಲ. ಬ್ರಾಹ್ಮಣಅಜಶಬ್ದ ಪಾಪಾಲೇಪಾದಿ ಲಿಂಗಅವುಗಳ ಬಲದಿಂದ ಅಭೇದವುಸಿದ್ಧಿಸುತ್ತದೆಂದೂ ಹೇಳಕೂಡದು. ಬ್ರಾಹ್ಮಣ ಅಜ ಶಬ್ದಗಳು ಭಗವತ್ಪರಗಳೇ ಎಂದು ಹೇಳಿಯಾಗಿದೆ. ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃಪರಂ ಹಿ ಮಾಂ । ಎಂಬ ಪ್ರಮಾಣದಿಂದ) ಚತುರ್ಮುಖನಿಗೆ ಕರ್ಮಫಲವಿಲ್ಲವೆಂಬುವುದು ಕೂಡದಿರುವುದರಿಂದ ಅವರಿಗೆ ಭೇದವೇ ಅರ್ಥಾತ್ ತಿಳಿಯುತ್ತದೆ. (ಅಂದರೆ ನಿತ್ಯಮುಕ್ತನಾದ ಶ್ರೀ ಪರಮಾತ್ಮನಿಂದ ಚತುರ್ಮುಖನಿಗೆ ಭೇದವೇ ಯುಕ್ತವು) ೩) ಯಾವ ಕಾರಣದಿಂದ ಬ್ರಾಹ್ಮಣ ಅಜ ಶಬ್ದಗಳಿಗೆ ರೂಢಿಯಿಂದ ಚತುರ್ಮುಖಪರತ್ವವನ್ನು ಇಟ್ಟುಕೊಂಡರೆ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಇದು ಮೊದಲಾದ ವಚನವು ವಿರುದ್ಧವಾಗುವುದೋ ಆದ ಕಾರಣ ಹಿಂದೆ ಹೇಳಿದ ವ್ಯುತ್ಪತ್ತಿಯಿಂದ ಬ್ರಾಹ್ಮಣ ಅಜಶಬ್ದಗಳು ವಿಷ್ಣುಪರಗಳೇ.) (೪) ವಿಷ್ಣೋಃ ಹಿರಣ್ಯಗರ್ಭಃ ಇದು ಮೊದಲಾದ ಭೇದಪ್ರತಿಪಾದಕ ಶ್ರುತಿಗಳು ಬಹಳ ಇದ್ದ ಪ್ರಯುಕ್ತ ವಿಷ್ಣು ಚತುರ್ಮುಖರಿಗೆ ಭೇದವೇ. ಅವರಿಗೆ ಅಭೇದವು ಸರ್ವಥಾ ಯುಕ್ತವಲ್ಲ. ೫) ಹಿಂದೆ ಹೇಳಿದ ಪ್ರಕಾರ ವಿಷ್ಣು ಚತುರ್ಮುಖರಿಗೆ ಅಭೇದವಿಲ್ಲದಿರುವ ಪ್ರಯುಕ್ತ ಪಾಪಾದ್ಯಲೇಪ, ನಿತ್ಯಮುಕ್ತತ್ವಾದಿಲಿಂಗವೂ ಪತ್ಯಾದಿಶಬ್ದವೂ ಚತುರ್ಮುಖನಲ್ಲಿ ವಿಷ್ಣುವಿರಿಂಚರಿಗೆ ಅಭೇದವಿದ್ದ ಪ್ರಯುಕ್ತ ಸಾವಕಾಶವೆಂದು ಹೇಳಕೂಡದು. ಅಂದರೆ ಆ ಲಿಂಗ, ಶಬ್ದಗಳು ಚತುರ್ಮುಖಪರಗಳು ಆಗುವುದೇ ಇಲ್ಲ. ವಿಷ್ಣುಪರಗಳೇ. ಹಿಂದೆ ಹೇಳಿದ ಪ್ರಕಾರ ಪೂರ್ವಾಧಿಕರಣದಲ್ಲಿ ಹೇಳಿದ್ದು ಎಲ್ಲವೂ ಉಕ್ತವಾಯ್ತು. ಸ್ವಲ್ಪವೇ ಅಲ್ಲ.

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ**

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೧ನೇ ಅಧ್ಯಾಯದಲ್ಲಿ ೩ನೇ ಪಾದವು ಸಮಾಪ್ತವಾಯ್ತು-**

# ೪ನೇ ಪಾದವು

ಈ ನಾಲ್ಕನೇ ಪಾದದಲ್ಲಿ ಅನ್ಯತ್ರ್ಯವ ಪ್ರಸಿದ್ಧಗಳಾದ ಅವ್ಯಕ್ತಾದಿಶಬ್ದಗಳಿಗೆ ಸಮನ್ವಯವು. ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸಿ ಅನುವ್ಯಾಖ್ಯಾನದಲ್ಲಿ ಹೇಳಿರುವರು. "ಸರ್ವಮಾನೈರ್ವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ । ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ । ಸ್ತ್ರೀಲಿಂಗತ್ವಂ ನಿಷೇಧಶ್ಚ ಪೂರ್ವಪಕ್ಷೇಷು ಯುಕ್ತಯಃ । ದೋಷಾತ್ಸೃಷ್ಟಿ ನಿಯಮಃ ಶಬ್ದಾರ್ಥಾನೇಕತಾ ತಥಾ । ಬಹುರೂಪತ್ವಮೀಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ । ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ । ಇತ್ಯಾದಿಯುಕ್ತಯಃ ಸಾಕ್ಷಾತ್ಸಿದ್ಧಾಂತಸ್ಥಾಪಿತಾ ಇಹ"॥ ಈ ನ್ಯಾಯಗಳನ್ನು ಇಲ್ಲಿ ವಿವರಿಸುತ್ತಾರೆ. ೧ನೇ ಆನುಮಾನಿಕಾಧಿಕರಣದಲ್ಲಿ ಅಪರತ್ವ ಮೊದಲಾದ ಲಿಂಗಗಳಿಂದ ಅಬಾಧಿತಗಳಾದ ಅನ್ಯತ್ರ ಪ್ರಸಿದ್ಧಿ, ಸಮನ್ವಯಸೂತ್ರ ಇವುಗಳಿಂದ 'ಅವ್ಯಕ್ತಾತ್ಪುರುಷಃ ಪರಃ' ಎಂಬ ವಾಕ್ಯದಲ್ಲಿದ್ದ ಅವ್ಯಕ್ತಾದಿ ಶಬ್ದವಾಚ್ಯವಾದುದು ಪ್ರಧಾನಾದಿಯೋ, ಅಥವಾ ವಿಷ್ಣುವೋ ಎಂದು ಸಂದೇಹವು ಬಂದರೆ ಪ್ರಧಾನಾದಿಗಳೇ ಎಂದು ಪೂರ್ವಪಕ್ಷವು. ಶ್ರೀ ವಿಷ್ಣುವೇ ಎಂದು ಸಿದ್ಧಾಂತವು. ಅದರಲ್ಲಿ ಸರ್ವಮಾನೈರ್ವಿರೋಧಃ ಎಂಬ ಪೂರ್ವಪಕ್ಷನ್ಯಾಯ, ದೋಷಾತ್ಸೃಷ್ಟಿನಿಯಮಃ ಎಂಬ ಸಿದ್ಧಾಂತನ್ಯಾಯ ಇವುಗಳನ್ನು ವಿವರಿಸುತ್ತಾರೆ. ಅವ್ಯಕ್ತ ಜೀವ ಮೊದಲಾದ ಶಬ್ದಗಳಿಗೆ ಪ್ರಧಾನ ಜೀವ ಮೊದಲಾದವರಲ್ಲಿಯೇ ಪ್ರಸಿದ್ಧಿಯು. ಅವ್ಯಕ್ತಾತ್ಪುರುಷಃ ಪರಃ ಎಂಬಲ್ಲಿ ಅವ್ಯಕ್ತಕ್ಕೆ ಅಪರತ್ವವೂ ಜೀವಾ ವಿವಶ್ತುದುಃಖಿನಃ ಎಂಬಲ್ಲಿ ಜೀವಂಗೆ ದುಃಖವೂ ತೋರುತ್ತದೆ. ಇವು ವಿಷ್ಣುವಿನಲ್ಲಿ ಸರ್ವ ಪ್ರಮಾಣಗಳಿಂದಲೂ ವಿರುದ್ಧವಾಗಿದೆ. ಆದಕಾರಣ ಪ್ರಧಾನಾದಿಗಳೇ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯಗಳೆಂದು ಪೂರ್ವಪಕ್ಷವು ಬಂದರೆ- ಶ್ರೀ ವಿಷ್ಣುವಿಗೆ ದೋಷಗಳು ಸಂಪೂರ್ಣವೇ ಇಲ್ಲವೆನ್ನುವ ನಿಯಮವಿದ್ದುದರಿಂದ ಅವ್ಯಕ್ತಾದಿಗಳಿಗೆ ನಿಯಾಮಕನಾಗಿರುವುದರಿಂದ ಅವ್ಯಕ್ತಾದಿ ಶಬ್ದವಾಚ್ಯನೆಂದು ಸಿದ್ಧಾಂತವು, ಹೇಗೆಂದರೆ..

ಮೂ॥ ಅಪರತ್ವಾದಿ ಧರ್ಮನಿಯಂತೃತ್ವಂ ತತ್ತಾದಾತ್ಮ್ಯಂಚೇತಿ ದ್ವಿವಿಧಮಪರತ್ವಾದಿ ॥ (೨) ನಿರಣಿಷ್ಠೋ ನಿರವದ್ಯಃ ಇತ್ಯಾದಿಶ್ರುತೇಸ್ತತ್ರ ದ್ವಿತೀಯ ತಾದಾತ್ಮ್ಯಾತ್ಸೃಷ್ಟಿ ನಿಯಮಾದ್ವಿಷ್ಣೋಃ 'ನಾಮಾನಿ ಸರ್ವಾಣಿ ಯಮಾವಿಶಂತೀತಿ ಶ್ರುತಿಬಲಾಚ್ಚ ನಿಯಂತೃತ್ವಮೇವಾಪರತ್ವಾದಿಕಮಿತ್ಯಾಪತತಿ ॥ (೩) ಶ್ರುತಿದ್ವಯಸ್ಯಾಪಿ ನಿರವಕಾಶತ್ವಾತ್'॥ (೪) ಮೃತ್ಯುಶಬ್ದಾದಿಷು ಪ್ರಸಿದ್ಧೇಶ್ಚ । ಪ್ರಸಿದ್ಧತ್ವಾಚ್ಚ ಶತ್ರುವ್ಯುತ್ಪತ್ತೇಃ । (೫) ತಮೇವ ಮೃತ್ಯುಮಮೃತಂ । ತಾತ ದೈವಂ ಸರ್ವಾತ್ಮನಾ ವೈ ಹಿ ಪರಂ ಪರಾಯಣಮಿತ್ಯಾದೇಶ್ಚ ॥ (೬) ಉಪಚಾರತ್ವಕಲ್ಪನಾಯಾಶ್ಚ ಕ್ಲಿಷ್ಟತ್ವಾತ್ । ಪ್ರಮಾಣಾಭಾವಾಚ್ಚ ॥ (೭) ನಾವ್ಯಕ್ತಾದಿಶಬ್ದಾನಾಂ ಪರಮಾತ್ಮವಿಷಯತ್ವಾಂಗೀಕಾರೇ ಸರ್ವಮಾನವಿರೋಧಃ ॥ ೧ ॥

ಅ॥ ॥೧॥ ಅಪರಾದಿಶಬ್ದ ಪ್ರವೃತ್ತಿ ನಿಮಿತ್ತವು (೧) ಪರರಕ್ಷಕತ್ವ ಅಪರತ್ವ ಮೊದಲಾದ ಧರ್ಮಗಳ ನಿಯಾಮಕತ್ವ (೨) ಅಪರಾದಿ ವಸ್ತುಗಳ ತಾದಾತ್ಮ್ಯ (ಅಭೇದ) ಎಂದು ಎರಡು ವಿಧವು. ಇದು ಯಾದ ಧೀರಾ ಗುಣಾ ಯಸ್ಯ ತದ್ಗುಣೇ ಸೋಽಭಿಧೀಯತೇ । ಇತ್ಯಾದಿ ಪ್ರಮಾಣ ಪ್ರಸಿದ್ಧವು. (೩) ಅದರಲ್ಲಿ ಶ್ರೀ ಪರಮಾತ್ಮನಿಗೆ ಅಪರತ್ವಾದಿ ಧರ್ಮಗಳು ಇದ್ದುದರಿಂದ ಅಪರಾದಿಶಬ್ದವಾಚ್ಯತ್ವವಲ್ಲ. ಮತ್ತೆ

ಪರನಲ್ಲಿರತಕ್ಕ ಅಪರತ್ವಾದಿ ಧರ್ಮ ನಿಯಾಮಕತ್ವದಿಂದಲೇ ಎಂಬ ಅಭಿಪ್ರಾಯದಿಂದ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ. ನಿರವಿಷ್ಟೋ ನಿರವದ್ಯಃ ಇದು ಮೊದಲಾದ ಶ್ರುತಿಗಳಿಂದ ಶ್ರೀ ವಿಷ್ಣುವಿಗೆ ಯಾವ ದೋಷಗಳ ಸಂಪರ್ಕವೇ ಇಲ್ಲವೆಂದು ನಿಯತವಾಗಿರುವುದರಿಂದಲೂ, ನಾಮಾನಿ ಸರ್ವಾಣಿ ಯಮಾವಿಶಂತಿ ಎಂಬ ಶ್ರುತಿಬಲದಿಂದಲೂ ಪರನಲ್ಲಿರತಕ್ಕ ಅಪರತ್ವಾದಿ ಧರ್ಮಗಳ ನಿಯಾಮಕತ್ವವೇ ಅಪರಾದಿ ಶಬ್ದ ಪ್ರವೃತ್ತಿ ನಿಮಿತ್ತವೆಂದು ಇಟ್ಟುಕೊಳ್ಳತಕ್ಕದ್ದು. (೩) ನಿರವಿಷ್ಟೋ ನಿರವದ್ಯಃ ನಾಮಾನಿ ಸರ್ವಾಣಿ ಎಂಬ ೨ ಶ್ರುತಿಗಳಿಗೂ (ಅರ್ಥ ಸಂಕೋಚಮಾಡಿಕೊಂಡು ಸಾವಕಾಶತ್ವ ಹೇಳಕೂಡದು.) ಎರಡೂ ನಿರವಕಾಶಗಳೇ ಆಗಿವೆ. (೪) (ಅನ್ಯಗತ ಪ್ರವೃತ್ತಿ ನಿಮಿತ್ತ ಪ್ರೇರಕನಲ್ಲಿ ಅನ್ಯತ್ರ ಪ್ರಸಿದ್ಧ ಶಬ್ದವು ಇರುವುದಾದರೆ ಪ್ರಧಾನಾದಿಗಳಲ್ಲಿರತಕ್ಕ ಅಪರತ್ವಾದಿ ಶಬ್ದ ಪ್ರವೃತ್ತಿ ನಿಮಿತ್ತ ಪ್ರೇರಕನಾಗಿರುವುದರಿಂದ ಶ್ರೀ ಹರಿಗೆ ಅಪರಾದಿ ಶಬ್ದ ವಾಚ್ಯತ್ವವು ಕೂಡಬಹುದಿತ್ತು. ಅದು ಹೇಗೆಂದರೆ) ಮೃತ್ಯುಶಬ್ದ ಮೊದಲಾದ ಶಬ್ದಗಳು ಅನ್ಯರ ಮಾರಕತ್ವಾದಿಗಳಿಗೆ ನಿಯಾಮಕನಾಗಿರುವುದರಿಂದ ಯಮಾದಿಗಳನ್ನು ಹೇಳುತ್ತವೆ ಎಂಬುವುದು ಬಹು ಪ್ರಯೋಗಸಿದ್ಧವಾಗಿದೆ.(ಬಹು ಪ್ರಯೋಗ ಸಿದ್ಧವಾದುದೇ ಮುಖ್ಯವು.) (೫)ಶ್ರೀ ವಿಷ್ಣುವಿಗೆ ಅಪರಾದಿ ಶಬ್ದವಾಚ್ಯತ್ವ ಮಾತ್ರವಲ್ಲ. ಮತ್ತೆ 'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಶ್ರೀ ಹರಿಯು ಸಂಸಾರಿಗಳನ್ನು ಬಂಧಿಸುವುದರಿಂದ ಬದ್ಧನೆಂದೂ, ದುಃಖವನ್ನು ಹೊಂದಿಸಿಕೊಡುವುದರಿಂದ ದುಃಖೀ ಎಂದೂ ಅನಿಸುತ್ತಾನೆ, ಇತ್ಯಾದಿ ಶ್ರುತಿಗಳಲ್ಲಿ ಬದ್ಧಾದಿ ಶಬ್ದಗಳಿಗೆ ಶ್ರೀ ವಿಷ್ಣುವಿನಲ್ಲಿ ಕರ್ತೃವ್ಯುತ್ಪತ್ತಿಯು ಪ್ರಸಿದ್ಧವಾಗಿರುವುದರಿಂದಲೂ(ಅನ್ಯರಲ್ಲಿರತಕ್ಕ ಪ್ರವೃತ್ತಿ ನಿಮಿತ್ತ ನಿಯಾಮಕತ್ವವು ಇದ್ದೇ ಇದೆ.) (೬) ಆ ಶ್ರೀ ಹರಿಯನ್ನೇ ಮಾರಕನನ್ನಾಗಿಯೂ (ಸಂಸಾರದಿಂದ) ಮೋಚಕನನ್ನಾಗಿಯೂ ತಿಳಿಯಬೇಕು. ಹಾಗೆ ಶ್ರೀ ವಿಷ್ಣುವು ಸರ್ವಪ್ರಕಾರದಿಂದಲೂ ಸರ್ವೋತ್ತಮನು, ಮುಖ್ಯಾಶ್ರಯನು, ಇದು ಮೊದಲಾದ ಸ್ಮೃತಿಗಳ ಪ್ರವೃತ್ತಿಯಿಂದಲೂ(ಶ್ರೀ ವಿಷ್ಣುವಿಗೆ ಅನ್ಯಗತ ಪ್ರವೃತ್ತಿ ನಿಮಿತ್ತನಿಯಾಮಕತ್ವವು ಇದೆ.)(೭)(ಮೃತ್ಯು ಮೊದಲಾದ ಶಬ್ದಗಳು) ಔಪಚಾರಿಕಗಳೆಂದು ಕಲ್ಪಿಸುವುದು ಕ್ಲಿಷ್ಟವಾಗಿದೆ. (ಹಾಗಾದರೆ ಸಿಂಹೋ ದೇವದತ್ತಃ ಎಂಬಲ್ಲಿಯೂ ದೇವದತ್ತನು ಸಿಂಹಕ್ಕೆ ಸದೃಶನು ಎಂಬ ಅರ್ಥದಲ್ಲಿಯೂ ಲಕ್ಷಣಾ ಕಲ್ಪಿಸದೆ ಹೋಗಲಿ. ಎಂದರೆ ಅಲ್ಲಿ ಮುಖ್ಯವಾದ ಅರ್ಥಕ್ಕೆ (ಅಂದರೆ ಮಾಣವಕನಲ್ಲಿ ಸಿಂಹತ್ವಾಶ್ರಯತ್ವವಾಗಲೀ, ಸಿಂಹ ನಿಯಾಮಕತ್ವವಾಗಲೀ ಇಟ್ಟುಕೊಂಡು ಅಭೇದ ಹೇಳಲಿಕ್ಕೆ) ಬಾಧ ಎಂಬ ಪ್ರಮಾಣವಿದ್ದ ಪ್ರಯುಕ್ತ ಔಪಚಾರಿಕತ್ವ (ಅಮುಖ್ಯತ್ವ) ಕಲ್ಪನೆಯು. ಇಲ್ಲಿಯಾದರೂ ಅಂತಹ) (ಪ್ರಮಾಣವಿಲ್ಲದಿರುವುದರಿಂದ ಔಪಚಾರಿಕತ್ವವನ್ನು ಕಲ್ಪಿಸಕೂಡದು ) (೮) (ಅವ್ಯಕ್ತಾತ್ತು ಪುರುಷಃ ಪರಃ ಇದು ಮೊದಲಾದ ವಾಕ್ಯಗಳಲ್ಲಿರತಕ್ಕ) ಅವ್ಯಕ್ತ ಮೊದಲಾದ ಶಬ್ದಗಳಿಗೆ ಭಗವದ್ವಿಷಯಕತ್ವವನ್ನು ಅಂಗೀಕರಿಸಿದರೆ (ಅಂದರೆ ಅವ್ಯಕ್ತ ಶಬ್ದವಾಚ್ಯನು ಭಗವಂತನೆಂದಂಗೀಕರಿಸಿದರೆ) (ಪುರುಷನಲ್ಲಿರತಕ್ಕ ಪರತ್ವಕ್ಕೆ ಅವಧಿಯಾಗಿ ಅಪರತ್ವಾದಿಗಳು ಬರುವುದರಿಂದ ಅಂದರೆ ಅವ್ಯಕ್ತನು ನಿಕೃಷ್ಟನು, ಪುರುಷನು ಶ್ರೇಷ್ಠನು ಅಂತೂ ಅವ್ಯಕ್ತನಿಗಿಂತ ಪುರುಷನು ಶ್ರೇಷ್ಠನೆಂದಾಗಬೇಕಾಗಿರುವುದರಿಂದ 'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ಶ್ರೀ ಹರಿಗೆ ಸಮಾನಿಕನಾಗಲೀ ಅಧಿಕನಾಗಲೀ ಎಲ್ಲಿಯೂ ಕಾಣುವುದಿಲ್ಲ. ಇದು ಮೊದಲಾದ) ಸಮಸ್ತ ಪ್ರಮಾಣಗಳಿಂದಲೂ ವಿರೋಧವು ಬರುವುದು. (ಏವಂಚ ಶ್ರೀ ವಿಷ್ಣುವು ಅವ್ಯಕ್ತಾದಿ ಶಬ್ದವಾಚ್ಯನೆಂದು ಹೇಳಿದರೆ ಆತನಿಗೆ ಅಪರತ್ವಾದಿಗಳು ಬರಬೇಕಾಗುವವು. ಆಗ ಸರ್ವ ಪ್ರಮಾಣಗಳಿಂದಲೂ ವಿರೋಧವು ಬರುವುದು. ಆದಕಾರಣ ಪ್ರಧಾನಾದಿಗಳೇ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯಗಳು, ಎಂದು ಪೂರ್ವ ಪಕ್ಷವು ಬಂದರೆ ದೋಷಗಳ ಸಂಪರ್ಕವಿಲ್ಲವೇ ಇಲ್ಲ ಎಂಬ ನಿಯಮದಿಂದ ವಿಷ್ಣುವು ಅವ್ಯಕ್ತಾದಿಗಳಿಗೆ ನಿಯಾಮಕನಾಗಿರುವುದರಿಂದ ಅವ್ಯಕ್ತಾದಿ ಶಬ್ದವಾಚ್ಯನು, ಎಂದು ಸಿದ್ಧಾಂತವು ॥ ೧ ॥

೨ನೇ ಜ್ಯೋತಿರುಪಕ್ರಮಾಧಿಕರಣದಲ್ಲಿ ವಸಂತೇ ವಸಂತೇ ಜ್ಯೋತಿಷಾಯಜೇತ ಎಂಬ ವಾಕ್ಯದಲ್ಲಿರತಕ್ಕ ಜ್ಯೋತಿರಾದಿ ಶಬ್ದಗಳು ಭಗವಂತನನ್ನು ಹೇಳುತ್ತವೋ, ಕರ್ಮಾದಿಗಳನ್ನೋ ಎಂದು ಸಂಶಯವು

ಬಂದರೆ ಆ ಶಬ್ದಗಳು ಕರ್ಮಾದಿಗಳನ್ನೇ ಹೇಳುತ್ತವೆ, ಎಂದು ಪೂರ್ವ ಪಕ್ಷವು. ಭಗವಂತನನ್ನೆ ಹೇಳುತ್ತವೆ ಎಂದು ಸಿದ್ಧಾಂತವು. ಈ ಪೂರ್ವ ಪಕ್ಷ ಸಾಧಕವಾಗಿ, ವ್ಯುತ್ಪತ್ತೇರಶಕ್ಯಕಲ್ಪನಾ=ಅವಯವಶಃ ಅರ್ಥವನ್ನು ಹೇಳುವುದೂ ಅಶಕ್ಯವು, ಸಿದ್ಧಾಂತ ಸಾಧಕವಾಗಿ ಶಬ್ದಾರ್ಥಾನೇಕತಾ = ಶಬ್ದಾರ್ಥಗಳು ಅನೇಕಗಳಿವೆ, ಎಂಬ ನ್ಯಾಯಗಳನ್ನು ವಿವರಿಸುತ್ತಾರೆ.

**ಮೂ ॥ ರೂಢೋ, ರೂಢಯೋಗೋ, ಮಹಾರೂಢೋ, ಮಹಾಯೋಗೋ, ಮಹಾರೂಢಯೋಗೋ, ರೂಢೋಪಚಾರೋ, ರೂಢಲಕ್ಷಣೋಪಚಾರೋ, ಲಕ್ಷಣೇತಿ ಶಬ್ದವೃತ್ತಿಭೇದಾತ್, ರೂಢಿಪೂರ್ವಕತ್ವೇನ ಮಹಾಯೋಗವೃತ್ತ್ಯಾ ಪರಮೇಶ್ವರೇऽಖಿಲಶಬ್ದವ್ಯುತ್ಪತ್ತ್ಯುಪಪತ್ತಿಃ ॥ ೨ ॥**

ಅ ॥ (ಶಬ್ದಾರ್ಥಗಳು ಅನೇಕಗಳಿವೆ, ಎಂದುಪಪಾದಿಸುವುದಕ್ಕಾಗಿ) ರೂಢ ಮೊದಲಾದ ೭ ಶಬ್ದಗಳ ರೂಢಿ ಮೊದಲಾದ ವೃತ್ತಿ ಭೇದಗಳನ್ನು ಹೇಳಿದ್ದು. (ಅದರಲ್ಲಿ ನಾರಾಯಣಾದಿ ಶಬ್ದಗಳಿಗೆ ಮಹಾ ರೂಢಯೋಗವು. ಆನಂದಮಯಾದಿ ಶಬ್ದಗಳಿಗೆ ಮಹಾಯೋಗವು. ಹೀಗೆ ಭಗವಂತನಲ್ಲಿ ಮುಖ್ಯವಾಗಿ ಎರಡು ವೃತ್ತಿಗಳೂ ಇತರರಲ್ಲಿ ಯಥಾ ಯೋಗ್ಯವಾಗಿ ಇತರ ವೃತ್ತಿಗಳೂ ಇವೆ. ಇವುಗಳ (ಭೇದದಿಂದ ಶಬ್ದಾರ್ಥಗಳು ಅನೇಕವಿಧವು.) ಇವುಗಳ ಲಕ್ಷಣಾದಿಗಳನ್ನು ಭಾಷ್ಯವ್ಯಾಖ್ಯಾನದಲ್ಲಿ ತಿಳಿದುಕೊಳ್ಳಬೇಕು.) (ಎವಂಚ ಎಲ್ಲಾ ಶಬ್ದಗಳೂ ಭಗವತ್ಪರಗಳೆಂದು ಹೇಳಿದರೆ, ಜ್ಯೋತಿಷ್ಟೋಮಃ ಮೊದಲಾದ ಶಬ್ದಗಳಲ್ಲಿ ಜ್ಯೋತಿಷಾಂ ಸ್ತೋಮಃ ಎಂದು ವಿಗ್ರಹವಾದರೆ ಭಗವನ್ನಾಮಗಳಿಗೆ ಅವ್ಯಕ್ತಿ ಮಾತ್ರವೆಂದು ಪ್ರಸಕ್ತವಾಗುವುದರಿಂದ ವ್ಯುತ್ಪತ್ತಿಯು ಅಶಕ್ಯವಾಗುವುದು. ಆದ ಪ್ರಯುಕ್ತ ಜ್ಯೋತಿಷ್ಟೋಮ ಮೊದಲಾದ ಶಬ್ದಗಳು ಕರ್ಮಾದಿಗಳನ್ನೇ ಹೇಳತಕ್ಕವುಗಳು, ಶ್ರೀ ಹರಿಯನ್ನು ಹೇಳುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ—ಶಬ್ದಾರ್ಥಗಳು ಬಹಳ ಇದ್ದ ಪ್ರಯುಕ್ತ ಜ್ಯೋತಿರಾದಿಶಬ್ದಗಳಿಗೆ ಲೋಕದಲ್ಲಿ) ರೂಢ್ಯಾದಿ ವೃತ್ತಿಯನ್ನು ಅಂಗೀಕರಿಸಿಕೆಂಡು ಮಹಾ ಯೋಗ ವೃತ್ತಿಯಿಂದ ಶ್ರೀ ಪರಮಾತ್ಮನಲ್ಲಿ ಎಲ್ಲಾ ಶಬ್ದಗಳು ಪ್ರವೃತ್ತಗಳಾಗುತ್ತವೆ, ಎಂದು ಅಂಗೀಕರಿಸಿರುವುದರಿಂದ ಜ್ಯೋತಿಷಾಂ ಸ್ತೋಮಃ ಇದು ಮೊದಲಾದ ಸರ್ವ ಶಬ್ದಗಳಿಗೂ ವ್ಯುತ್ಪತ್ತಿಯು ಕೂಡುವುದರಿಂದ (ಬ್ರಹ್ಮನೇ ಜ್ಯೋತಿಷ್ಟೋಮಾದಿ ಶಬ್ದವಾಚ್ಯನೆಂದು ಸಿದ್ಧಾಂತವು.) ॥ ೨ ॥

೩ನೇ ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಯಸ್ಮಿನ್ ಪಂಚ ಪಂಚ ಜನಾಃ ಎಂಬ ವಾಕ್ಯದಲ್ಲಿರತಕ್ಕ ಪಂಚಜನಾದಿ ಶಬ್ದಗಳು ವಿಷ್ಣು ಪ್ರತಿಪಾದಕಗಳೋ ಅಲ್ಲವೋ ಎಂದು ಸಂದೇಹವು ಬಂದರೆ—ವಿಷ್ಣುವಾಚಕಗಳಲ್ಲವೆಂದು ಪೂರ್ವ ಪಕ್ಷವು.ವಾಚಕಗಳೇ ಎಂದು ಸಿದ್ಧಾಂತವು.ಈ ಪೂರ್ವಪಕ್ಷ ಸಾಧಕವಾಗಿ ಪರಸ್ಪರ ವಿರೋಧಃ ಒಬ್ಬನಲ್ಲಿಯೇ ಆಧಾರತ್ವ ಆಧೇಯತ್ವಗಳು, ಏಕತ್ವ ಬಹುತ್ವಗಳು ಹೀಗೆ ಪರಸ್ಪರ ವಿರೋಧವು (ಸಿದ್ಧಾಂತ ಸಾಧಕವಾಗಿ ಬಹುರೂಪತ್ವಂ ಶ್ರೀ ಹರಿಗೆ ಅನೇಕ ರೂಪಗಳಿವೆ.ಎಂಬ ಈನ್ಯಾಯಗಳನ್ನು ವಿವರಿಸುತ್ತಾರೆ.)

**ಮೂ ॥ ಬಹುರೂಪತ್ವಾದಧಿಕರಣತ್ವಾಧೇಯತ್ವಾದಿ ತಸ್ಯೈವ ಯುಜ್ಯತೇ ॥ ೧ ॥**

ಅ ॥ ಆ ಈಶ್ವರನಿಗೇನೇ ಬಹು ರೂಪಗಳಿರುವುದರಿಂದ ಆತನೊಬ್ಬನಿಗೇ, ಆಧಾರತ್ವ, ಆಧೇಯತ್ವ ಏಕತ್ವ ಬಹುತ್ವ, ಸರ್ವಾಶ್ರಯನಾದುದರಿಂದ ಈಶತ್ವ ಆಧೇಯತ್ವ ಇವುಗಳು ಕೂಡುತ್ತವೆ. (ವಿಲಕ್ಷಣ

ವಿರುದ್ಧ ಧರ್ಮಗಳನ್ನು ಕೂಡಿಸತಕ್ಕ ಬಹುರೂಪತ್ವ ಮೊದಲಾದ ಐಶ್ವರ್ಯವು ಆತನೊಬ್ಬನಿಗೆನೇ. ಇತರರಿಗೆ ಇಲ್ಲ.) (ಏವಂಚ ಪಂಚಜನ ಮೊದಲಾದ ಶಬ್ದಗಳು ಶ್ರೀ ವಿಷ್ಣುವನ್ನು ಪ್ರತಿಪಾದಿಸತಕ್ಕವುಗಳೆಂದಾದರೆ ಆಧಾರತ್ವ ಆಧೇಯತ್ವ ಮೊದಲಾದುವುಗಳು ಒಬ್ಬನಲ್ಲಿ ಪರಸ್ಪರ ವಿರುದ್ಧಗಳಾಗಿರುವುದರಿಂದ ಶ್ರೀ ವಿಷ್ಣುವು ಪಂಚಜನಾದಿಶಬ್ದವಾಚ್ಯನಲ್ಲ, ಎಂದು ಪೂರ್ವಪಕ್ಷವು ಬಂದರೆ–ಶ್ರೀ ಪರಮಾತ್ಮನಿಗೆ ಅನೇಕಾನೇಕ ರೂಪಗಳಿರುವುದರಿಂದ ಆತನ ರೂಪಗಳಲ್ಲಿ ಒಂದಕ್ಕೆ ಆಧಾರತ್ವ, ಒಂದಕ್ಕೆ ಆಧೇಯತ್ವಗಳು. ಒಬ್ಬನಿಗೇ ಆಧಾರತ್ವ ಆಧೇಯತ್ವಾದಿಗಳುಕೂಡುವ ಪ್ರಯುಕ್ತ ವಿರೋಧವು ಪ್ರಸಕ್ತವಾಗದಿರುವುದರಿಂದ ಶ್ರೀವಿಷ್ಣುವೇ ಮುಖ್ಯವಾಗಿ ಪಂಚಜನಾದಿಶಬ್ದವಾಚ್ಯನೆಂದು ಸಿದ್ಧಾಂತವು. ॥ ೩ ॥

೬ನೇ ಕಾರಣತ್ವೇನಚಾಕಾಶಾಧಿಕರಣದಲ್ಲಿ ಆತ್ಮನ ಆಕಾಶಸ್ಸಂಭೂತಃ ಎಂಬ ವಾಕ್ಯದಲ್ಲಿದ್ದ ಆಕಾಶ ಮೊದಲಾದ ಶಬ್ದಗಳು ಆಕಾಶಾದಿಗಳನ್ನು ಮಾತ್ರ ಹೇಳುತ್ತವೋ ಶ್ರೀ ವಿಷ್ಣುವನ್ನು ಹೇಳುತ್ತವೋ ಎಂದು ಸಂದೇಹವು ಬಂದರೆ ಆಕಾಶಾದಿಗಳನ್ನು ಮಾತ್ರ ಹೇಳುತ್ತವೆ. ಎಂದು ಪೂರ್ವಪಕ್ಷವು. ಶ್ರೀವಿಷ್ಣುವನ್ನೂ ಹೇಳುತ್ತವೆಂದು ಸಿದ್ಧಾಂತವು. ಈ ಪೂರ್ವಪಕ್ಷ ಸಂಬಂಧಿಯಾಗಿ ವಿರೋಧಃ ಕಾರ್ಯತದ್ವತೋಃ ಕಾರ್ಯ ಕಾರಣಗಳಿಗೆ ವಿರೋಧವು, (ಅಂದರೆ ಒಬ್ಬನಿಗೇನೇ ಕಾರ್ಯ ಕಾರಣ ಭಾವವು ಕೂಡಲಾರದು. ಸಿದ್ಧಾಂತ ಸಾಧಕವಾಗಿ ಈಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ = ಶ್ರೀ ಹರಿಗೆ ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬ ವಿಶೇಷವು, ಎಂಬ ನ್ಯಾಯಗಳನ್ನು ವಿವರಿಸುತ್ತಾರೆ.

ಸೂ ॥ ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂಚ ॥ ೪ ॥

ಅ ॥ ಶ್ರೀ ವಿಷ್ಣುವು ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯನೆಂದಾದರೆ ಆತನಿಗೆ ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ। ವಾಯೋರಗ್ನಿಃ ಇತ್ಯಾದಿ ಶ್ರುತಿಗಳಿಂದ ಕಾರ್ಯತ್ವವೂ ಕಾರಣತ್ವವೂ ಪ್ರಾಪ್ತವಾಗುತ್ತದೆ. ಕಾರ್ಯವೂ ಕಾರಣವೂ ಒಂದೇಯಾಗಲಾರದಷ್ಟೆ. ಆದಕಾರಣ ಭೂತಾಕಾಶ ಭೂತವಾಯು ಮೊದಲಾದುವೇ ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯವೆಂದು ಪೂರ್ವಪಕ್ಷವು ಬಂದರೆ ಆಕಾಶಾದಿಗಳಲ್ಲಿರತಕ್ಕ ಶ್ರೀ ವಿಷ್ಣುರೂಪಗಳಿಗೆ ಒಂದೊಂದು ವಿಧವಾಗಿ ಅಂದರೆ ಕಾರ್ಯತ್ವೇನ ವ್ಯಕ್ತಿ, ಕಾರಣತ್ವೇನ ವ್ಯಕ್ತಿ, ಇದರಲ್ಲಿಯೂ ಕಾರ್ಯತ್ವೇನ ವ್ಯಕ್ತವಾದ ರೂಪದಲ್ಲಿ ಕಾರಣತ್ವೇನ ವ್ಯಕ್ತಿಯಿಲ್ಲ. ಹೀಗೆ ಕಾರಣತ್ವೇನ ವ್ಯಕ್ತವಾದ ರೂಪದಲ್ಲಿ ಕಾರ್ಯತ್ವೇನ ವ್ಯಕ್ತಿಯಿಲ್ಲ. ಹೀಗೆ ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬ ವಿಶೇಷಗಳನ್ನು ಅಪೇಕ್ಷಿಸಿಕೊಂಡು ಕಾರ್ಯಕಾರಣ ಭಾವವು ಕೂಡುತ್ತದೆ. ಆದಕಾರಣ ಶ್ರೀ ವಿಷ್ಣುವೇ ಮುಖ್ಯವಾಗಿ ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯನೆಂದು ಸಿದ್ಧಾಂತವು. ಕಾರ್ಯತ್ವಂಚ ಎಂಬಲ್ಲಿದ್ದ ಚ ಶಬ್ದವು ಅವ್ಯಕ್ತ್ಯಪೇಕ್ಷಯಾ ಕಾರಣತ್ವಂ, ಎಂಬುವುದಕ್ಕೆ ಸಮುಚ್ಚಾಯಕವು.

ವಿ ॥ ಶ್ರೀ ಹರಿಯು ಆಕಾಶಾದಿಗಳಲ್ಲಿ ಅಂತರ್ಗತನಾಗಿದ್ದುದರಿಂದ ಅಭಿವ್ಯಕ್ತವಾದ ಭಗವದ್ರೂಪದಿಂದ ವಾಯು ಅಗ್ನಿ ಮೊದಲಾದುವುಗಳಲ್ಲಿರತಕ್ಕ ರೂಪಾಂತರಗಳಿಗೆ ಅಭಿವ್ಯಕ್ತಿ ಯಾಗುವ ಕಾರಣ ವ್ಯಂಗ್ಯ ವ್ಯಂಜಕ ಭಾವರೂಪ ಕಾರ್ಯ ಕಾರಣ ಭಾವವು ಶ್ರೀ ಹರಿಗೆ ಅನಂತಾನಂತ ರೂಪಗಳಿದ್ದುದರಿಂದ ಕೂಡುತ್ತದೆ. ಏವಂಚ ತನ್ನ ಅಭಿವ್ಯಕ್ತಿಯನ್ನಿಟ್ಟುಕೊಂಡು ಕಾರ್ಯತ್ವವು ರೂಪಾಂತರಗಳಿಗೆ ಅಭಿವ್ಯಕ್ತಿಯನ್ನು ಮಾಡುವುದರಿಂದ ಕಾರಣತ್ವವೆಂದು ತಾತ್ಪರ್ಯವು ॥ ೬ ॥

ಬೇರೆ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳು ಭಾಷ್ಯದಲ್ಲಿಯೇ ವಿವೃತಗಳಾಗಿರುವುದರಿಂದ ಅವುಗಳನ್ನು ಇಲ್ಲಿ ವಿವರಿಸಲಿಲ್ಲ.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯ ವಿವರಣೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ। ಪ್ರಥಮಾಧ್ಯಾಯಶ್ಚ ಸಮಾಪ್ತ. ॥

# ಎರಡನೇ ಅಧ್ಯಾಯವು

**ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।**
**ಉದಪ್ರೋಜಮುಹಂ ತೇನ ಪ್ರೀಯತಾಂ ಕಮಲಾಪತಿಃ ॥**

ಆನಂದಮಯ ಮೊದಲಾದ ಸಮಸ್ತ ವೈದಿಕಶಬ್ದಗಳ ಸಮನ್ವಯದಿಂದ ಶ್ರೀ ಹರಿಯು ಜಗಜ್ಜನ್ಮಾದಿ ಕಾರಣನೆಂದು ಸಿದ್ಧವಾಗಲು ಆ ಪ್ರಥಮಾಧ್ಯಾಯದಲ್ಲಿ ಹೇಳಿದ ಅರ್ಥಗಳಿಗೆ ಯುಕ್ತ್ಯಾದಿವಿರೋಧವನ್ನು ಪರಿಹರಿಸುವುದಕ್ಕಾಗಿ ಈ ೨ನೇ ಅಧ್ಯಾಯವು ಪ್ರವೃತ್ತವಾಗಿದೆ. ಅದರಲ್ಲಿ ಸಮಸ್ತವಿರೋಧಗಳಿಗೂ ಯುಕ್ತಿಯು ಮೂಲವಾಗಿರುವುದರಿಂದ ಯುಕ್ತಿಯೇ ಮುಖ್ಯವಾಯ್ತು. ಆ ವಿರೋಧವನ್ನು ಪರಿಹರಿಸುವುದಕ್ಕಾಗಿ ಈ ೧ನೇ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಸಂಗ್ರಹಿಸಿ ಅನುವ್ಯಾಖ್ಯಾನದಲ್ಲಿ ಹೇಳಿದೆ. **ಆಪ್ತತಾ ಸಮತಾದೃಷ್ಟಿಃ ಶ್ರುತಿಸಾಮ್ಯಂ ಬಲೋದ್ಭವಃ। ಸರ್ವಾನುಸಾರೋ ಲಘುತಾ ವಿಶೇಷಾದರ್ಶನಾಫಲೇ । ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ । ಏತಾ ಏವ ಶ್ರುತಿಬಲಾತ್ ಸಿದ್ಧಾಂತಸ್ಯ ನಿಯಾಮಿಕಾಃ ॥** ಎಂದು.

ಸ್ಮೃತ್ಯಧಿಕರಣದಲ್ಲಿ ಮತಗಳ ವಿವಾದದಿಂದ ಜಗಜ್ಜನ್ಮಾದಿ ಕರ್ತೃತ್ವವು ಶ್ರೀ ವಿಷ್ಣುವಿಗೆ ಯುಕ್ತವಾಗುತ್ತದೋ, ಇಲ್ಲವೋ, ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಆಪ್ತತಾ ಎಂದು ಹೇಳಿದ ನ್ಯಾಯವನ್ನು ಪೂರ್ವಪಕ್ಷ ಸಿದ್ಧಾಂತಗಳ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ ಓಂ । ರುದ್ರಾದೀನಾಂ ಸಕಾಶಾದ್ವಿಷ್ಣ್ವಾದೀನಾಮೇವಾಪ್ತತ್ವಂ ।**
**ಶ್ರುತ್ಯನುಸಾರಿತ್ವಾತ್ ॥ ೧ ॥**

ಅ ॥ (ರುದ್ರಾದಿಗಳು ಜಗತ್ತಿಗೆ ಹಿತೋಪದೇಶಕರಾಗಿ ಸರ್ವಜ್ಞರಾಗಿರುವುದರಿಂದ ಆಪ್ತಿಯುಳ್ಳವರು ಆದ ಪ್ರಯುಕ್ತ ಅವರು ಮಾಡಿರುವ ಪಾಶುಪತಾದಿಸ್ಮೃತಿಗಳು ದೋಷವಿಲ್ಲದಿರುವುದರಿಂದ ಪ್ರಬಲಗಳಾಗಿ ನಿರವಕಾಶಗಳಾಗಿವೆ. ಆದುದರಿಂದ ಆ ಸ್ಮೃತಿಗಳಿಗೆ ವಿರುದ್ಧವಾದ ಅರ್ಥವನ್ನು ಹೇಳತಕ್ಕ ಶ್ರುತಿಗೆ ಅಪ್ರಾಮಾಣ್ಯವೇ ಬರುವುದರಿಂದ ಅಂತಹ ಶ್ರುತಿಯಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಎಂದು ಪೂರ್ವಪಕ್ಷವು ಬಂದರೆ— ವಿಷ್ಣ್ವಾದಿಗಳು ಮಾಡಿರುವ ಪಂಚರಾತ್ರಾದಿ ಸ್ಮೃತಿಗಳು) ಶ್ರುತಿ ಸಂವಾದವುಳ್ಳವುಗಳೂ ಶ್ರುತಿಮೂಲಕಗಳೂ ಆಗಿರುವುದರಿಂದ ರುದ್ರಾದಿಗಳಿಗಿಂತ ವಿಷ್ಣು ಮೊದಲಾದವರಿಗೇನೇ ಅತ್ಯಂತ ಆಪ್ತತ್ವವು ಇರುವುದರಿಂದ (ಆಪ್ತತ್ವವೇ ಸಿದ್ಧಾಂತಯುಕ್ತಿಯು) ಏವಂ ಈ ವೈಷ್ಣವಸ್ಮೃತಿಗಳನ್ನು ಪರಮಾಪ್ತರಾದ ವಿಷ್ಣ್ವಾದಿಗಳು ಮಾಡಿರುವುದರಿಂದ ನಿರವಕಾಶಗಳಾಗಿವೆ. ಅವುಗಳಿಂದಲೂ ಅವುಗಳಿಗೆ ಸಹಾಯಕಗಳಾದ ಶ್ರುತಿಯಿಂದಲೂ ಪಾಶುಪತಾದಿಸ್ಮೃತಿಗಳಿಗೆ ವಿರೋಧವು ಬರುವುದರಿಂದ ಅವುಗಳಿಗೆ ಅಪ್ರಾಮಾಣ್ಯವು ಬಂದೇ ಬರುತ್ತದೆ. ಆದಕಾರಣ ಶ್ರೀ ವಿಷ್ಣುವೇ ಜಗತ್ಕರ್ತನೆಂದು ಸಿದ್ಧವಾಯ್ತು. ॥ ೧ ॥

೨ನೇ ನವಿಲಕ್ಷಣತ್ವಾಧಿಕರಣದಲ್ಲಿ ಶ್ರುತ್ಯಾದಿಗಳು ಪ್ರಮಾಣಗಳೋ, ಅಲ್ಲವೊ, ಎಂದು ಸಂದೇಹವು ಬಂದರೆ ಪ್ರಮಾಣವಲ್ಲವೆಂದು ಪೂರ್ವಪಕ್ಷವು. ಪ್ರಮಾಣವೇ ಎಂದು ಸಿದ್ಧಾಂತವು. ಅಲ್ಲಿ ಸಮತಾ ಎಂಬ ನ್ಯಾಯವನ್ನೇ ಪೂರ್ವಪಕ್ಷ ಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

ವಿರುದ್ಧ ಧರ್ಮಗಳನ್ನು ಕೂಡಿಸತಕ್ಕ ಬಹುರೂಪತ್ವ ಮೊದಲಾದ ಐಶ್ವರ್ಯವು ಆತನೊಬ್ಬನಿಗೆನೇ. ಇತರರಿಗೆ ಇಲ್ಲ.)(ಏವಂಚ ಪಂಚಜನ ಮೊದಲಾದ ಶಬ್ದಗಳು ಶ್ರೀ ವಿಷ್ಣುವನ್ನು ಪ್ರತಿಪಾದಿಸತಕ್ಕವುಗಳೆಂದಾದರೆ ಆಧಾರತ್ವ ಆಧೇಯತ್ವ ಮೊದಲಾದುವುಗಳು ಒಬ್ಬನಲ್ಲಿ ಪರಸ್ಪರ ವಿರುದ್ಧಗಳಾಗಿರುವುದರಿಂದ ಶ್ರೀ ವಿಷ್ಣುವು ಪಂಚಜನಾದಿಶಬ್ದವಾಚ್ಯನಲ್ಲ, ಎಂದು ಪೂರ್ವಪಕ್ಷವು ಬಂದರೆ–ಶ್ರೀ ಪರಮಾತ್ಮನಿಗೆ ಅನೇಕಾನೇಕ ರೂಪಗಳಿರುವುದರಿಂದ ಆತನ ರೂಪಗಳಲ್ಲಿ ಒಂದಕ್ಕೆ ಆಧಾರತ್ವ, ಒಂದಕ್ಕೆ ಆಧೇಯತ್ವಗಳು. ಒಬ್ಬನಿಗೇ ಆಧಾರತ್ವ ಆಧೇಯತ್ವಾದಿಗಳುಕೂಡುವ ಪ್ರಯುಕ್ತ ವಿರೋಧವು ಪ್ರಸಕ್ತವಾಗದಿರುವುದರಿಂದ ಶ್ರೀವಿಷ್ಣುವೇ ಮುಖ್ಯವಾಗಿ ಪಂಚಜನಾದಿಶಬ್ದವಾಚ್ಯನೆಂದು ಸಿದ್ಧಾಂತವು. ॥ ೩ ॥

ಅನೇ ಕಾರಣತ್ವೇನಚಾಕಾಶಾಧಿಕರಣದಲ್ಲಿ ಆತ್ಮನ ಆಕಾಶಸ್ಸಂಭೂತಃ ಎಂಬ ವಾಕ್ಯದಲ್ಲಿದ್ದ ಆಕಾಶ ಮೊದಲಾದ ಶಬ್ದಗಳು ಆಕಾಶಾದಿಗಳನ್ನು ಮಾತ್ರ ಹೇಳುತ್ತವೋ ಶ್ರೀ ವಿಷ್ಣುವನ್ನು ಹೇಳುತ್ತವೋ ಎಂದು ಸಂದೇಹವು ಬಂದರೆ ಆಕಾಶಾದಿಗಳನ್ನು ಮಾತ್ರ ಹೇಳುತ್ತವೆ. ಎಂದು ಪೂರ್ವಪಕ್ಷವು. ಶ್ರೀವಿಷ್ಣುವನ್ನೂ ಹೇಳುತ್ತವೆಂದು ಸಿದ್ಧಾಂತವು. ಈ ಪೂರ್ವಪಕ್ಷ ಸಂಬಂಧಿಯಾಗಿ ವಿರೋಧಃ ಕಾರ್ಯಕಾರಣಯೋಃ ಕಾರ್ಯ ಕಾರಣಗಳಿಗೆ ವಿರೋಧವು, (ಅಂದರೆ ಒಬ್ಬನಿಗೇನೇ ಕಾರ್ಯ ಕಾರಣ ಭಾವವು ಕೂಡಲಾರದು. ಸಿದ್ಧಾಂತ ಸಾಧಕವಾಗಿ ಈಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ=ಶ್ರೀ ಹರಿಗೆ ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬ ವಿಶೇಷವು, ಎಂಬ ನ್ಯಾಯಗಳನ್ನು ವಿವರಿಸುತ್ತಾರೆ.

ಮೂ ॥ ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂಚ ॥ ೪ ॥

ಅ ॥ ಶ್ರೀ ವಿಷ್ಣುವು ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯನೆಂದಾದರೆ ಆತನಿಗೆ ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ। ವಾಯೋರಗ್ನಿಃ ಇತ್ಯಾದಿ ಶ್ರುತಿಗಳಿಂದ ಕಾರ್ಯತ್ವವೂ ಕಾರಣತ್ವವೂ ಪ್ರಾಪ್ತವಾಗುತ್ತದೆ. ಕಾರ್ಯವೂ ಕಾರಣವೂ ಒಂದೇಯಾಗಲಾರದಷ್ಟೆ. ಆದಕಾರಣ ಭೂತಾಕಾಶ ಭೂತವಾಯು ಮೊದಲಾದುದೇ ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯವೆಂದು ಪೂರ್ವಪಕ್ಷವು ಬಂದರೆ ಆಕಾಶಾದಿಗಳಲ್ಲಿರತಕ್ಕ ಶ್ರೀ ವಿಷ್ಣುರೂಪಗಳಿಗೆ ಒಂದೊಂದು ವಿಧವಾಗಿ ಅಂದರೆ ಕಾರ್ಯತ್ವೇನ ವ್ಯಕ್ತಿ, ಕಾರಣತ್ವೇನ ವ್ಯಕ್ತಿ, ಅದರಲ್ಲಿಯೂ ಕಾರ್ಯತ್ವೇನ ವ್ಯಕ್ತವಾದ ರೂಪದಲ್ಲಿ ಕಾರಣತ್ವೇನ ವ್ಯಕ್ತಿಯಿಲ್ಲ. ಹೀಗೆ ಕಾರಣತ್ವೇನ ವ್ಯಕ್ತವಾದ ರೂಪದಲ್ಲಿ ಕಾರ್ಯತ್ವೇನ ವ್ಯಕ್ತಿಯಿಲ್ಲ. ಹೀಗೆ ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬ ವಿಶೇಷಗಳನ್ನು ಅಪೇಕ್ಷಿಸಿಕೊಂಡು ಕಾರ್ಯಕಾರಣ ಭಾವವು ಕೂಡುತ್ತದೆ. ಆದ ಕಾರಣ ಶ್ರೀ ವಿಷ್ಣುವೇ ಮುಖ್ಯವಾಗಿ ಆಕಾಶ ವಾಯು ಮೊದಲಾದ ಶಬ್ದಗಳಿಂದ ವಾಚ್ಯನೆಂದು ಸಿದ್ಧಾಂತವು. ಕಾರ್ಯತ್ವಂಚ ಎಂಬಲ್ಲಿದ್ದ ಚ ಶಬ್ದವು ಅವ್ಯಕ್ತ್ಯಪೇಕ್ಷಯಾ ಕಾರಣತ್ವಂ, ಎಂಬುವುದಕ್ಕೆ ಸಮುಚ್ಚಾಯಕವು.

ವಿ ॥ ಶ್ರೀ ಹರಿಯು ಆಕಾಶಾದಿಗಳಲ್ಲಿ ಅಂತರ್ಗತನಾಗಿದ್ದುದರಿಂದ ಅಭಿವ್ಯಕ್ತವಾದ ಭಗವದ್ರೂಪದಿಂದ ವಾಯು ಅಗ್ನಿ ಮೊದಲಾದುವುಗಳಲ್ಲಿರತಕ್ಕ ರೂಪಾಂತರಗಳಿಗೆ ಅಭಿವ್ಯಕ್ತಿ ಯಾಗುವ ಕಾರಣ ವ್ಯಂಗ್ಯ ವ್ಯಂಜಕ ಭಾವರೂಪ ಕಾರ್ಯ ಕಾರಣ ಭಾವವು ಶ್ರೀ ಹರಿಗೆ ಅನಂತಾನಂತ ರೂಪಗಳಿದ್ದುದರಿಂದ ಕೂಡುತ್ತದೆ. ಏವಂಚ ತನ್ನ ಅಭಿವ್ಯಕ್ತಿಯನ್ನಿಟ್ಟುಕೊಂಡು ಕಾರ್ಯತ್ವವು ರೂಪಾಂತರಗಳಿಗೆ ಅಭಿವ್ಯಕ್ತಿಯನ್ನು ಮಾಡುವುದರಿಂದ ಕಾರಣತ್ವವೆಂದು ತಾತ್ಪರ್ಯವು ॥ ೪ ॥

ಬೇರೆ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳು ಭಾಷ್ಯದಲ್ಲಿಯೇ ವಿವೃತಗಳಾಗಿರುವುದರಿಂದ ಅವುಗಳನ್ನು ಇಲ್ಲಿ ವಿವರಿಸಲಿಲ್ಲ.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯ ವಿವರಣೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ। ಪ್ರಥಮಾಧ್ಯಾಯಶ್ಚ ಸಮಾಪ್ತ. ॥

# ಎರಡನೇ ಅಧ್ಯಾಯವು

**ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।**
**ಊದವೋಹಪುಹಂ ಕೇನ ಪ್ರೀಯತಾಂ ಕಮಲಾಪತಿಃ ॥**

ಆನಂದಮಯ ಮೊದಲಾದ ಸಮಸ್ತ ವೈದಿಕಶಬ್ದಗಳ ಸಮನ್ವಯದಿಂದ ಶ್ರೀ ಹರಿಯು ಜಗಜ್ಜನ್ಮಾದಿ ಕಾರಣನೆಂದು ಸಿದ್ಧವಾಗಲು ಆ ಪ್ರಥಮಾಧ್ಯಾಯದಲ್ಲಿ ಹೇಳಿದ ಅರ್ಥಗಳಿಗೆ ಯುಕ್ತ್ಯಾದಿವಿರೋಧವನ್ನು ಪರಿಹರಿಸುವುದಕ್ಕಾಗಿ ಈ ೨ನೇ ಅಧ್ಯಾಯವು ಪ್ರವೃತ್ತವಾಗಿದೆ. ಅದರಲ್ಲಿ ಸಮಸ್ತವಿರೋಧಗಳಿಗೂ ಯುಕ್ತಿಯು ಮೂಲವಾಗಿರುವುದರಿಂದ ಯುಕ್ತಿಯೇ ಮುಖ್ಯವಾಯ್ತು. ಆ ವಿರೋಧವನ್ನು ಪರಿಹರಿಸುವುದಕ್ಕಾಗಿ ಈ ೧ನೇ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಸಂಗ್ರಹಿಸಿ ಅನುವ್ಯಾಖ್ಯಾನದಲ್ಲಿ ಹೇಳಿದೆ. **ಆಪ್ತತಾ ಸಮತಾಽದೃಷ್ಟಿಃ ಶ್ರುತಿಸಾಮ್ಯಂ ಬಲೋದ್ಭವಃ । ಸರ್ವಾನುಸಾರೋ ಲಘುತಾ ವಿಶೇಷಾದರ್ಶನಾಫಲೇ । ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ । ಏತಾ ಏವ ಶ್ರುತಿಬಲಾತ್ ಸಿದ್ಧಾಂತಸ್ಯ ನಿಯಾಮಿಕಾಃ ॥** ಎಂದು.

ಸ್ಮೃತ್ಯಧಿಕರಣದಲ್ಲಿ ಮತಗಳ ವಿವಾದದಿಂದ ಜಗಜ್ಜನ್ಮಾದಿ ಕರ್ತೃತ್ವವು ಶ್ರೀ ವಿಷ್ಣುವಿಗೆ ಯುಕ್ತವಾಗುತ್ತದೋ, ಇಲ್ಲವೋ, ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಆಪ್ತತಾ ಎಂದು ಹೇಳಿದ ನ್ಯಾಯವನ್ನು ಪೂರ್ವಪಕ್ಷ ಸಿದ್ಧಾಂತಗಳ ಸಂಬಂಧಿಯಾಗಿ ವಿವರಿಸುತ್ತಾರೆ.

**ಸೂ ॥ ಓಂ । ರುದ್ರಾದೀನಾಂ ಸಕಾಶಾದ್ವಿಷ್ಣ್ವಾದೀನಾಮೇವಾಪ್ತತ್ವಂ ।**
**ಶ್ರುತ್ಯನುಸಾರಿತ್ವಾತ್** ॥ ೧ ॥

ಅ ॥ (ರುದ್ರಾದಿಗಳು ಜಗತ್ತಿಗೆ ಹಿತೋಪದೇಶಕರಾಗಿ ಸರ್ವಜ್ಞರಾಗಿರುವುದರಿಂದ ಆಪ್ತಿಯುಳ್ಳವರು ಆದ ಪ್ರಯುಕ್ತ ಅವರು ಮಾಡಿರುವ ಪಾಶುಪತಾದಿಸ್ಮೃತಿಗಳು ದೋಷವಿಲ್ಲದಿರುವುದರಿಂದ ಪ್ರಬಲಗಳಾಗಿ ನಿರವಕಾಶಗಳಾಗಿವೆ. ಆದುದರಿಂದ ಆ ಸ್ಮೃತಿಗಳಿಗೆ ವಿರುದ್ಧವಾದ ಅರ್ಥವನ್ನು ಹೇಳತಕ್ಕ ಶ್ರುತಿಗೆ ಅಪ್ರಾಮಾಣ್ಯವೇ ಬರುವುದರಿಂದ ಅಂತಹ ಶ್ರುತಿಯಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಎಂದು ಪೂರ್ವಪಕ್ಷವು ಬಂದರೆ— ವಿಷ್ಣ್ವಾದಿಗಳು ಮಾಡಿರುವ ಪಂಚರಾತ್ರಾದಿ ಸ್ಮೃತಿಗಳು) ಶ್ರುತಿಸಂವಾದವುಳ್ಳವುಗಳೂ ಶ್ರುತಿಮೂಲಕಗಳೂ ಆಗಿರುವುದರಿಂದ ರುದ್ರಾದಿಗಳಿಗಿಂತ ವಿಷ್ಣು ಮೊದಲಾದವರಿಗೇನೇ ಅತ್ಯಂತ ಆಪ್ತತ್ವವು ಇರುವುದರಿಂದ (ಆಪ್ತತ್ವವೇ ಸಿದ್ಧಾಂತಯುಕ್ತಿಯು) ಏವಂ ಚ ವೈಷ್ಣವಸ್ಮೃತಿಗಳನ್ನು ಪರಮಾಪ್ತರಾದ ವಿಷ್ಣ್ವಾದಿಗಳು ಮಾಡಿರುವುದರಿಂದ ನಿರವಕಾಶಗಳಾಗಿವೆ. ಅವುಗಳಿಂದಲೂ ಅವುಗಳಿಗೆ ಸಹಾಯಕಗಳಾದ ಶ್ರುತಿಯಿಂದಲೂ ಪಾಶುಪತಾದಿಸ್ಮೃತಿಗಳಿಗೆ ವಿರೋಧವು ಬರುವುದರಿಂದ ಅವುಗಳಿಗೆ ಅಪ್ರಾಮಾಣ್ಯವು ಬೇರೆ ಬರುತ್ತದೆ. ಆದಕಾರಣ ಶ್ರೀ ವಿಷ್ಣುವೇ ಜಗತ್ಕರ್ತನೆಂದು ಸಿದ್ಧವಾಯ್ತು. ॥ ೧ ॥

೨ನೇ ನವಿಲಕ್ಷಣತ್ವಾಧಿಕರಣದಲ್ಲಿ ಶ್ರುತ್ಯಾದಿಗಳು ಪ್ರಮಾಣಗಳೋ, ಅಲ್ಲವೋ, ಎಂದು ಸಂದೇಹವು ಬಂದರೆ ಪ್ರಮಾಣವಲ್ಲವೆಂದು ಪೂರ್ವಪಕ್ಷವು. ಪ್ರಮಾಣವೇ ಎಂದು ಸಿದ್ಧಾಂತವು. ಅಲ್ಲಿ ಸಮತಾ ಎಂಬ ನ್ಯಾಯವನ್ನೇ ಪೂರ್ವಪಕ್ಷ ಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ॥ ನ ಶ್ರುತೇಃ ರುದ್ರಾದಿ ಸ್ಮೃತಿಸಾಮ್ಯಂ।
ಕಿಂತು ಸಾಕ್ಷಿಪ್ರತ್ಯಕ್ಷ ಸಾಮ್ಯಮೇವ ನಿರಪೇಕ್ಷತ್ವಾತ್ ॥ ೨ ॥

ಅ॥ (ರುದ್ರಾದಿಗಳು ಮಾಡಿರುವ ಪಾಶುಪತಾದಿ ಸ್ಮೃತಿಗಳು ಅವಿದ್ಯಮಾನಾರ್ಥಗಳನ್ನು ಹೇಳುವುದರಿಂದ ಹೇಗೆ ಅಪ್ರಮಾಣಗಳೋ, ಹಾಗೆಯೇ ಕಾರೀರ್ಯಾ ಯಜೇತ ವೃಷ್ಟಿಕಾಮಃ ಕಾರೀರ್ಯಾದಿ ಯಾಗಗಳನ್ನು ಮಾಡಿದರೂ ವೃಷ್ಟ್ಯಾದಿಗಳು ಕಾಣದಿರುವುದರಿಂದ ಅವಿದ್ಯಮಾನಾರ್ಥಗಳನ್ನು ಹೇಳತಕ್ಕವುಗಳಾದುದರಿಂದ) ಶ್ರುತಿಗಳಿಗೂ ಪಂಚರಾತ್ರಾದಿಸ್ಮೃತಿಗಳಿಗೂ ರುದ್ರಾದಿಗಳು ಮಾಡಿದ ಸ್ಮೃತಿಗಳ ಸಾಮ್ಯವಿರುವುದರಿಂದ ಅಂತಹ ಶ್ರುತಿಯಿಂದ ಶ್ರೀ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ, ಎಂಬ ಪೂರ್ವಪಕ್ಷವು ಕೂಡುವುದಿಲ್ಲ. ಏಕೆಂದರೆ-ಸಾಕ್ಷಿ ಪ್ರತ್ಯಕ್ಷಕ್ಕೆ ಹೇಗೆ ಪ್ರಾಮಾಣ್ಯವು ನಿಯತವೋ ಹಾಗೆಯೇ ಶ್ರುತಿಗಳಿಗೂ, ಶ್ರುತಿಮೂಲಕಗಳಾದ ಪಂಚರಾತ್ರಾದಿಸ್ಮೃತಿಗಳಿಗೂ ಪ್ರಾಮಾಣ್ಯವು ನಿಯತವೇ. (ರುದ್ರಾದಿ ಸ್ಮೃತಿಗಳ ಸಾಮ್ಯವಲ್ಲ. ಏಕೆಂದರೆ) ಕರ್ತೃಗುಣ ಪ್ರಮಾಣಾಂತರಸಂವಾದ ಫಲ ಸಂವಾದ ಮೊದಲಾದವುಗಳ ಅಪೇಕ್ಷೆಯು ಇಲ್ಲದೆ ಸ್ವತ ಏವ ಪ್ರಮಾಣಗಳಾದುದರಿಂದ · ಶ್ರುತಿಗಳಿಗೆ ಸಾಕ್ಷಿಪ್ರತ್ಯಕ್ಷ ಸಾಮ್ಯವೇ. (ವಕ್ತೃವಲ್ಲಿ ದೋಷವಿದ್ದರೆ ವಾಕ್ಯಗಳಿಗೆ ಅಪ್ರಾಮಾಣ್ಯವು ಬರುವುದು. ಅನಾದಿ ನಿತ್ಯವಾದ ವೇದದಲ್ಲಿ ದೋಷಗಳನ್ನು ಕಲ್ಪಿಸುವದಕ್ಕೆ ಸಾಧ್ಯವಿಲ್ಲ. ಆದಕಾರಣ ನಿತ್ಯವಾಗಿರುವ ಪ್ರಯುಕ್ತ ದೋಷ ಸಂಪರ್ಕವಿಲ್ಲದಿರುವ ವಾಕ್ಯವಾಗಿರುವುದರಿಂದ ಇತರಾಪೇಕ್ಷೆಯೇ ಇಲ್ಲದಿರುವುದರಿಂದ ಸಾಕ್ಷಿಪ್ರತ್ಯಕ್ಷದಂತೆಯೇ ಶ್ರುತಿಗಳಿಗೆ ಪ್ರಾಮಾಣ್ಯವು. ಪಂಚರಾತ್ರಾದಿ ಸ್ಮೃತಿಗಳಿಗಾದರೂ ಶ್ರುತಿಗಳ ಅನುಕೂಲ್ಯವಿದ್ದುದರಿಂದ ಪ್ರಾಮಾಣ್ಯವು. ಆದಕಾರಣ ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ ಜಗತ್ಕರ್ತೃವು ಶ್ರೀವಿಷ್ಣುವಿಗೆ ಯುಕ್ತವು) ॥ ೨॥

ನೇ ಅಭಿಮಾನ್ಯಧಿಕರಣದಲ್ಲಿ ಅದೃಷ್ಟಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ॥ (೧) ನ ಮೃದಾದೀನಾಂ ವಚನಾದ್ಯದೃಷ್ಟಿಃ ಶ್ರುತ್ಯಪ್ರಾಮಾಣ್ಯಕಾರಣಂ ॥ (೨) ಅಪಿ ತು ವಚನಾದಿ ಶಕ್ತಾಯಾಃ ದೇವತಾಯಾಃ ಮೃದಾದಿ ಶಬ್ದವಾಚ್ಯತ್ವದ್ಯೋತಿಕೈವ ॥ ೩ ॥

ಅ॥ ಪ್ರತ್ಯಕ್ಷಾದಿ ಸಿದ್ಧಗಳಾದ ಮೃತ್ ಜಲ ತೇಜಸ್ಸು ಮೊದಲಾದ ಜಡಪದಾರ್ಥಗಳಿಗೆ ಮೃದಬ್ರವೀತ್ ಇತ್ಯಾದಿಗಳಲ್ಲಿ ಹೇಳಿದ ವಚನ ಈಕ್ಷಣ ಮೊದಲಾದವುಗಳು ಕಾಣದಿರುವಿಕೆಯು ಮತ್ತು ವಚನ ಈಕ್ಷಣಾದಿಗಳ ಅಭಾವವ್ಯಾಪ್ತಿಯು (ಸರ್ಗಸ್ಯಕಾಲೀನ ಮೃದಾದಿಕಂ ವಕ್ತೃತ್ವಾದ್ಯುಪೇತಂ ನ ಭವತಿ ಜಡತ್ವಾತ್ ಪ್ರಸಿದ್ಧ ಮೃದಾದಿವತ್ = ಸೃಷ್ಟಿಯ ಆದಿಕಾಲದಲ್ಲಿರತಕ್ಕ ಮೃದಾದಿಗಳು ವಕ್ತೃತ್ವಾದಿಗಳಿಂದ ಕೂಡಿದವುಗಳಲ್ಲ ಜಡವಾಗಿರುವುದರಿಂದ ಪ್ರಸಿದ್ಧಮೃದಾದಿಗಳಂತೆಯೇ, ಎಂಬ ಅನುಮಾನವನ್ನು ಎಬ್ಬಿಸಿ) ಮೃದಬ್ರವೀತ್ ಆಪೋಽಬ್ರುವನ್ ತಾ ಆಪ ಐಕ್ಷಂತ ತತ್ತೇಜ ಐಕ್ಷಂತ, ಓಷಧಯ ಸಂವದಂತೇ ಇದು ಮೊದಲಾದ ಶ್ರುತಿಗಳ ಅಪ್ರಾಮಾಣ್ಯಕ್ಕೆ ಕಾರಣವಾಗುತ್ತದೆ. ಆದಕಾರಣ ಅಂತಹ ಶ್ರುತಿಯಿಂದ ಶ್ರೀ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ, ಎಂದು ಪೂರ್ವ ಪಕ್ಷವು ಯುಕ್ತವಲ್ಲ (ಏಕೆಂದರೆ ಅದಕ್ಕೆ ಉತ್ತರವಾಗಿ ಅದೃಷ್ಟಿಃ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ. ಮೃದಾದಿಗಳಿಗೆ ವಚನಈಕ್ಷಣಾದಿಗಳ ಅದೃಷ್ಟಿಯು) ವಚನ ಈಕ್ಷಣಾದಿಗಳಲ್ಲಿ ಸಮರ್ಥವಾದ ವಕ್ತೃತ್ವಾದಿಗಳಿಗೆ ಉಚಿತಯುಕ್ತವಾದ ಶರೀರಾದಿಗಳುಳ್ಳ ಮೃದಾದ್ಯಭಿಮಾನಿ ದೇವತೆಗಳಿಗೆ ಮೃದಾದಿ ಶಬ್ದವಾಚ್ಯ

ತ್ವವನ್ನು ತೋರಿಸಿಕೊಡುತ್ತದೆಯೇ ಸರಿ. (ಅಂತೂ ವೇದವು ನಿರ್ದೋಷ ವಾಕ್ಯವಾಗಿರುವುದರಿಂದ ಅಪ್ರಾಮಾಣ್ಯವಿಲ್ಲವೆಂಬುದು ನಿಶ್ಚಿತವೇ. ಆದಕಾರಣ ವಿಷ್ಣುವಿಗೆ ಶ್ರುತ್ಯುಕ್ತವಾದ ಜಗತ್ಕಾರಣತ್ವವು ಯುಕ್ತವು) (ಏವಂಚ ಅಚೇತನಗಳಿಗೆ ವಚನ ಈಕ್ಷಣಾದಿಗಳ ಅದೃಷ್ಟಿಯು ಪೂರ್ವಪಕ್ಷ ನ್ಯಾಯವು. ನಿರ್ದೋಷ ವಾಕ್ಯಕ್ಕೆ ಅಪ್ರಾಮಾಣ್ಯದ ಅದೃಷ್ಟಿಯು (ಅಪ್ರಾಮಾಣ್ಯವಿಲ್ಲದಿರುವುದು) ಸಿದ್ಧಾಂತ ನ್ಯಾಯವು. ಏವಂಚ ಮೃದಬ್ರವೀತ್ ಇತ್ಯಾದಿಗಳು ಮೃದಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ಹೇಳಿದರು, ಇತ್ಯಾದ್ಯರ್ಥಗಳನ್ನು ಹೇಳುವವುಗಳಾದುದರಿಂದ ಪೂರ್ವಪಕ್ಷಿಯು ಹೇಳಿದ ಜಡತ್ವಾದಿಯುಕ್ತಿಗಳಿಂದ ವಿರೋಧವು ಬರುವುದಿಲ್ಲ || ೩ ||

೪ನೇ ಅಸದಧಿಕರಣದಲ್ಲಿ 'ಯತೋ ವಾ ಇಮಾನಿ ಭೂತಾನಿ ಜಾಯಂತೇ,' 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಶ್ರುತಿಸಾಮ್ಯಂ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ || ಈಶ್ವರಸ್ಯ ಸೃಷ್ಟಿಕರ್ತೃತ್ವವದಸತೋಽಪಿ ಸೃಷ್ಟಿಕರ್ತೃತ್ವಂ ಶ್ರೂಯತೇ ಇತಿ ನಾಸ್ತಿ |**
**ಸೋಽಸಚ್ಛಬ್ದೋ ಬ್ರಹ್ಮಶಬ್ದವದೇವ ಬ್ರಹ್ಮವಾಚಕಃ ಇತಿ ಶ್ರುತಿಸಾಮ್ಯಂ|| || ೪ ||**

ಅ || ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ಶ್ರುತಿಗಳಲ್ಲಿ ಶ್ರೀ ವಿಷ್ಣುವಿಗೆ ಜಗತ್ಸೃಷ್ಟಿಕರ್ತೃತ್ವವು ಶ್ರುತವಾದ ಹಾಗೆ 'ಅಸದೇವೇದಮಗ್ರ ಆಸೀತ್' ಇತ್ಯಾದಿಗಳಲ್ಲಿ ಅಸತ್ತಿಗೂ ಜಗತ್ಸೃಷ್ಟಿಕರ್ತೃತ್ವವು ಶ್ರುತವಾಗಿದೆ. (ಅಂತೂ ಬ್ರಹ್ಮನಿಗೂ ಅಸತ್ತಿಗೂ ಜಗತ್ಸೃಷ್ಟಿ ಕರ್ತೃತ್ವವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಸಾಮ್ಯವು. ಆದಕಾರಣ ಶ್ರೀ ಪರಮಾತ್ಮನಿಗೇನೇ ಸೃಷ್ಟಿ ಕರ್ತೃತ್ವಾದಿಗಳು ಎನ್ನುವುದು ನಿಶ್ಚಯವಾಗುವುದಿಲ್ಲ, ಎಂಬ ಪೂರ್ವಪಕ್ಷವು ಕೂಡುವುದಿಲ್ಲ, (ಏಕೆಂದರೆ ಶ್ರುತಿ ಸಾಮ್ಯಂ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ. ('ಅಥಾತಸ್ಸ್ವಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಎಂಬ ಶ್ರುತಿಬಲದಿಂದ) ಬ್ರಹ್ಮಶಬ್ದವು ಹೇಗೆ ಭಗವದ್ವಾಚಕವೋ ಹಾಗೆಯೇ, ('ತದ್ಧ್ವೈತದಾಸೀತ್ ಇತ್ಯಾಹ ನ ಹ್ಯಸಾದಯತಿ ಕಶ್ಚನ' ಎಂಬ ಶ್ರುತಿ ಬಲದಿಂದ 'ಅಸದೇವ' ಎಂಬ ಶ್ರುತಿಯಲ್ಲಿರತಕ್ಕ) ಅಸಚ್ಛಬ್ದವೂ ಬ್ರಹ್ಮವಾಚಕವು. ಆದಕಾರಣ ಅಸದೇವ ಎಂಬ ಶ್ರುತಿಗೆ ಯತೋ ವಾ ಇಮಾನಿ ಎಂಬ ಶ್ರುತಿಯ ಸಾಮ್ಯವೇ (ಏಕಾರ್ಥಪ್ರತಿಪಾದಕತ್ವವೇ) ಶ್ರುತ್ಯುಕ್ತವಾದ ಜಗತ್ಕಾರಣತ್ವವು ಶ್ರೀ ವಿಷ್ಣುವಿಗೆ ಯುಕ್ತವೇ, ಎಂದು ಸಿದ್ಧಾಂತವು. | ೪ ||

೫ನೇ ಭೋಕ್ತ್ರಧಿಕರಣದಲ್ಲಿ ಸೃಷ್ಟ್ಯಾದಿಕರ್ತೃತ್ವವು ಶ್ರೀಪರಮಾತ್ಮನಿಗೆ ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವ ಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಬಲೋಗ್ರವಃ ಶ್ರುತಿಯ ಬಲದಿಂದ (ಉದ್ಭವಃ) ಜ್ಞಾನವು ಯಸ್ಯ ಜೀವೇಶ್ವರೈಕ್ಯಸ್ಯ ಎಂಬ ವ್ಯುತ್ಪತ್ತಿಯಿಂದ ಜೀವೇಶ್ವರೈಕ್ಯವು ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ || (೧)ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತೀತಿ ಶ್ರುತಿಬಲಾದೈಕ್ಯಂ | ಕಿಂತು ಭೇದಾಪಾದಕಮೇವೈತತ್ (೨) 'ನಿರಂಜನಃ ಪರಮಂ ಸಾಮ್ಯಮುಪೈತಿ' 'ಪರಾತ್ಪರಂ ಪುರಿಶಯಂ ಪುರುಷಮುಪೈತಿ ದಿವ್ಯಮಿತಿ ಸನ್ನಿಹಿತವಾಕ್ಯಬಲಾತ್ (೩) ಏಕೀಭಾವಶಬ್ದಸ್ತು ತಾಮ್ಯೋಸ್ಯೇಽಪಿ ಭವತಿ || (೪) ಏಕೀಭೂತಾ**

ಕು ತಾ ಸೇನಾಃ ಪಾಂಡವಾನಭ್ಯವರ್ತತೇತಿವತ್ ॥ (೫) ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮೇತಿ ವಾಕ್ಯಾಂತರಾಚ್ಚ ॥ ೫ ॥

೫ ॥ ೧) ಕರ್ಮಾಭಿಮಾನಿಯಾದ ಪುಷ್ಕರನು, ಜ್ಞಾನಮಯನಾದ ಜೀವನೂ ಎಲ್ಲರೂ ನಾಶರಹಿತನಾದ ಶ್ರೀ ಪರಮಾತ್ಮನಲ್ಲಿ ಐಕ್ಯ ಹೊಂದುತ್ತಾರೆ, ಎಂಬ ಶ್ರುತಿಯ ಬಲದಿಂದ ಜೀವೈಶ್ವರೈಕ್ಯವು. (ಅಂತೂ ಜೀವಾಭಿನ್ನನಾದ ಶ್ರೀ ಹರಿಗೆ ಜೀವನಲ್ಲಿ ಸರ್ವಥಾ ಕೂಡದಿರುವ ಜಗತ್ಕರ್ತೃತ್ವವು ಯುಕ್ತವಲ್ಲ ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. ಪತ್ತಿ ಈ ಕರ್ಮಾಣಿ ಎಂಬ ಶ್ರುತಿವಾಕ್ಯವು ಜೀವೇಶ್ವರರಿಗೆ ಭೇದವನ್ನೇ ಸಮರ್ಥಿಸುವುದು, (ಹೇಗೆಂದರೆ ಏಕೀಭವಂತಿ ಎಂಬುವುದಕ್ಕೆ ಮುಕ್ತಿ ರೂಪ ಒಂದೇ ಸ್ಥಾನದಲ್ಲಿರುತ್ತಾರೆ. ಅಥವಾ ಏಕಮತಿಕರಾಗಿರುತ್ತಾರೆ. (ಅಂದರೆ ಶ್ರೀ ಹರಿಯ ಮತಿಗೆ ಅನುಕೂಲವಾದ ಬುದ್ಧಿಯುಳ್ಳವರಾಗಿರುತ್ತಾರೆ ಎಂದರ್ಥವು.) ೨) ಪೂರ್ವಪಕ್ಷದಲ್ಲಿ ಏಕೀಭವಂತಿ ಎಂದು ಇದ್ದಂತೆ ಸಿದ್ಧಾಂತದಲ್ಲಿ ಏನಿದೆ? ಎಂದರೆ) 'ದೋಷರಹಿತನಾಗಿ ಉತ್ತಮಸಾಮ್ಯವನ್ನೇ ಹೊಂದುತ್ತಾನೆ. (ಐಕ್ಯವನ್ನು ಹೊಂದುವುದಿಲ್ಲ.) ಉತ್ತಮೋತ್ತಮನಾದ ಸರ್ವರ ಹೃದಯದಲ್ಲಿ ನಿಯಾಮಕನಾಗಿರುವ ಲೋಕವಿಲಕ್ಷಣನಾದ ಸರ್ವಗುಣ ಪರಿಪೂರ್ಣನಾದ ಶ್ರೀ ಪರಮಾತ್ಮನ ಸಾಮೀಪ್ಯವನ್ನು ಹೊಂದುತ್ತಾನೆ, ಎನ್ನುವ ಸನ್ನಿಹಿತವಾಕ್ಯಬಲದಿಂದ 'ಕರ್ಮಾಣಿ' ಎಂಬ ಶ್ರುತಿವಾಕ್ಯವೂ ಭೇದವನ್ನೇ ತಿಳಿಸಿಕೊಡುತ್ತದೆ. (ಬಲೋದ್ಭವಃ = ಶ್ರುತಿಸಾಮರ್ಥ್ಯದಿಂದ ಉದ್ಭವಃ = ಜ್ಞಾನವು ಯಸ್ಯಜೀವೇಶ್ವರಭೇದಸ್ಯ ಎಂಬ ವ್ಯುತ್ಪತ್ತಿಯಿಂದ = ಜೀವೇಶ್ವರರ ಭೇದವೇ ಸಿದ್ಧಾಂತನ್ಯಾಯವು.) (೩) ಏಕೀಭವಂತಿ ಎಂಬ ಏಕೀಭಾವಶಬ್ದವಾದರೂ (ಸ್ವರೂಪೈಕ್ಯವಿಲ್ಲದಿದ್ದರೂ ಸಾಮೀಪ್ಯ ರೂಪ ಅರ್ಥದಲ್ಲಿಯೂ ಸ್ಥಾನೈಕ್ಯಗಳೆಂಬ ಅರ್ಥದಲ್ಲಿಯೂ ಸಂಗತವಾಗುತ್ತದೆ. (ಅಂದರೆ ಭಗವಂತನ ಸಮೀಪದಲ್ಲಿ ಮುಕ್ತಿರೂಪ ಒಂದೇ ಸ್ಥಾನದಲ್ಲಿ ಏಕ ಮನಸ್ಕರಾಗಿರುತ್ತಾರೆ.) (ಏಕೀಭಾವ ಶಬ್ದವು ವಾಕ್ಯಘಟಕವಾಗಿರುವ ಒಂದು ಶಬ್ದವಾದುದರಿಂದ ಅಂತರಂಗ (ಪ್ರಧಾನ)ವಾದುದಾಗ್ಯೂ ಸಾವಕಾಶ (ಅರ್ಥಾಂತರಪರ)ವಾಗಿರುವುದರಿಂದ ಪ್ರಬಲವಲ್ಲ. ನಿರಂಜನಃ ಇತ್ಯಾದಿ ಸನ್ನಿಹಿತ ವಾಕ್ಯವಾದರೂ ನಿರವಕಾಶವಾಗಿರುವುದರಿಂದ ಪ್ರಬಲವಾಗಿದೆ.) (೪) ಸ್ಥಾನೈಕ್ಯ ಮತ್ಯೈಕ್ಯ ಎಂಬ ಅರ್ಥಗಳಲ್ಲಿ ಏಕೀಭಾವಶಬ್ದ ಪ್ರಯೋಗವನ್ನು ತೋರಿಸುತ್ತಾರೆ. ಕೌರವರ ಸೈನ್ಯವು ಒಂದೇ ಸ್ಥಾನದಲ್ಲಿದ್ದೂ ಏಕಮತ್ಯದಿಂದ ಪಾಂಡವರನ್ನು ಎದುರಿಸಿತು. ಎಂಬುದರಂತೆ. (೫) (ಹೀಗೆ ಅಂತರೋಪಪತ್ತಿಯನ್ನು ಹೇಳಿ ಬಾಹ್ಯ ಉಪಪತ್ತಿಯನ್ನು ಹೇಳುತ್ತಾರೆ) ಶುದ್ಧವಾದ ನೀರಿನಲ್ಲಿ ಸ್ವಚ್ಛವಾದ ನೀರು ಸೇಚಿಸಲ್ಪಟ್ಟರೆ ಅಂತಹುದೇ ಆಗುತ್ತದೆ. (ವೃದ್ಧಿಯು ಕಾಣುವುದರಿಂದ ಅಭೇದವೇ ಆಗುವುದಿಲ್ಲ.) ಹೀಗೆಯೇ ಜ್ಞಾನಿಗಳಾದ ಮುನಿಗಳಿಗೆ ಅಧಿಪತಿಯಾದ ಚತುರ್ಮುಖನು ಕೂಡ ಮುಕ್ತನಾಗಿ ಶ್ರೀಪರಮಾತ್ಮನನ್ನು ಹೊಂದಿ ಸದೃಶನೇ ಆಗುತ್ತಾನೆ. (ಇತರರು ಸ್ವದರರೇ ಆಗುವರು. ಐಕ್ಯವನ್ನು ಹೊಂದುವುದಿಲ್ಲವೆಂದು ಸಿದ್ಧಾಂತಸಿದ್ಧ.) ಎಂಬ ವಾಕ್ಯಾಂತರ ಬಲದಿಂದಲೂ. (ಏವಂಚ ಜೀವೇಶ್ವರರಿಗೆ ಭೇದವೇ ಇರುವುದರಿಂದ ಜೀವನಲ್ಲಿ ಜಗತ್ಕರ್ತೃತ್ವವು ಸರ್ವಥಾ ಕೂಡದಿದ್ದರೂ ಜಗತ್ಕರ್ತೃತ್ವವು ಶ್ರೀ ವಿಷ್ಣುವಿಗೆ ಯುಕ್ತವೇ) ॥ ೫ ॥

೬ನೇ ಆರಂಭಣಾಧಿಕರಣದಲ್ಲಿ ಘಟಪಟಾದಿಗಳನ್ನು ಮಾಡಬೇಕಾದರೆ ಸ್ವತಂತ್ರ ಸಾಧನಗಳ ಅಪೇಕ್ಷೆಯು ಕಂಡಿದೆ. ಆದರೆ ಈಶ್ವರನು ಮಾಡತಕ್ಕ ಸೃಷ್ಟಿಯು ಅಲೌಕಿಕವು. ಆದಕಾರಣ ಜಗತ್ತಿನ ಸೃಷ್ಟ್ಯಾದಿಗಳಿಗೆ ಸ್ವತಂತ್ರ ಸಾಧನಗಳ ಅಪೇಕ್ಷೆಯು ಇದೆಯೋ ಇಲ್ಲವೋ, ಎಂದು ಸಂದೇಹವು ಬಂದರೆ ಸ್ವತಂತ್ರ ಸಾಧನಗಳ ಅಪೇಕ್ಷೆಯು ಇದೆಯೆಂದು ಪೂರ್ವ ಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ ಸರ್ವಾರ್ಥಸಾರೀ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಸೂ || (೧) ನ ಲೌಕಿಕಸರ್ವಕಾರ್ಯಾನುಸಾರೇಣಾಕರ್ತೃತಂತ್ರತ್ವಂ ಸರ್ವಾನುಸಾರಃ || (೨) ಕಿಂತರ್ಹಿ ತದ್ವೈಲಕ್ಷಣ್ಯೇನ ಸರ್ವಕರ್ತೃವಿಲಕ್ಷಣಸರ್ವಶಕ್ತಿತ್ವಮೇವಾಶೇಷ ಯುಕ್ತಿಶ್ರುತ್ಯನುಸಾರಿ । 'ಏಷ ಸರ್ವೇಶ್ವರಃ' ಇತ್ಯಾದಿಶ್ರುತೇಃ || (೩) ಯುಕ್ತಿಮಾತ್ರಾಚ್ಛ್ರುತಿಯುಕ್ತಾ ಹಿ ಯುಕ್ತಿರ್ಬಲವತೀ || ೬ ||

ಅ || (೧) ಲೌಕಿಕಗಳಾದ ಸರ್ವಕಾರ್ಯಗಳನ್ನು ಅನುಸರಿಸಿ ಶ್ರೀ ಹರಿಯು ಉಪಾದಾನಾದಿಭೂತ ಪ್ರಧಾನಾದಿಗಳನ್ನು ಮಾಡಿದುದರಿಂದ ಕೇವಲ ಸ್ವತಂತ್ರ ಪರಮಾತ್ಮನ ಅಧೀನವಲ್ಲ, ಹೀಗೆ ಸರ್ವಾನುಸಾರವು. ಅಂತೂ ಲೌಕಿಕ ಸಮಸ್ತಕಾರ್ಯಗಳಂತೆಯೇ ಶ್ರೀಹರಿಯು ಮಾಡತಕ್ಕ ಕಾರ್ಯವೂ ಕಾರ್ಯವಾಗಿರುವುದರಿಂದ ಸ್ವತಂತ್ರ ಸಾಧನಗಳ ಅಪೇಕ್ಷೆಯು ಇದ್ದೇ ಇದೆ, ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) ಮತ್ತೆ (ಅದಕ್ಕೆ ಉತ್ತರವಾಗಿ **ಸರ್ವಾನುಸಾರಃ** ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.) ಲೌಕಿಕ ಸರ್ವಕಾರ್ಯಗಳ ರೀತಿಯಿಂದ ವಿಲಕ್ಷಣವಾಗಿ (ಅಂದರೆ ಸ್ವತಂತ್ರ ಸಾಧನಗಳ ಅಪೇಕ್ಷೆಯಿಲ್ಲದೇನೇ) ಸಮಸ್ತ ಕಾರ್ಯಗಳನ್ನು ಮಾಡತಕ್ಕ ಶ್ರೀಪರಮಾತ್ಮನಿಗೆ ಕುವಿಂದ ಕುಲಾಲಾದಿ ಸರ್ವಕರ್ತೃಗಳ ರೀತಿಯಿಂದ ವಿಲಕ್ಷಣವಾದ, ಸಾಧನಾಂತರಗಳ ನಿಯಾಮನಾದಿರೂಪವಾದ ಸರ್ವಶಕ್ತಿಯಿದೆ ಎಂಬುವುದೇ ಸರ್ವಯುಕ್ತಿ ಶ್ರುತಿಗಳಿಂದ ಸಿದ್ಧವಾಗಿದೆ. '**ಏಷ ಸರ್ವೇಶ್ವರಃ ಏಷ ಸರ್ವಜ್ಞಃ** ಶ್ರೀ ಹರಿಯೇ ಸರ್ವರಿಗೂ ನಿಯಾಮಕನು, ಸರ್ವಜ್ಞನು '**ಪರತಂತ್ರೋ ಹ್ಯಪೇಕ್ಷೇತ ಸ್ವತಂತ್ರಃ ಕಿಮಪೇಕ್ಷತೇ** || ಪರಾಧೀನನಾದವನು ಇತರ ವಸ್ತುಗಳನ್ನು ಅಪೇಕ್ಷಿಸಿಯಾನು, ಸರ್ವಸ್ವತಂತ್ರನಿಗೆ ಇತರಾಪೇಕ್ಷೆಯು ಏತಕ್ಕೆ? ಇದು ಮೊದಲಾದ ಶ್ರುತಿ ಸ್ಮೃತಿಗಳಿಂದ (ಶ್ರೀ ಹರಿಗೆ ಪರಾಧೀನತೆಯಿಲ್ಲದಿರುವಿಕೆ ಸರ್ವಸ್ವಾತಂತ್ರ್ಯ, ಸಾಧನವಸ್ತುಗಳಿಗೂ ಸತ್ತಾಪ್ರದತ್ವ ಮೊದಲಾದವು ಸಿದ್ಧಿಸುತ್ತವೆ. (೩) ಪೂರ್ವಪಕ್ಷದ ಕೇವಲಯುಕ್ತಿಗಿಂತ ಸಿದ್ಧಾಂತೀಯ ಯುಕ್ತಿಯು ಶ್ರುತಿಯುಕ್ತವಾದ ಪ್ರಯುಕ್ತ ಪ್ರಬಲವು. (ವಸ್ತುತಃ ಪೂರ್ವಪಕ್ಷ ಯುಕ್ತಿಯು ಬಾಧಿತವಾಗಿರುವುದರಿಂದ ಯುಕ್ತಿಯೇ ಅಲ್ಲ) (ಎವಂಚ ಶ್ರೀ ಹರಿಗೆ ಜಗತ್ತನ್ನು ಸೃಷ್ಟಿಮಾಡಲಿಕ್ಕೆ ಸಾಧನಗಳ ಅಪೇಕ್ಷೆಯೇ ಇಲ್ಲ. ಹೀಗೆ ಸರ್ವಶ್ರುತಿಯುಕ್ತಿಗಳಿಂದ ಸಿದ್ಧವಾಗಿದೆ. ಸ್ವರೂಪ ಸಾಮರ್ಥ್ಯದಿಂದಲೇ ಸೃಷ್ಟಿಮಾಡುತ್ತಾನೆ.।೬||

೭ನೇ ಇತರವ್ಯಪದೇಶಾಧಿಕರಣದಲ್ಲಿ ಜಗತ್ಕರ್ತೃತ್ವಾದಿಗಳು ಶ್ರೀ ವಿಷ್ಣುವಿಗೆ ಯುಕ್ತವೋ ಅಯುಕ್ತವೋ ಎಂದು ಸಂಶಯವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಲಘುತಾ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಸೂ || (೧) ನ ಚೇಶ್ವರತ್ಯಾಗೇನ ಜೀವಸ್ಯೈವ ಕರ್ತೃತ್ವಾಂಗೀಕಾರೇ ಕಲ್ಪನಾಲಾಘವಂ। (೨) ಶ್ರುತಿಸಿದ್ಧತ್ವೇನಾಕಲ್ಪನಾತ್ । ಅಶ್ರುತಜೀವಕರ್ತೃತ್ವಾಂಗೀಕಾರೇಣ ಗೌರವಮೇವ। (೩) ತದಭಾವಃ ಸಿದ್ಧಾಂತೇ ಲಘುತಾ ||(೪) 'ನಾನ್ಯಃ ಕರ್ತಾ ಸ ಹಿ ಸ್ವತಂತ್ರಃ' 'ಪರಮಾತ್ಮೋ ಹರಿರಿ'ತ್ಯಾದೇಶ್ಚ || (೫) ಅಭೇದಪಕ್ಷಸ್ತು ನಿರಾಕೃತಃ । ಶ್ರುತ್ಯನುಭವವಿರೋಧಾಚ್ಚ || ೭ ||

ಅ || (೧) (ಶ್ರೀಹರಿಯೇ ಮಹದಾದಿಸಕಲಕಾರ್ಯಗಳನ್ನು ಮಾಡುವವನೆಂಬುವುದು ಯುಕ್ತವಲ್ಲ. ಪ್ರತ್ಯಕ್ಷನಾಗದಿದ್ದ ಶ್ರೀ ಪರಮಾತ್ಮನನ್ನು ಕಲ್ಪಿಸಿಕೊಂಡು ಅತನೇ ಸರ್ವಕರ್ತನೆಂದು ಕಲ್ಪಿಸಿದರೆ ಕಲ್ಪನಾಗೌರವವು ಬರಬೇಕಾಗುವುದು.) ಶ್ರೀ ಪರಮಾತ್ಮನನ್ನಂಗೀಕರಿಸದೆ ಜೀವನೇ ಸರ್ವಕರ್ತನೆಂದಂಗೀಕರಿಸಿ

ದರೆ ಕಲ್ಪನಾಲಾಘವವು. ಧರ್ಮಿ (ಪರಮಾತ್ಮರೂಪಕರ್ತೃ)ಯನ್ನೂ ಕಲ್ಪಿಸುವುದಕ್ಕಿಂತ ಧರ್ಮ (ಸಿದ್ಧನಾದ ಜೀವನಲ್ಲಿ ಕರ್ತೃತ್ವ) ವನ್ನು ಕಲ್ಪಿಸುವುದು ಲಘುವಾಗಿದೆ ಮತ್ತು ಜೀವನೇ ಘಟಪಟಾದಿಗಳನ್ನೂ ಮಾಡುವವನೆಂಬುವುದು ಅನುಭವ ಸಿದ್ಧವೂ ಆಗಿದೆ.) (ಹಾಗಾದರೆ ಶ್ರೀ ಹರಿಗೂ ದೇವಾದಿಗಳಂತೆಯೇ ಅದೃಶ್ಯತ್ವ ಶಕ್ತಿಯಿದ್ದ ಪ್ರಯುಕ್ತ ಶ್ರೀ ಹರಿಯು ಪ್ರತ್ಯಕ್ಷನಾಗದಿದ್ದರೂ ಅತನನ್ನು ಪ್ರಮಾಣಾನುಸಾರ ಅಂಗೀಕರಿಸುತ್ತೇವೆ ಎಂದರೆ ಆದಾಗ್ಯೂ ಅತನು ಮಹದಾದಿಕಾರ್ಯಗಳಲ್ಲಿಯೇ ಕರ್ತನೆಂದಾಗಲಿ, ಘಟಪಟಾದಿಗಳಿಗೆ ಕರ್ತನೆಂದಾಗುವುದು ಬೇಡ. ಎರಡು ಕಡೆಗಳಲ್ಲಿಯೂ ಅತನೇ ಕರ್ತನೆಂದು ಕಲ್ಪಿಸಿದರೆ ಗೌರವವು ಬರುವುದು. ಘಟ ಪಟಾದಿಗಳಿಗೆ ಈಶ್ವರನು ಕರ್ತನಲ್ಲ, ಜೀವನೇ ಕರ್ತನೆಂದಂಗೀಕರಿಸಿದರೆ ಕಲ್ಪನಾಲಾಘವವು.) ಎಂದರೆ ಹೀಗೂ ಹೇಳಕೂಡದು. (ಏಕೆಂದರೆ ಲಘುತಾ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.) (೨) (ಪ್ರಮಾಣವಿಲ್ಲದೆ ಬಹುಧಾ ಕಲ್ಪಿಸಿದರೇನೇ ಕಲ್ಪನಾಗೌರವವು ಶ್ರೀ ಹರಿಯೇ ಘಟ ಪಟಾದಿ ಸಮಸ್ತ ಕಾರ್ಯಗಳನ್ನು ಮಾಡುವವನೆಂಬುವುದು) ಶ್ರುತ್ಯಾದಿಗಳಲ್ಲಿ ಸಿದ್ಧವಾದ ಪ್ರಯುಕ್ತ ಕಲ್ಪನೆಯೇ ಇಲ್ಲ. (ಆದಕಾರಣ ಎರಡು ಪಕ್ಷಗಳಲ್ಲಿ ಹೇಳಿದ ಗೌರವವೂ ಇಲ್ಲ.) ಜೀವನೇ ಸ್ವತಂತ್ರವಾಗಿ ಮಹದಾದಿಗಳನ್ನೂ ಘಟಾದಿಗಳನ್ನೂ ಮಾಡುವವನೆಂಬುವುದು ಎಲ್ಲಿಯೂ ಶ್ರುತವಾಗದಿದ್ದ ಪ್ರಯುಕ್ತ ಹಾಗೆ ಅಂಗೀಕರಿಸಿದರಿಂದಲೇ ಗೌರವವು. (೩) (ಈಶ್ವರನೇ ಕರ್ತನೆಂದಂಗೀಕರಿಸಿದರೆ ಗೌರವವಿಲ್ಲ. ಮತ್ತೆ) ಶ್ರೀ ಹರಿಯೇ ಕರ್ತನೆಂಬುವುದು ಶ್ರುತ್ಯಾದಿ ಪ್ರಮಾಣ ಸಿದ್ಧವಾದ ಪ್ರಯುಕ್ತ ಅಪ್ರಾಮಾಣ್ಯವು ಇಲ್ಲ. ಆದ ಕಾರಣ ಸಿದ್ಧಾಂತದಲ್ಲಿ ಈಶ್ವರನೇ ಸರ್ವಕರ್ತನೆಂಬುವ ಪಕ್ಷದಲ್ಲಿಯೇ ಲಘುತ್ವವು. (೪) ಮತ್ತು ಶ್ರೀ ಹರಿಯಿಂದ ಭಿನ್ನನಾದವನು ಯಾರೊಬ್ಬನೂ ಸ್ವತಂತ್ರವಾಗಿ ಸೃಷ್ಟಿಕರ್ತನಿಲ್ಲ. ಅತನೇ ಸರ್ವಸ್ವತಂತ್ರನು. ಇತರರ ಪ್ರೇರಣೆಯಿಲ್ಲದೇನೇ ಸರ್ವಕರ್ತನು. ಶ್ರೀ ಹರಿಯೇ ಉತ್ತಮೋತ್ತಮನು, ಇದು ಮೊದಲಾದ ನಾನ್ಯಃ ಕರ್ತಾ ಇತ್ಯಾದಿ ಶ್ರುತಿಗಳಿಂದ (ಶ್ರೀ ಹರಿಯೇ ಸರ್ವಕಾರ್ಯಕರ್ತನೆಂದೂ ಜೀವನು ಸ್ವತಂತ್ರ ಕರ್ತನಲ್ಲವೆಂದೂ ಸಿದ್ಧಿಸುತ್ತದೆ.) (೫) (ಹಾಗಾದರೆ ಶ್ರುತಿಯು ಶ್ರೀ ಹರಿಯೇ ಸ್ವತಂತ್ರವಾಗಿ ಸರ್ವಕರ್ತನೆಂದೂ ಪ್ರತಿಪಾದಿಸುತ್ತದೆ. ಅಹಂಕರೋಮಿ ಇತ್ಯಾದ್ಯನುಭವವು ಜೀವನು ಕರ್ತನೆಂದು ತಿಳಿಸುತ್ತದೆ. ಸ್ವತಂತ್ರಗಳಾದ ಎರಡು ವಸ್ತುಗಳನ್ನು ಅಂಗೀಕರಿಸುವುದು ಶಕ್ಯವಲ್ಲ. ಆದಕಾರಣ ಶ್ರುತಿ ಅನುಭವ ಅನ್ಯಥಾನುಪಪತ್ತಿಯಿಂದ ಜೀವೇಶ್ವರರಿಗೆ ಅಭೇದವನ್ನಂಗೀಕರಿಸಿದರೆ ಎರಡೂ ಕೂಡುತ್ತದೆಂದರೆ) ಜೀವೇಶ್ವರರಿಗೆ ಅಭೇದವೆಂಬ ಪಕ್ಷವು ಭೋಕ್ತ್ರಾಪತ್ತೇಃ ಇತ್ಯಾದಿಗಳಲ್ಲಿಯೇ ನಿರಾಕರಿಸಲ್ಪಟ್ಟಿದೆ. (ಅನುಭವವು ಪರಾಧೀನನಾಗಿ ಕೆಲವು ಕಾರ್ಯಗಳನ್ನು ಮಾಡುವವನೆಂದು ತಿಳಿಸುವುದು. (ಅಲ್ಲದೆ ದ್ವಾ ಸುಪರ್ಣಾ ಇತ್ಯಾದಿ ಶ್ರುತಿಗಳೂ, ನಾಹಂಕರೋಮಿ ಇದು ಮೊದಲಾದ ಅನುಭವಗಳೂ, ಇವುಗಳ ವಿರೋಧಗಳೂ ಬರುತ್ತವೆ. (ಅದುದರಿಂದಲೂ (ಜೀವೇಶ್ವರರಿಗೆ ಅಭೇದವೆಂಬ ಪಕ್ಷವು ಯುಕ್ತವಲ್ಲ.) (ಅಂತೂ ಪ್ರಮಾಣ ಸಿದ್ಧವಾದ ಪಕ್ಷವೇ ಲಘುವಾಗಿರುವುದರಿಂದ ಶ್ರೀ ಹರಿಯೇ ಕರ್ತನೆಂಬುವುದು ಶ್ರುತಿ ಸಿದ್ಧವಾದ ಪ್ರಯುಕ್ತ ಶ್ರೀ ಹರಿಯೇ ಸರ್ವಕರ್ತನೆಂಬುವುದು ಯುಕ್ತವು ॥ ೭ ॥

೮ನೇ ಶ್ರುತ್ಯಧಿಕರಣದಲ್ಲಿ ಶ್ರೀ ಹರಿಗೆ ಜಗತ್ಸ್ರಷ್ಟೃತ್ವವು ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು, ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ವಿಶೇಷಾದರ್ಶನಂ ಎಂಬ ನ್ಯಾಯವನ್ನು ಸಿದ್ಧಾಂತಸಂಬಂಧಿಯಾಗಿ ವಿವರಿಸುತ್ತಾ ಪೂರ್ವಪಕ್ಷಸಂಬಂಧಿಯಾಗಿಯೂ ವಿವರಿಸಿಕೊಂಡು ತಿರಸ್ಕರಿಸುತ್ತಾರೆ.

**ಮೂ॥ (೧) ಶಬ್ದೈಕಸಮಧಿಗಮ್ಯತ್ವ ಸರ್ವಶಕ್ತಿತ್ವಾದೀನಾಂ ವಿಶೇಷಾಣಾಮದರ್ಶನಾತ್**
**ಜೀವೇ(೨)ನ ಜೀವಾದ್ವಿಶೇಷಾದರ್ಶನಂ ಪರಮೇಶ್ವರೇ । ವಿಶೇಷ ಶ್ರುತೇರೇವ॥ ೮ ॥**

ಅ ॥ (೧) (ಶ್ರೀಹರಿಯು ಶಬ್ದಮೂಲತ್ವಾತ್ ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ) ಋಗಾದಿ ಸದಾಗಮಗಳಿಂದಲೇ ತಿಳಿಯಲ್ಪಡುವವನು, (ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಇತ್ಯಾದಿ ಸೂತ್ರಗಳಲ್ಲಿ ಹೇಳಿದ ಪ್ರಕಾರ ಸರ್ವ ಶಕ್ತ್ಯಾದಿಗಳುಳ್ಳವನು, ಇದು ಮೊದಲಾದ ವಿಶೇಷಗಳು ಜೀವರಲ್ಲಿ ಕಾಣದಿರುವುದರಿಂದಲೂ, ಜ್ಞಾಪಕಗಳಾದ ಶ್ರುತ್ಯಾದಿ ರೂಪ ಪ್ರಮಾಣಗಳಿಲ್ಲದಿರುವುದರಿಂದಲೂ (ಶ್ರೀ ಹರಿಯೇ ಸರ್ವಕರ್ತನು.) (೨) (ಹಾಗಾದರೆ ಜೀವರಂತೆ) ಶ್ರೀ ಪರಮಾತ್ಮನಲ್ಲಿಯೂ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳನ್ನು ಹೋಗಲಾಡಿಸುವ ಜೀವರಲ್ಲಿಲ್ಲದಿರುವ ವಿಶೇಷಗಳು ಕಾಣುವುದಿಲ್ಲ. ಎಂದರೆ ಹಾಗೆ ಹೇಳಕೂಡದು. ಮತ್ತೆ ವಿಶೇಷ ದರ್ಶನವಿದೆ.(ಹೇಗೆಂದರೆ) (1)ನಾವೇದವಿನ್ಮನುತೇ ತಂ ಬೃಹಂತಂ ವೇದಗಳ ಜ್ಞಾನವಿಲ್ಲದವನು ಸರ್ವಗುಣ ಪರಿಪೂರ್ಣನಾದ ಶ್ರೀಪರಮಾತ್ಮನನ್ನು ತಿಳಿಯುವುದಿಲ್ಲ. (2)ವಿಚಿತ್ರಶಕ್ತಿಃ ಪುರುಷಃ ಪುರಾಣಃ' ಅನಾದಿನಿತ್ಯನಾದ ಶ್ರೀ ಪರಮಾತ್ಮನು ಲೋಕವಿಲಕ್ಷಣ ಶಕ್ತಿಯುಳ್ಳವನು, ಬೇರೆ ಯಾರಿಗೂ ಅಂತಹ ಶಕ್ತಿಯಿಲ್ಲ, ಇದು ಮೊದಲಾದ ಪ್ರಸಿದ್ಧ ಶ್ರುತಿಗಳ ದೆಸೆಯಿಂದ, ಶ್ರೀಹರಿಯು ಕೇವಲ ಆಗಮಗಳಿಂದಲೇ ತಿಳಿಯಲ್ಪಡುವವನು, ಇದು ಮೊದಲಾದ ವಿಶೇಷಗಳು ಶ್ರೀಹರಿಯಲ್ಲಿಯೇ ಇರುವವುಗಳು. ಜೀವರಲ್ಲಿ ಸರ್ವಥಾ ಇಲ್ಲ. ಆದಕಾರಣ ಶ್ರೀಹರಿಗೆ ಜೀವರ ಸಾಮ್ಯವಿಲ್ಲ. ಜಗತ್ಕರ್ತೃತ್ವವು ಯುಕ್ತವೇ. ॥ ೮ ॥

೯ನೇ ನಪ್ರಯೋಜನಾಧಿಕರಣದಲ್ಲಿ ಈಶ್ವರನು ಜಗತ್ಕರ್ತನೆಂಬುವುದು ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ-ಯುಕ್ತವಲ್ಲವೆಂದು ಪೂರ್ವಪಕ್ಷವು, ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಅಫಲಂ ಪ್ರಯೋಜನವಿಲ್ಲದಿರುವುದು ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ (೧) ನ ಚ ಪ್ರಯೋಜನಾಭಾವೋಽಕರ್ತೃತ್ವೇ ಕಾರಣಂ । (೨) ಅಶೇಷಕರ್ತೃತ್ವಾಪಾದಕತ್ವ । ಫಲಾಪೇಕ್ಷಿಣಸ್ತ್ವಪೂರ್ಣತ್ವಾದೇವ ನ ಸರ್ವಕರ್ತೃತ್ವಾದಿ ಶಕ್ತಿಃ । (೩) ಇತರಸ್ಯ ಪೂರ್ಣತ್ವಾದೇವಾನಂತಶಕ್ತಿತ್ವಾಲ್ಲೀಲಯೈವ ಕರ್ತೃತ್ವಂ ॥ ೯ ॥

ಅ ॥ (೧) (ಪ್ರಯೋಜನವಿಲ್ಲವಾದರೆ ಕಾರ್ಯದಲ್ಲಿ ಪ್ರವೃತ್ತಿಯೇ ಕಾಣದಿರುವುದರಿಂದ ಶ್ರೀಹರಿಯು ಆಪ್ತಕಾಮನಾಗಿರುವುದರಿಂದ ಆತನಿಗೆ ಪ್ರಯೋಜನವೇ ಇಲ್ಲ. ಶ್ರೀ ಹರಿಗೆ ಪ್ರಯೋಜನವೇ ಇಲ್ಲವೆಂದು ಒಡಂಬಟ್ಟರೆ ಕರ್ತೃತ್ವವೇ ಕೂಡದೆ ಹೋಗುವುದು. ಸರ್ವಕರ್ತೃತ್ವವು ಸುತರಾಂ ಕೂಡಲಾರದು. ಆದಕಾರಣ ಪ್ರಯೋಜನವಿಲ್ಲದಿರುವುದೇ ಶ್ರೀಹರಿಗೆ ಕರ್ತೃತ್ವವಿಲ್ಲವೆನ್ನುವ ವಿಷಯದಲ್ಲಿ ಜ್ಞಾಪಕವು,ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ಅಫಲಂ ಎಂಬ ನ್ಯಾಯವನ್ನೇ ಸಿದ್ಧಾಂತಸಂಬಂಧಿಯಾಗಿಯೂ ವಿವರಿಸುತ್ತಾರೆ.) ((೨) ಪ್ರಯೋಜನವಿಲ್ಲವೆನ್ನುವುದು ಈಶ್ವರನು ಕರ್ತನಲ್ಲ ಎಂಬ ವಿಷಯದಲ್ಲಿ ಜ್ಞಾಪಕವಾಗಲಾರದು ಮತ್ತೆ) ಸರ್ವಕರ್ತನೆಂಬುದನ್ನೇ ತಿಳಿಸಿಕೊಡುತ್ತದೆ. (ಹೇಗೆಂದರೆ) ಪ್ರಯೋಜನವನ್ನಪೇಕ್ಷಿಸುವವನು ಅಪೂರ್ಣನಾಗಿರುವುದರಿಂದಲೇ ಆತನಿಗೆ ಸರ್ವಕರ್ತೃತ್ವಾದಿ ರೂಪವಾದ ಶಕ್ತಿಯಿರುವುದಿಲ್ಲ (೩) ಫಲಾಪೇಕ್ಷೆಯಿಲ್ಲದವನಿಗೆ ಪೂರ್ಣತ್ವವಿದ್ದುದರಿಂದಲೇ ಅನಂತಾನಂತ ಶಕ್ತಿಯಿದ್ದುದರಿಂದ ಕ್ರೀಡೆಯಿಂದಲೇ ಸರ್ವಕರ್ತೃತ್ವವೂ ಕೂಡುತ್ತದೆ.

ವಿ ॥ (1) ಈಶ್ವರಃ ಸರ್ವಕರ್ತಾ ಅನಂತಶಕ್ತಿಮತ್ತ್ವಾತ್ ವ್ಯತಿರೇಕೇಣ ದೇವದತ್ತವತ್ = ಶ್ರೀಹರಿಯು ಸರ್ವಕರ್ತನು, ಅನಂತಾನಂತ ಶಕ್ತಿಯುಳ್ಳವನಾದುದರಿಂದ ವ್ಯತಿರೇಕದಿಂದ (ಇವೆರಡು ಹೇತುಗಳು ಇಲ್ಲದಿರುವುದರಿಂದ) ದೇವದತ್ತನಂತೆ. ಈ ಹೇತುವಿಗೆ ಸ್ವರೂಪಾಸಿದ್ಧಿಯು (ಪಕ್ಷದಲ್ಲಿ ಹೇತುವು ಸಿದ್ಧವಾಗಿಲ್ಲ) ಎಂದು ಹೇಳಕೂಡದು.) (2) ಈಶ್ವರಃ ಅನಂತಶಕ್ತಿಃ ಪೂರ್ಣತ್ವಾತ್ — ಶ್ರೀ ಹರಿಯು ಅನಂತ

ಶಕ್ತಿಯುಳ್ಳವನು. ಸರ್ವಗುಣಪರಿಪೂರ್ಣನಾಗಿರುವುದರಿಂದ ಪೂರ್ಣನಾದವನಿಗೆ ಅನಂತಶಕ್ತಿಯು ಇದ್ದೇ ಇದೆ. ಅಪೂರ್ಣನಾದವನಿಗೇನೇ ಸರ್ವಕರ್ತೃತ್ವಾದಿಶಕ್ತ್ಯಭಾವವು. ಫಲಾಪೇಕ್ಷೆಗೆ ಅಪೂರ್ಣತ್ವವು ನಿಯತವು. ಫಲಾಪೇಕ್ಷೆಯಿಲ್ಲದವನಿಗೆ ಪೂರ್ಣತ್ವವು ನಿಯತವು. ಹೀಗೆ ಪ್ರಯೋಜನಾಭಾವವು ಪರಂಪರೆಯಿಂದ ಶ್ರೀ ಹರಿಗೆ ಸರ್ವಕರ್ತೃತ್ವವನ್ನು ತಿಳಿಸಿ ಕೊಡುತ್ತವೆ. ಏವಂಚ ಶ್ರೀ ಹರಿಗೆ ಪ್ರಯೋಜನವಿಲ್ಲದಿದ್ದರೂ ಲೀಲೆಯಿಂದಲೇ ಪ್ರವೃತ್ತಿಯು. ಹೀಗೆ ಫಲಾಭಾವವೇ ಸಿದ್ಧಾಂತ ಯುಕ್ತಿಯು ॥ ೯ ॥

೧೦ನೇ ವೈಷಮ್ಯಾಧಿಕರಣದಲ್ಲಿ ಜಗಜ್ಜನ್ಮಾದಿಕರ್ತೃತ್ವವು ಶ್ರೀಹರಿಗೆ ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಇಷ್ಟಾಸಿದ್ಧಿಃ=ಇಷ್ಟವಾದ ಸರ್ವಕರ್ತೃತ್ವಕ್ಕೆ ಅಸಿದ್ಧಿಯು,ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ (೧) ನೇಶಸ್ಯ ಪೂರ್ಣತ್ವಾಸಿದ್ಧಿಃ । ಕರ್ಮಸಾಪೇಕ್ಷತ್ವೇಽನೀಶತ್ವಮನಪೇಕ್ಷತ್ವೇ ಶ್ರುತೇರಪ್ರಾಮಾಣ್ಯಮಿತಿ ॥ (೨) ಕರ್ಮಣೋಽಪಿ ತದಧೀನತ್ವಂ । (೩) ತಥಾಽಪಿ ತದನುಸಾರೇಣ ಫಲದಾನಮಿತ್ಯಂಗೀಕಾರ ಏವೇಷ್ಟಶ್ರುತಿಪ್ರಾಮಾಣ್ಯಸಿದ್ಧಿಃ ॥ ೧೧ ॥

ಅ ॥ (೧) (ಯುಕ್ತಿವಿರೋಧ ಬರುವುದರಿಂದ) ಸರ್ವೇಶ್ವರನಾದ ಶ್ರೀಹರಿಗೆ ಪೂರ್ಣಕರ್ತೃತ್ವವು (ಸರ್ವಕರ್ತೃತ್ವವು) ಸಿದ್ಧಿಸುವುದಿಲ್ಲ. (ಶ್ರೀ ಹರಿಯು ಸರ್ವಕರ್ತನೆಂಬುವುದು ಯುಕ್ತಿ ವಿರುದ್ಧವು ಹೇಗೆಂದರೆ) ಶ್ರೀ ಹರಿಯು ಆಯಾಯ ಪ್ರಾಣಿಗಳ ಕರ್ಮಗಳನ್ನು ಅಪೇಕ್ಷಿಸಿಕೊಂಡು ಪ್ರಾಣಿಗಳಿಗೆ ಸುಖದುಃಖಾದಿಗಳನ್ನು ಕೊಡುತ್ತಾನೋ,ಆ ಕರ್ಮಗಳನ್ನಪೇಕ್ಷಿಸದೇನೇ ಸುಖದುಃಖಾದಿಗಳನ್ನುಕೊಡುತ್ತಾನೋ।(1)ಕರ್ಮಗಳನ್ನು ಅಪೇಕ್ಷಿಸಿಯೇ ಸುಖದುಃಖಾದಿಗಳನ್ನು ಕೊಡುವುದಾದರೆ ಶ್ರೀಹರಿಗೆ ಕರ್ಮಾಪೇಕ್ಷೆಯಿದ್ದುದರಿಂದ ಸ್ವಾತಂತ್ರ್ಯವಿಲ್ಲವೆಂದಾಗಬೇಕಾಗುವುದು. (ನಿಯಮವಾಗಿ ಕರ್ಮವನ್ನು ಅಪೇಕ್ಷಿಸಿಕೊಂಡೇ ಇರುವವನಿಗೆ ಸ್ವಾತಂತ್ರ್ಯವು ಸರ್ವಥಾ ಕೂಡಲಾರದಷ್ಟೆ.) 2) ಆಯಾಯ ಕರ್ಮಗಳನ್ನಪೇಕ್ಷಿಸದೇನೇ ಫಲವನ್ನು ಕೊಡುವುದಾದರೆ ಶ್ರುತಿಗೆ ಅಪ್ರಾಮಾಣ್ಯ ಬರಬೇಕಾಗುವುದು.) (ಮತ್ತು ನಿಷ್ಕಾರಣವಾಗಿ ಪ್ರಾಣಿಗಳಿಗೆ ಸುಖದುಃಖಾದಿಗಳನ್ನು ಕೊಡುವುದರಿಂದ ವೈಷಮ್ಯ ನೈರ್ಘೃಣ್ಯಗಳೆಂಬ ೨ ದೋಷಗಳು ಬರಬೇಕಾಗುವವು. ಅಂದರೆ ಶ್ರೀಹರಿಯು ಜ್ಯೋತಿಷ್ಟೋಮಾದಿಕರ್ಮಗಳನ್ನು ಅಪೇಕ್ಷಿಸದೇನೇ ಸ್ವರ್ಗ ಮೊದಲಾದ ಫಲಗಳನ್ನು ಕೊಡುವುದಾದರೆ ಜ್ಯೋತಿಷ್ಟೋಮಾದಿಯಾಗಗಳು ಸ್ವರ್ಗಾದಿಗಳಿಗೆ ಸಾಧನಗಳಾಗದೆ ಹೋಗಬೇಕಾಗುವವು. ಅಂತೂ ಯಾಗಗಳಿಗೂ ಸ್ವರ್ಗಕ್ಕೂ ಕಾರ್ಯಕಾರಣಭಾವವನ್ನು ತಿಳಿಸಿಕೊಡತಕ್ಕ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇದು ಮೊದಲಾದ ಶ್ರುತಿಗಳಿಗೆ ಅಪ್ರಾಮಾಣ್ಯವು ಬರುವುದು, ಎಂಬ ಪೂರ್ವಪಕ್ಷವು ಯುಕ್ತವಲ್ಲ.) ಏಕೆಂದರೆ ಇಷ್ಟಾಸಿದ್ಧಿಃ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.) (೨) ಶ್ರೀ ಹರಿಯು ಕರ್ಮಗಳನ್ನಪೇಕ್ಷಿಸಿಕೊಂಡೇ ಫಲಗಳನ್ನು ಕೊಡುವುದು. ಆದರೆ ಆ ಅಪೇಕ್ಷ್ಯವಾದ ಫಲ ಸಾಧನವಾದ ಕರ್ಮವೂ ಶ್ರೀಹರಿಯ ಅಧೀನವು. (ಆದಕಾರಣ ಅಸ್ವಾತಂತ್ರ್ಯವು ಬರುವುದಿಲ್ಲ.) (೩) ಯದ್ಯಪಿ ಆ ಕರ್ಮವೂ ಶ್ರೀ ಹರಿಯ ಅಧೀನವೇ ಎಂದಾದರೆ ಕರ್ಮದ ಅಪೇಕ್ಷೆಯೆಂದರೆ ಕರ್ಮದ ಅಪೇಕ್ಷೆಯಿಲ್ಲಯೆಂದೇ ಆಗುವುದು.) ಆದಾಗ್ಯೂ ಶ್ರೀ ಹರಿಯು ಆಯಾಯ ಕರ್ಮಗಳನ್ನನುಸರಿಸಿಯೇ ಶುಭ ಅಶುಭ ಫಲಗಳನ್ನು ಕೊಡುತ್ತಾನೆಂದಂಗೀಕಾರ ಮಾಡದಿದ್ದರೇನೇ 'ಜ್ಯೋತಿಷ್ಟೋಮೇನ ಸ್ವರ್ಗಕಾಮಃ' ಇತ್ಯಾದಿ ಶ್ರುತಿಗಳಿಗೆ ಪ್ರಾಮಾಣ್ಯವು ಸಿದ್ಧಿಸದೆ ಹೋಗುವುದು. (ಏವಂಚ ಶ್ರೀ ಹರಿಯು ಕರ್ಮಗಳನ್ನು ಅಪೇಕ್ಷಿಸದೆ ಫಲವನ್ನು ಕೊಡುತ್ತಾನೆಂದು

ಹೇಳಿದರೆ ಶ್ರುತಿಪ್ರಾಮಾಣ್ಯ ರೂಪ ಇಷ್ಟವು ಸಿದ್ಧಿಸದಿರುವುದರಿಂದ ಕರ್ಮಾಪೇಕ್ಷೆಯಿದೆ ಎಂದೇ ಒಪ್ಪಬೇಕು. ಅಂತೂ ಶ್ರೀ ಹರಿಯು ಅವರವರ ಕರ್ಮಗಳನ್ನನುಸರಿಸಿ ಅವರವರಿಗೆ ಫಲವನ್ನು ಕೊಡುವುದರಿಂದ ವೈಷಮ್ಯಾದಿ ದೋಷಗಳಿಲ್ಲ. ಅಪೇಕ್ಷ್ಯವಾದ ಕರ್ಮವೂ ಶ್ರೀ ಹರಿಯ ಅಧೀನವೇ ಆಗಿರುವುದರಿಂದ ಅಸ್ವಾತಂತ್ರ್ಯದೋಷವೂ ಇಲ್ಲ. ಆದಪ್ರಯುಕ್ತ ಶ್ರುತಿಗೆ ಅಪ್ರಾಮಾಣ್ಯವೂ ಇಲ್ಲ. ಆದಕಾರಣ ಹಿಂದೆ ಹೇಳಿದ ಯುಕ್ತಿ ವಿರೋಧವಿಲ್ಲದಿರುವುದರಿಂದ ಶ್ರೀ ಹರಿಯೇ ಸರ್ವಜಗತ್ಕರ್ತನು ಎಂಬುವುದು ಯುಕ್ತವೇ ॥ ೧೦ ॥

೧೧ನೇ ಸರ್ವಧರ್ಮಾಧಿಕರಣದಲ್ಲಿ ಶ್ರೀ ವಿಷ್ಣುವಿಗೆ ಪೂರ್ಣತ್ವವು ಯುಕ್ತವೋ ಅಯುಕ್ತವೋ, ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ನಿಯಮಃ= (ವ್ಯಾಪ್ತಿಯು) ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ವ್ಯಾ॥ (೧) ಸರ್ವೇ ಚೇತನಾ ಅಪೂರ್ಣಗುಣಾ ಇತಿ ನಿಯಮೋ ನ । (೨) ಸ್ವತಂತ್ರಸ್ಯ ಪೂರ್ಣಗುಣತ್ವನಿಯಮಾತ್ (೩) ಅಪೂರ್ಣೋಽಯಂ ಜೀವಸಂಘೋಽಸ್ವತಂತ್ರಃ ಪೂರ್ಣೋ ಹರಿರ್ಯಃ ಸ್ವತಂತ್ರಸ್ಸದೈವ । ನ ಹಿ ಸ್ವತಂತ್ರೋಽಪೂರ್ಣತಾಂ ಕಾಮಯೀತ ಪೂರ್ಣೋ ಯದಿ ಸ್ಯಾದಸ್ವತಂತ್ರಃ ಕುತಸ್ಸಃ ಇತಿ ಶ್ರುತೇಃ ॥ ೧೧ ॥**

ಅ॥ (೧) ಎಲ್ಲಾ ಚೇತನರೂ ಅಪೂರ್ಣಗುಣಗಳುಳ್ಳವರು ಎಂದು ವ್ಯಾಪ್ತಿಯು. (ಅಂತೂ ಶ್ರೀಹರಿಯೂ ಚೇತನನಾದುದರಿಂದ ಅಪೂರ್ಣ(ಗುಣಪರಿಪೂರ್ಣನಲ್ಲ)ನೆಂದು ಅವಶ್ಯವಾಗಿ ಹೇಳಬೇಕಾದುದರಿಂದ ಜಗತ್ಕರ್ತನೆಂಬುವುದು ಯುಕ್ತವಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ) (ನಿಯಮಃ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ.)(೨) ಸರ್ವ ಸ್ವತಂತ್ರನಾದವನು ಪೂರ್ಣಗುಣಗಳುಳ್ಳವನು ಎಂದು ವ್ಯಾಪ್ತಿಯು. (೩)(ಅದನ್ನು ಪ್ರತಿಪಾದಿಸತಕ್ಕ ಶ್ರುತಿಯನ್ನುದಾಹರಿಸುತ್ತಾರೆ.) ಈ ಜೀವರ ಸಮುದಾಯವು ಅಪೂರ್ಣವು. ಸರ್ವಥಾ ಸ್ವತಂತ್ರವಲ್ಲ, ಇದು ಸರ್ವಾನುಭವಸಿದ್ಧವು. ಯಾವ ಶ್ರೀ ಹರಿಯು ಸರ್ವದಾ ಸರ್ವಸ್ವತಂತ್ರನೇ ಯಾವ ಕಾರಣದಿಂದ ಆಗಿರುತ್ತಾನೋ(.ಆದಕಾರಣ ಸರ್ವಗುಣ ಪರಿಪೂರ್ಣನೇ, (ಹರಿಃ ಪೂರ್ಣಃ ಸ್ವತಂತ್ರತ್ವಾತ್ ಎಂಬ ಅನುಮಾನವು ಉಕ್ತವಾಯ್ತು.) ಯತ್ ಶಬ್ದದಿಂದ. ಶ್ರೀ ಹರಿಯ ಪೂರ್ಣತ್ವ ಸ್ವಾತಂತ್ರ್ಯಗಳು ಶ್ರುತಿಪ್ರಸಿದ್ಧಗಳೆಂದುಕ್ತವಾಯ್ತು. ಸದೈವ= ಸ್ವಾತಂತ್ರ್ಯಾದಿಗಳು ಸಾರ್ವಕಾಲಿಕಗಳೇ ಯಾವ ಕಾರಣದಿಂದ ಸ್ವತಂತ್ರನಾದವನು ತನಗೆ ಅಪೂರ್ಣತ್ವವನ್ನು ಸರ್ವಥಾ ಇಚ್ಛಿಸಲಾರನೋ, ಆದಕಾರಣ ಪೂರ್ಣನೇ. ಜೀವನು ಪೂರ್ಣನಾಗಿದ್ದರೆ ಅಸ್ವತಂತ್ರನು ಹೇಗೆ ಆದಾನು, ಎಂಬ ಶ್ರುತಿಯಿಂದ (ಸ್ವಾತಂತ್ರ್ಯಕ್ಕೆ ಪೂರ್ಣತ್ವದಿಂದ ವ್ಯಾಪ್ತಿಯು ನಿಯತವು. ಆದುದರಿಂದ ಶ್ರೀ ವಿಷ್ಣುವಿಗೇನೇ ಸ್ವಾತಂತ್ರ್ಯದ್ದ ಕಾರಣ ಸರ್ವ ಜಗಜ್ಜನ್ಮಾದಿ ಕಾರಣತ್ವವು ಯುಕ್ತವೇ) ॥ ೧೧ ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ**

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೨ನೇ ಅಧ್ಯಾಯದಲ್ಲಿ ೧ನೇ ಪಾದವು ಸಮಾಪ್ತವಾಯ್ತು.**

# ೨ನೇ ಪಾದ

ಸಮಯಪಾದದಲ್ಲಿರತಕ್ಕ ಎಲ್ಲಾ ಅಧಿಕರಣಗಳನ್ನು ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡಿರುವುದರಿಂದ ಅದರ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಸಂಗ್ರಹಿಸಿ ಇಲ್ಲಿ ಹೇಳಲಿಲ್ಲ.

**ಮೂ ॥ ಉಕ್ತವಿರೋಧಿನಸ್ತತ್ರತ್ಸಮಯಸಿದ್ಧಾಃ ಪೂರ್ವಪಕ್ಷನ್ಯಾಯಾಃ ।**
**ತದ್ವಿರೋಧಿನೋಽನ್ಯೇ ಇತಿ ಪ್ರಸಿದ್ಧಾ ಏವ ॥ ೧ ॥**

ಅ ॥ ಹಿಂದೆ ಹೇಳಿದ ಜಗತ್ಕಾರಣತ್ವಾದಿಗಳಿಗೆ ವಿರುದ್ಧಗಳಾದ ಅರ್ಥಗಳನ್ನು ಸಾಧಿಸುವ, ಆಯಾಯ ಸಾಂಖ್ಯ ಚಾರ್ವಾಕ ಮೊದಲಾದ ಸಿದ್ಧಾಂತಗಳಿಂದುತ್ಪ್ರೇಕ್ಷಿತಗಳಾದ ಪೂರ್ವಪಕ್ಷ ನ್ಯಾಯಗಳು, ಅವುಗಳಿಂದ ಸಾಧ್ಯವಾದವುಗಳಿಗೆ ವಿರುದ್ಧಗಳಾದ ಅರ್ಥಗಳನ್ನು ಸಾಧಿಸುವ ಸಿದ್ಧಾಂತ ನ್ಯಾಯಗಳು ಈ ಪ್ರಕಾರ ಪ್ರಸಿದ್ಧಗಳೇ ಆಗಿವೆ. ಅಂದರೆ ಜಗತ್ಕಾರಣತ್ವಾದಿಗಳಿಗೆ ವಿರೋಧಿಗಳಾಗಿ ಪೂರ್ವಪಕ್ಷ ನ್ಯಾಯಗಳೂ, ಆ ಪೂರ್ವಪಕ್ಷನ್ಯಾಯಗಳಿಗೆ ವಿರೋಧಿಗಳಾಗಿ ಸಿದ್ಧಾಂತ ನ್ಯಾಯಗಳೂ ಅನುವ್ಯಾಖ್ಯಾನದಲ್ಲಿ ಚೆನ್ನಾಗಿ ಹೇಳಲ್ಪಟ್ಟಿವೆ. ಅಂತೂ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅಲ್ಲಿಯೇ ಸ್ಪಷ್ಟವಾಗಿ ಹೇಳಿರುವುದರಿಂದ ಇಲ್ಲಿ ವಿವರಿಸಲಿಲ್ಲ ॥ ೧ ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ದ್ವಿತೀಯಾಧ್ಯಾಯಸ್ಯ ದ್ವಿತೀಯಃ ಪಾದಃ**

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೨ನೇ ಅಧ್ಯಾಯದಲ್ಲಿ ೨ನೇ ಪಾದವು ಸಮಾಪ್ತವಾಯಿತು-**

# ೩ನೇ ಪಾದ

ಶ್ರೀ ವಿಷ್ಣುವಿಗೆ ಜಗತ್ಕಾರಣತ್ವಾದಿಗಳಲ್ಲಿ ಅಧಿಭೂತಾದಿವಿಷಯಕ ಶ್ರುತಿಗಳಿಗೆ ಪರಸ್ಪರವಿರೋಧ ಪರಿಹಾರಕ್ಕಾಗಿ ಈ ೩ನೇ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿದುದನ್ನು ಇಲ್ಲಿ ವಿವರಿಸುತ್ತಾರೆ. ಅನುಭೂತಿ ಯುಕ್ತಿ ಬಹು ವಾಗ್ವಿರೋಧ್ಯಂ ಚ ತತೋಽಧಿಕಂ । ಏತತ್ಸರ್ವಂ ಪರಸ್ಪಾದ್ಯಂ ದ್ವಾರದ್ವೈ ಯರ್ಥ್ಯಮೇವ ಚ। ದೃಷ್ಟಯುಕ್ತ್ಯನುಸಾರಿತ್ವಮುಕ್ತಾನ್ಯಾರ್ಥಾವಿರೋಧತಃ। ಪ್ರಸಿದ್ಧನಾಮ ಸ್ವೀಕಾರೇ ಬಹುವಾಕ್ಯಾನುವರ್ತನಾ । ಲೋಕದೃಷ್ಟ್ಯಾನುಸಾರಿತ್ವಂ ಜೀವಸಾಮ್ಯಮನಾದಿತಾ। ತತ್ರ ತತ್ರ ಪರಿಜ್ಞಾನಂ ಗುಣಸಾಮ್ಯಶ್ರುತೀ ತಥಾ। ಉತ್ಪತ್ತಿಮತ್ತ್ವಂ ಸ್ವಗುಣಾನನುಭೂತ್ಯ ಪ್ರಕಲ್ಪನೇ। ನಾನಾಶ್ರುತಿಷು ವೈಚಿತ್ರ್ಯಂ ಯುಕ್ತಯಃ ಪೂರ್ವಪಕ್ಷಗಾಃ । ವ್ಯವಸ್ಥಾಽನುಪಪತ್ತಿಶ್ಚ ಸ್ವಾತಂತ್ರ್ಯಮನುಸಾರಿತಾ । ಮುಖ್ಯತಾ ಶಕ್ತಿಮತ್ತ್ವಂ ಚ ಸ್ವರೂಪತ್ವಂ ಸರ್ವಸಂಗ್ರಹಃ। ಗತ್ಯಾದಿರೀತಶಕ್ತಿತ್ವ ಸರ್ವವಚಾನವಿರೋಧಿತಾ। ಅಭೀಷ್ಟಾಸಿದ್ಧಿರವ್ಯಕ್ತೇಃ ಶಾಸ್ತ್ರಸಿದ್ಧಿವಿಪರ್ಯಯಃ। ವಿಶೇಷಕಾರಣಂ ಚೇತಿ ಸಿದ್ಧಾಂತಸ್ಯೈವ ಸಾಧಿಕಾಃ। ಎಂದು ೧ನೇ ವಿಯದಧಿಕರಣದಲ್ಲಿ 'ಆತ್ಮನ ಆಕಾಶಸ್ಸಂಭೂತಃ' ಶ್ರೀಪರಮಾತ್ಮನ ದೆಸೆಯಿಂದ ಆಕಾಶವು ಹುಟ್ಟಿತು. ಅನಾದಿವಾ ಅಯಮಾಕಾಶಃ' ಆಕಾಶವು ಅನಾದಿಯಾದುದು, ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಆಕಾಶವು ಹುಟ್ಟತಕ್ಕುದೋ, ಅಲ್ಲವೋ, ಎಂದು ಸಂದೇಹವು ಬಂದರೆ ಆಕಾಶವು ಹುಟ್ಟುವುದಿಲ್ಲ, ಎಂದು ಪೂರ್ವಪಕ್ಷವು, ಆಕಾಶವು ಹುಟ್ಟುತ್ತದೆಂದು ಸಿದ್ಧಾಂತವು. ಅದರಲ್ಲಿ ಅನುಭೂತಿ ಯುಕ್ತಿ ಬಹುವಾಗ್ವಿರೋಧ್ಯಂ ಎಂಬ ಪೂರ್ವ ಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧)ನ ಚ ವಿಯತ ಉತ್ಪತ್ತಿಮತ್ತ್ವೇಽನುಭೂತಿಯುಕ್ತಿ ಬಹುವಾಗ್ವಿರೋಧೋಽಸ್ತಿ॥
(೨) ವ್ಯವಸ್ಥಾಯೋಗಾತ್ ॥ (೩) ಅವಕಾಶಮಾತ್ರಸ್ಯಾವ್ಯಾಕೃತಾತ್ಮಕತ್ವಾದನುತ್ಪತ್ತಿವಚನಾನಾಂ ತದ್ವಿಷಯತ್ವಂ। ಉತ್ಪತ್ತಿವಚನಾನಾಮುಪಚಿತವರ್ಣ ಭೂತತದಭಿಮಾನಿಶರೀರ ವಿಷಯತ್ವಂ ಪರಾಧೀನವಿಶೇಷವತ್ತ್ವ ಮಾತ್ರ ವಿಷಯತ್ವಂ ಚೇತಿ ವ್ಯವಸ್ಥಾ॥
(೪) ಆಕಾಶೋ ನೀಲಿಮೋದೇತಿ ನ ಪ್ರದೇಶಃ ಕಥಂಚನ। ಅಭಾವೋ ಹಿ ಪ್ರದೇಶಸ್ಯ ನ ಹ್ಯುತ್ಪತ್ತಿಭಾವ ಇಷ್ಯತೇ । ಇತಿ ಪೈಂಗಿಶ್ರುತೇಃ ॥ ೧ ॥

ಅ ॥ (೧) ಆಕಾಶಕ್ಕೆ ಉತ್ಪತ್ತಿಯಿದೆ ಎಂದಂಗೀಕರಿಸಿದರೆ ಅವಕಾಶ ರೂಪವಾದ ಆಕಾಶವು ಹುಟ್ಟುವುದಿಲ್ಲವೆಂದು ಸಾಕ್ಷಿರೂಪ ಅನುಭವ ಸಿದ್ಧವಾಗಿರುವುದರಿಂದ ಆಕಾಶವು ಹುಟ್ಟುತ್ತದೆಂಬುವುದು ಅನುಭವ ವಿರುದ್ಧವು. ಹಾಗೆಯೇ ವಿಯತ್ ಅನುತ್ಪತ್ತಿಮತ್ ವಿಭುತ್ವಾತ್ ಸಂಪ್ರತಿಪನ್ನವತ್=ಆಕಾಶವು ಹುಟ್ಟುವುದಿಲ್ಲ, ವಿಭುವಾಗಿರುವುದರಿಂದ ಕಾಲದಂತೆ, ಇತ್ಯಾದಿ ಯುಕ್ತಿ ವಿರೋಧವು. ಅನಾದಿವಾ ಅಯಮಾಕಾಶಃ ಇದು ಮೊದಲಾದ ಬಹುಶ್ರುತಿ ವಿರೋಧವು. (ತಥಾ ಚ ಅನುಭವಾದಿಗಳ ವಿರೋಧವು ಬರುವುದರಿಂದ ಆಕಾಶಕ್ಕೆ ಉತ್ಪತ್ತಿಯು ಇಲ್ಲದಿರುವ ಕಾರಣ ಆಕಾಶವು ಹುಟ್ಟುತ್ತದೆಂದು ಹೇಳುವ ಶ್ರುತಿಯಂತೆ ಜಗತ್ಕರ್ತೃತ್ವ ಪ್ರತಿಪಾದಕ ಶ್ರುತಿಯೂ ಅಪ್ರಮಾಣವಾಗಿರುವುದರಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. ಎಂಬ ಪೂರ್ವಪಕ್ಷವು) ಯುಕ್ತವಲ್ಲ. ಏಕೆಂದರೆ ಆಕಾಶೋತ್ಪತ್ತಿ ಶ್ರುತಿಗೆ ಆಕಾಶಪದದ ಅರ್ಥಭೂತಗಳಾದ ಭೂತಾಕಾಶಾದಿಪದಾರ್ಥವಿಷಯತ್ವವು ಕೂಡುವುದರಿಂದ ಮುಖ್ಯಾರ್ಥತ್ವವು. ಅನಾದಿಯೆಂದು ಹೇಳತಕ್ಕ ಶ್ರುತಿಗೆ ಆಕಾಶ ಪದದ ಅರ್ಥಭೂತವಾದ ಅವ್ಯಾಕೃತಾಕಾಶರೂಪ ಏಕದೇಶ ವಿಷಯಕತ್ವವು

ಇದ್ದುದರಿಂದ ಅಮುಖ್ಯಾರ್ಥತ್ವವು ಎಂದು ವ್ಯವಸ್ಥೆಯು ಕೂಡುತ್ತದೆ. (೩) (ಹೇಗೆಂದರೆ) ದಿಗ್ರೂಪವಾದ ಅವಕಾಶವು ಅವ್ಯಾಕೃತ ಸ್ವರೂಪವಾಗಿರುವುದರಿಂದ ನಿರ್ವಿಕಾರವಾಗಿರುವ ಪ್ರಯುಕ್ತ 'ಅನಾದಿರ್ವಾ' ಆಕಾಶವು ಹುಟ್ಟುವುದಿಲ್ಲ. ಇದು ಮೊದಲಾದ ಅನುತ್ಪತ್ತಿ ಪ್ರತಿಪಾದಕ ವಚನಗಳು ಆಕಾಶ ಪದಾರ್ಥದ ಏಕದೇಶವಾದ ಅವ್ಯಾಕೃತಾಕಾಶ ವಿಷಯಕಗಳು. ಹೀಗೆ ಅನಾದಿತ್ವಪ್ರತಿಪಾದಕ ಶ್ರುತಿಗೆ ಅಮುಖ್ಯಾರ್ಥತ್ವವು. ಆತ್ಮನ ಆಕಾಶಸ್ಸಂಭೂತಃ ಇತ್ಯಾದಿ ಉತ್ಪತ್ತಿ ಪ್ರತಿಪಾದಕ ವಚನಗಳು ಆಕಾಶಕ್ಕೆ ನೀಲ ವರ್ಣವಿದ್ದ ಪ್ರಯುಕ್ತ ಅನುಮಿತವಾದ ಉತ್ಪತ್ತಿಯುಳ್ಳ ಭೂತಾಕಾಶ, ಅದಕ್ಕೆ ಅಭಿಮಾನಿಯಾದ ವಿನಾಯಕ, ಉತ್ಪತ್ತಿಯುಳ್ಳ ಜಡಶರೀರ, ಇವುಗಳನ್ನು ವಿಷಯೀಕರಿಸುತ್ತವೆ. ಹಾಗೆಯೇ ಅವಕಾಶ, ತದಭಿಮಾನಿ, ಭೂತ, ತದಭಿಮಾನಿ ರೂಪಗಳಾದ ಆಕಾಶಪದವಾಚ್ಯಗಳಾದ ನಾಲ್ಕೂ ಕೂಡ ಪರಾಧೀನ ವಿಶೇಷ ಮಾತ್ರರೂಪವಾದ ಉತ್ಪತ್ತಿಯುಳ್ಳವುಗಳು. ಹೀಗೆ ವ್ಯವಸ್ಥೆಯು. (ಇದರಿಂದ ಆತ್ಮನ ಆಕಾಶಸ್ಸಂಭೂತಃ ಇತ್ಯಾದಿ ಉತ್ಪತ್ತಿ ಪ್ರತಿಪಾದಕ ವಾಕ್ಯಗಳಲ್ಲಿರತಕ್ಕ ಆಕಾಶ ಶಬ್ದವು ಸರ್ವವಿಷಯಕವು. ಅನಾದಿರ್ವಾ ಅಯಮಾಕಾಶಃ ಇತ್ಯಾದಿ ವಾಕ್ಯಗಳಲ್ಲಿದ್ದ ಆಕಾಶ ಶಬ್ದವು ಆಕಾಶಪದವಾಚ್ಯವಾದುದನ್ನು ಎಲ್ಲವನ್ನು ವಿಷಯೀಕರಿಸುವುದಿಲ್ಲ ಮತ್ತೆ ಅವ್ಯಾಕೃತಾಕಾಶವನ್ನು ಮಾತ್ರ ವಿಷಯೀಕರಿಸುತ್ತದೆಂದುಕ್ತವಾಯ್ತು) ೪)ಭೂತಾಕಾಶಕ್ಕೆ ನೀಲ ವರ್ಣವಿದೆ ಎಂಬಲ್ಲಿ ಶ್ರುತಿಯನ್ನುದಾಹರಿಸುತ್ತಾರೆ.) ಭೂತಾಕಾಶವು ನೀಲರೂಪವುಳ್ಳದ್ದು. ಅವಕಾಶವು ಸ್ವರೂಪದಿಂದ ಅಥವಾ ವಿಕೃತ ರೂಪದಿಂದ ಯಾವ ರೀತಿಯಿಂದಲೂ ಹುಟ್ಟುವುದಿಲ್ಲ. ಯಾವುದಕ್ಕೆ ಉತ್ಪತ್ತಿಯದೆಯೋ ಅದಕ್ಕೆ ಪ್ರಾಗಭಾವವು ಅವಶ್ಯಕವು. ಅವಕಾಶರೂಪ ಪ್ರದೇಶಕ್ಕೆ ಪ್ರಾಗಭಾವವು ಕೂಡುವುದಿಲ್ಲ. ಅದಕ್ಕೆ ಉತ್ಪತ್ತಿಯಿಲ್ಲವೆಂದೇ ಪ್ರಸಿದ್ಧಿಯು. (ಹೇಗೆಂದರೆ) ಅಭಾವವು ತೋರುವಾಗ ಅಸ್ಮ=ಅತ್ರ ನ ಎಂತ ನಮಗೆ ಅನುಭವವು. ಅಂದರೆ ಪ್ರತಿಯೋಗಿ ಆಶ್ರಯಗಳಿಂದ ಕೂಡಿಕೊಂಡೇ ಅಭಾವದ ಪ್ರತೀತಿಯು ಇರುವುದು. ಈ ಎರಡೂ ತೋರದೆ ಕೇವಲ ನಿರಾಶ್ರಯವಾಗಿ ಅಭಾವದ ಪ್ರತೀತಿಯೇ ನಮಗೆ ಇಲ್ಲ. (ಅವಕಾಶ ಅತ್ರ ಎಂತ ಯಾವುದಾದರೂ ಒಂದು ದೇಶವನ್ನು ತೋರಿಸಿ ಅಲ್ಲಿ ದೇಶರೂಪ ಅವಕಾಶವಿಲ್ಲ ಎಂತ ಹೇಳಿದರೆ ವ್ಯಾಹತವಾಗುತ್ತದೆ.) ಎಂಬ ಪೈಂಗಿ ಶ್ರುತಿಯಿಂದ ಭೂತಾಕಾಶಕ್ಕೆ ನೀಲವರ್ಣವಿದೆ ಎಂದು ಸಿದ್ಧವಾಯ್ತು. (ಏವಂಚ ಆಕಾಶೋತ್ಪತ್ತಿ ಅನುತ್ಪತ್ತಿ ಪ್ರತಿಪಾದಕ ಶ್ರುತಿಗಳಿಗೆ ಹಿಂದೆ ಹೇಳಿದ ಪ್ರಕಾರ ವ್ಯವಸ್ಥೆಯು ಕೂಡುವುದರಿಂದ ಆ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವ ಪ್ರಯುಕ್ತ ಶ್ರೀಹರಿಗೆ ಆಕಾಶಾದಿ ಸರ್ವಜಗತ್ಕರ್ತೃತ್ವವು ಯುಕ್ತವು ॥ ೧ ॥

೨ನೇ ಮಾತರಿಶ್ವಾಧಿಕರಣದಲ್ಲಿ 'ತಾಸಾಂ ವಾಯುರ್ವರಿಷ್ಠಃ' 'ಸಾ ವಾ ಏಷಾ ದೇವತಾಽವಾದಿಯೋರ್ಜಯಾಂ ಪಪತೇ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಮುಖ್ಯವಾಯುವು ಹುಟ್ಟುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ ಉತ್ಪತ್ತಿವುಳ್ಳವನೇ ಅಲ್ಲ, ಎಂದು ಪೂರ್ವಪಕ್ಷವು. ಆತನೂ ಉತ್ಪತ್ತಿಯುಳ್ಳವನೇ ಎಂದು ಸಿದ್ಧಾಂತವು. ಅದರಲ್ಲಿ ಶತೋಽಧಿಕಂ ಏತತ್ಸರ್ವಂ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ (೧) ಶತೋಽಧಿಕಮೇತತ್ಸರ್ವಮನುಭೂತ್ಯಾದಿ ವಿರುದ್ಧತ್ವಂ ವಾಯೋತ್ಪತ್ತಾವಿತಿ, (೨) ನ ವಾಯೋರೇವಾನುತ್ಪತ್ತ್ಯುಪಪತ್ತೇಃ ॥ (೩) ವಾಯೋರೇವಾನುತ್ಪತ್ತ್ಯನುಪಪತ್ತೇಃ ॥ (೪) ಪರಾಧೀನವಿಶೇಷವತ್ತ್ವಮಾತ್ರಂಹ್ಯುತ್ಪತ್ತಿಃ ॥ (೫) ತದಭಾವ ಉಭಯೋಃ ಸ್ವಾತಂತ್ರ್ಯಂ, ವಿರುದ್ಧಮೇವ । ಸರ್ವೋತ್ತಮತ್ವಾನುಪಪತ್ತೇಃ ॥ (೬) ಉಭಯೋರಪಿ ಪರಾಧೀನತ್ವಪ್ರಾಪ್ತೇಃ ಅನ್ಯೋನ್ಯಾನುರೋಧೇ. ಅನನುರೋಧೇತು**

**ನ ಸರ್ವೇಶ್ವರ್ಯಂ॥ (೭) ಜ್ಞಾನಾವಿಸ್ಮೃತ್ಯಾ ವಾಯೋರಪಿ ವ್ಯವಸ್ಥೇತ್ಯತಿದೇಶಃ ॥ (೮) ಅನುಪಪತ್ತಿಸ್ತು ತತ್ಪ್ರಾಪಿಕಾ । (೯) ಪರಾಧೀನವಿಶೇಷವತ್ತ್ವಮಾತ್ರಂ ತ್ವನ್ಯಾಕೃತಾಕಾಶಸ್ಯ ತದಭಿಮಾನಿಪ್ರಕೃತೇಶ್ಚ ಸಮಮೇವ ॥ ೨॥**

ಅ ॥ (೧) ಮುಖ್ಯ ವಾಯುವಿಗೆ ಉತ್ಪತ್ತಿಯನ್ನಂಗೀಕರಿಸಿದರೆ ವಿಯದಧಿಕರಣಕ್ಕಿಂತಲೂ ಹೆಚ್ಚಾಗಿ ಅನುಭವ ಯುಕ್ತಿ ಬಹುಶ್ರುತಿಗಳಿಂದ ವಿರೋಧವು ಬರುವುದು. (ಅಂದರೆ ಆಕಾಶವು ಹುಟ್ಟುವುದಿಲ್ಲ ಎಂದು ಹೇಳತಕ್ಕ ಶ್ರುತಿಯಂತೆ ವಾಯುವಿಗೆ ಅನಾದಿತ್ವವನ್ನು ಹೇಳತಕ್ಕ ಶ್ರುತಿಗೆ ಗೌಣಾರ್ಥವನ್ನು ಹೇಳಕೂಡದು. ಗೌಣಾರ್ಥವನ್ನಂಗೀಕರಿಸಿಕೊಂಡು ಆಕಾಶಾದಿಗಳಂತೆಯೇ ಮುಖ್ಯ ವಾಯುವಿಗೂ ಉತ್ಪತ್ತಿ ಅನುತ್ಪತ್ತಿಗಳಿದ್ದರೆ 'ಅಥ ಹ ನಿತ್ಯಾತ್ಸಾನಿತ್ಯಾತ್ಪತೇಜೋಽಬನ್ನಾನ್ಯಾಕಾಶ ಇತಿತಾನ್ಯನಿತ್ಯಾನಿ' ಎಂದು ತೇಜಸ್ಸು, ನೀರು ಪೃಥಿವೀ, ಆಕಾಶ ಇವುಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುರ್ವಾವ ನಿತ್ಯಃ ಎಂದು ವಾಯುವಿಗೆ ನಿತ್ಯತ್ವವನ್ನು ಹೇಳಿದ್ದು ಕೂಡದೆ ಹೋಗಬೇಕಾಗುವುದು. ಮತ್ತು ವಾಯುವು ಹುಟ್ಟುವುದಿಲ್ಲವೆಂಬುದು ಗೌಣ ಕೇವರೆ ಸ್ವರೂಪಮಾತ್ರ ವಿಷಯಕವೆಂದು ಹೇಳಬೇಕು. ಹಾಗೆ ಉತ್ಪತ್ತಿಯನ್ನಂಗೀಕರಿಸಿದರೆ ವಾಯುವಿಗೂ ಎಲ್ಲಾ ಚೇತನರ ಸಾಮ್ಯವೇ ಬರುವುದರಿಂದ ಅಥ ಚೇತನಾತ್ಸಾಚೇತನಾತ್ಪ ತೇಜೋಽಬನ್ನಾನ್ಯಾಕಾಶ ಇತಿ ತಾನ್ಯಚೇತನಾನಿ' ಎಂದು ತೇಜಸ್ಸು ಮೊದಲಾದವುಗಳಿಗೆ ಅಚೇತನತ್ವವನ್ನು ಹೇಳಿ "ವಾಯುರ್ವಾವ ಚೇತನಃ" ವಾಯುವೇ ಅತಿಶಯಿತಚೇತನನು, ಎಂದು ಹೇಳಿದ್ದು ಕೂಡದೆ ಹೋಗಬೇಕಾಗುವುದು ಮತ್ತು 'ಶುವಿದಂಗ ನಮುಖಾ ಯೇ ವೃಧಾಸಃ' ಎಂಬುವ ಋಕ್ಕಿನಲ್ಲಿ ವಾಯುವಿಗೆ ಹೇಳಿದ ಸರ್ವದೇವೋತ್ತಮತ್ವವೂ ಉತ್ಪತ್ತಿಯಿದೆ, ಎಂದಂಗೀಕರಿಸಿದರೆ ಕೂಡದೆ ಹೋಗಬೇಕಾಗುವುದು. ಮತ್ತು ಆತನಿಗೆ ಉದಯ ಅಸ್ತಮಾನಗಳು ಇಲ್ಲದಿದ್ದಮೇಲೆ ಉತ್ಪತ್ತಿಯು ಹೇಗೆ ತಾನೆ ಕೂಡಬಹುದು. ಇಂತಹ ಮಹಾಮಹಿಮೋಪೇತನಾದ ವಾಯುವಿಗೆ ಉತ್ಪತ್ತಿಯಿದೆ ಎಂದಂಗೀಕರಿಸಿದರೆ ಆಕಾಶಕ್ಕಿಂತಲೂ ಹೆಚ್ಚಾಗಿ ಅನುಭವ ಯುಕ್ತಿ ಬಹುಶ್ರುತ್ಯಾದಿಗಳಿಂದ ವಿರೋಧವು ಬರುವುದು. ಅಂದರೆ ವಾಯುವಿಗೆ ಉತ್ಪತ್ತಿಯನ್ನಂಗೀಕರಿಸಿದರೆ ವಾಯುರ್ನೋತ್ಪತ್ತಿಮಾನ್ ಪರಮಸತ್ಯತ್ವಾತ್ ಪರಮಚೇತನತ್ವಾತ್ ವಾಯುವು ಹುಟ್ಟುವವನಲ್ಲ. ಮುಖ್ಯನಿತ್ಯನಾದ್ದರಿಂದ, ಮುಖ್ಯಚೇತನನಾದುದರಿಂದ ಇದು ಮೊದಲಾದ ಯುಕ್ತಿಗಳಿಂದಲೂ 'ಸಾ ವಾ ಏಷಾ ದೇವತಾಽನಾದಿರ್ಯೋಽಯಂ ಪವತೇ' 'ಯಸ್ಯ ನಾದಿರ್ನ ಮಧ್ಯಂ' ಇದು ಮೊದಲಾದ ಶ್ರುತಿಗಳಿಂದಲೂ ವಿರೋಧವು. ಏವಂಚ ಅನುಭವಾದಿಗಳಿಂದ ವಿರೋಧವು ಬರುವ ಪ್ರಯುಕ್ತ ಮುಖ್ಯವಾಯುವಿಗೆ ಉತ್ಪತ್ತಿಯು ಕೂಡದಿರುವ ಕಾರಣ ವಾಯುವು ಹುಟ್ಟುವವನು ಎಂದು ಹೇಳತಕ್ಕ ಶ್ರುತಿಯಂತೆ ಶ್ರೀಪರಮಾತ್ಮನೂ ಜಗತ್ಕರ್ತನು ಎಂದು ಹೇಳುವ ಶ್ರುತಿಯೂ ಅಪ್ರಮಾಣವಾಗಿರುವುದರಿಂದ, ಶ್ರೀ ವಿಷ್ಣುವು ಜಗತ್ಕಾರಣನೆನ್ನುವುದು ಯುಕ್ತವಲ್ಲ, ಎಂಬ ಪೂರ್ವಪಕ್ಷವು) (೨) ಯುಕ್ತವಲ್ಲ. (ಏಕೆಂದರೆ ಅನುಪಪತ್ತಿಃ ವಾಯುವೇ ಹುಟ್ಟುವುದಿಲ್ಲ, ಎಂಬುದು ಕೂಡದಿರುವುದು) ಎಂದು ಹೇಳಿದ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಉತ್ಪತ್ತಿಯಿಲ್ಲ ಎಂದು ಹೇಳತಕ್ಕ ಶ್ರುತಿಯು ಪರಬ್ರಹ್ಮನಲ್ಲಿಯೇ ಮುಖ್ಯವಾಗಿರುವುದು. ವಾಯುವಿಗೆ ಅನಿತ್ಯತ್ವದಿಂದ ವ್ಯಾವೃತ್ತವಾದ ಅಲ್ಪಶಕ್ತಿಯಿರುವುದು. ಆದಕಾರಣ ಮುಖ್ಯ ವಾಯುವಿಗೆ ಅನುಪಪತ್ತಿಯು (ಅಂದರೆ ಉತ್ಪತ್ತಿಯಿಲ್ಲವೆನ್ನುವುದು ಕೂಡುವುದೇ ಇಲ್ಲ) (೩) (ಮತ್ತು ವಾಯುವು ಹುಟ್ಟುವುದಿಲ್ಲ ಎಂದು ಹೇಳಿದರೆ ವಾಯುವೇ ಅನಾದಿಯೋ, ಶ್ರೀ ಹರಿಯೂ ಅನಾದಿಯೋ, ಎನ್ನೇ ಕಲ್ಪದಲ್ಲಿ) (ಶ್ರೀ ಪರಮಾತ್ಮನು ಅನಾದಿಯು ಎಂದು ಹೇಳತಕ್ಕ ಶ್ರುತ್ಯಾದಿಪ್ರಮಾಣಗಳಿಂದ ವಿರೋಧವು ಬರುವುದರಿಂದ) ವಾಯುವಿಗೇನೇ ಉತ್ಪತ್ತಿಯಿಲ್ಲ, ಆತನೇ ಅನಾದಿಯು ಎಂಬುವುದು ಸರ್ವಥಾ ಕೂಡುವುದೇ ಇಲ್ಲ. (೪) ಶ್ರೀ ಹರಿಯೂ ಅನಾದಿಯು ಎಂಬುವ ಪಕ್ಷದಲ್ಲಿ) ವಾಯುವಿಗೆ ಉತ್ಪತ್ತಿಯೆಂದರೆ ಕೇವಲ ಪರಾಧೀನ ವಿಶೇಷಲಾಭರೂಪವಾದುದು, ವಿವಕ್ಷಿತವಾಗಿದೆ ಅಷ್ಟೆ. (೫) ಅಂತಹ ಪರಾಧೀನವಿಶೇಷ ಲಾಭರೂಪವಾದ ಉತ್ಪತ್ತಿಯನ್ನ

ಮುಖ್ಯವಾಯುವಿಗೆ ಅಂಗೀಕರಿಸದಿದ್ದರೆ ಮುಖ್ಯವಾಯು ಶ್ರೀ ಹರಿ ಇಬ್ಬರಿಗೂ ಸರ್ವಸ್ವಾತಂತ್ರ್ಯವು ಬರಬೇಕಾಗುವುದು. ಆದಾದರೂ ಇಬ್ಬರಿಗೆ ಸರ್ವೋತ್ತಮತ್ವವು ಕೂಡುವುದೇ ಇಲ್ಲವಾದ ಕಾರಣ ವಿರುದ್ಧವೇ ಆಗಿದೆ. (ಯಾವ ರೀತಿಯಿಂದಲೂ ಕೂಡಿಸಲು ಸಾಧ್ಯವೇ ಇಲ್ಲ.) (೬) ಮತ್ತು ವಾಯು ವಿಷ್ಣು ಇಬ್ಬರಿಗೂ ಪರಸ್ಪರ ನಿಯಮ್ಯ ನಿಯಾಮಕ ಭಾವವಿದ್ದರೆ ಇಬ್ಬರಿಗೂ ಪರಾಧೀನತ್ವವು ಬರಬೇಕಾಗುವುದು. ನಿಯಮ್ಯ ನಿಯಾಮಕ ಭಾವವಿಲ್ಲವಾದರೆ ವಾಯುವಿಗೆ ಭಗವನ್ನಿಯಾಮಕತ್ವವಿಲ್ಲದಿರುವ ಪ್ರಯುಕ್ತವೂ, ಶ್ರೀ ಹರಿಗೆ ವಾಯು ನಿಯಾಮಕತ್ವವಿಲ್ಲದಿರುವ ಪ್ರಯುಕ್ತವೂ ಅವರಿಬ್ಬರಿಗೂ ಸರ್ವೈಶ್ವರ್ಯವು ಕೂಡದೆ ಹೋಗಬೇಕಾಗುವುದು. (೭) ಮತ್ತು ಮುಖ್ಯವಾಯುವಿನ ಸ್ವರೂಪಾತಿರಿಕ್ತವಾದ ವೃತ್ತಿರೂಪವಾದ ಜ್ಞಾನಕ್ಕೆ ಪ್ರವಾಹತಃನಿತ್ಯತೆಯುಳ್ಳದಿರುವ ಕಾರಣ ವಾಯುವಿಗೂ ಶರೀರಾದಿಗಳು ಹುಟ್ಟುತ್ತವೆ. ಸ್ವರೂಪವು ಹುಟ್ಟುವುದಿಲ್ಲ. ಆದಕಾರಣ ಆಕಾಶ ಪದವಾಚ್ಯವಾದ ದೇವತೆಯಂತೆ ಪ್ರವಾಹತಃ ಸ್ವರೂಪಾತಿರಿಕ್ತವಾದ ವೃತ್ತಿಜ್ಞಾನವನ್ನು ಇಟ್ಟುಕೊಂಡು ಉತ್ಪತ್ತಿ ಅನುತ್ಪತ್ತಿ ಪ್ರತಿಪಾದಕ ಶ್ರುತಿಗಳಿಗೆ ವ್ಯವಸ್ಥೆಯು ಕೂಡುತ್ತದೆ, ಎಂಬ ಕಾರಣ (ಏತೇನ ಮುಖ್ಯಾಮುಖ್ಯಾನುತ್ಪತ್ತಿವಚನೇನ, ಎಂಬ) ಅತಿದೇಶವು ಕೂಡುತ್ತದೆ. (೮) (ವಾಯುವಿನ ಶರೀರಾದಿಗಳಿಗೆ ಉತ್ಪತ್ತಿಯಿದೆ. ಸ್ವರೂಪಕ್ಕೆ ಉತ್ಪತ್ತಿಯಿಲ್ಲ, ಎಂಬುವುದು 'ಅಥೈತಾನ್ಯುತ್ಪತ್ತಿಮಂತಿ ಚಾನುತ್ಪತ್ತಿಮಂತಿ ಚ ಪ್ರಾಣಾಃ' ಪ್ರಾಣ ಮೊದಲಾದುವುಗಳು ಉತ್ಪತ್ತಿ ಅನುತ್ಪತ್ತಿವುಳ್ಳವುಗಳು, ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗುತ್ತದೆ. ಇಂತಹ ವಾಯುವಿಗೆ) ಮುಖ್ಯವಾಗಿ ಅನುತ್ಪತ್ತಿಯು ಕೂಡುವುದಿಲ್ಲವೆಂಬುದೇ ವ್ಯವಸ್ಥೆಯನ್ನು ಹೊಂದಿಸಿಕೊಡುತ್ತದೆ. (೯) ಮುಖ್ಯವಾಯುವಿಗೆ ಪರಾಧೀನವಿಶೇಷವಿದೆ, ಎಂಬುವುದೂ ಮುಖ್ಯವಾಗಿ ಅನುತ್ಪತ್ತಿಯು ಕೂಡುವುದಿಲ್ಲವೆಂಬುದಕ್ಕೆ ಕಾರಣವೆಂದು ವಿವಕ್ಷಿತವಾಗಿದೆ. ಅಂತಹ ಪರಾಧೀನ ವಿಶೇಷವತ್ತ್ವಮಾತ್ರವು ದೇಹಾದಿಗಳಿಂದಲೂ ಹುಟ್ಟದಿರುವ ಅವ್ಯಾಕೃತಾಕಾಶ (ಅವಕಾಶ) ಚಿತ್ಪ್ರಕೃತಿಗಳಿಗೂ ಸಮವೇ ಆಗಿದೆ. (ಅಂತಹ ಉತ್ಪತ್ತಿಯನ್ನು ಇಟ್ಟುಕೊಂಡು ಮುಖ್ಯಾನುತ್ಪತ್ತಿಯು ಕೂಡದಿರುವುದರಿಂದ ಪೂರ್ವಾಧಿಕರಣದಲ್ಲಿಯೂ ಅವ್ಯಾಕೃತಾಕಾಶ ಚಿತ್ಪ್ರಕೃತಿಗಳಿಗೆ ಅಪುನರುಕ್ತಿಯೇ ವ್ಯವಸ್ಥೆಯನ್ನು ಹೊಂದಿಸಿಕೊಡುತ್ತದೆ, ಎಂಬುವುದು ಯುಕ್ತವೇ.) (ಏವಂಚ ವಾಯುವಿಗೆ ಮುಖ್ಯವಾದ ಅನುತ್ಪತ್ತಿಯು ಕೂಡದಿರುವುದರಿಂದ ಹಿಂದಿನಂತೆಯೇ ವ್ಯವಸ್ಥೆಯಿಂದ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವ ಪ್ರಯುಕ್ತ ಶ್ರೀ ವಿಷ್ಣುವೇ ಜಗತ್ಕಾರಣನೆಂಬುವುದು ಯುಕ್ತವೇ.

॥ ೨ ॥

೩ನೇ ಅಸಂಭವಾಧಿಕರಣದಲ್ಲಿ 'ಅಸತಃ ಸದಜಾಯತ' 'ಸದೇವ ಸೋಮ್ಯೇದಮಗ್ರ ಆಸೀತ್' ಅಸತ್ತಿನಿಂದ ಸತ್ ಹುಟ್ಟಿತು ಆದಿಯಲ್ಲಿ ಸತ್ ಎಂಬುವುದೇ ಇತ್ತು. ಇದು ಮೊದಲಾದ ಶ್ರುತಿಗಳ ವಿಪ್ರತಿಪತ್ತಿಯಿಂದ ಸತ್ ಶಬ್ದವಾಚ್ಯನಾದ ಪರಬ್ರಹ್ಮನು ಹುಟ್ಟುತ್ತಾನೋ, ಇಲ್ಲವೋ ಎಂದು ಸಂದೇಹವು ಬಂದರೆ ಉತ್ಪತ್ತಿಯುಳ್ಳವನೇ ಎಂದು ಪೂರ್ವಪಕ್ಷವು. ಹುಟ್ಟುವುದಿಲ್ಲವೆಂದು ಸಿದ್ಧಾಂತವು. ಅದರಲ್ಲಿ ಸತಸ್ಸಾಮ್ಯಂ ಸಚ್ಛಬ್ದವಾಚ್ಯನಾದ ಪರಬ್ರಹ್ಮನಿಗೆ ಆಕಾಶಾದಿಗಳ ಸಾಮ್ಯವು ಎಂದು ಹೇಳಿದ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.

**ಸೂ ॥ ನ ಚ ಸತಃ ಪರಾಧೀನವಿಶೇಷವತ್ತ್ವಂ ಸ್ವಾತಂತ್ರ್ಯಾತ್ ॥ ೩ ॥**

ಅ ॥ ಸಚ್ಛಬ್ದವಾಚ್ಯನಾದ ಪರಬ್ರಹ್ಮನಿಗೆ ಪರಾಧೀನ ವಿಶೇಷವತ್ತ್ವ ರೂಪವಾದ ಉತ್ಪತ್ತಿಯು ಉಂಟೇ ಉಂಟು. (ಪರಬ್ರಹ್ಮನು ಅನಾದಿಯೆಂದು ಶ್ರುತಿಯಲ್ಲಿ ಹೇಳಿದಾಗ್ಯೂ ಅನಾದಿಭೂತಗಳಾದ ಆಕಾಶವಾಯುಗಳ ಉತ್ಪತ್ತಿಯಂತೆ ಸ್ವರೂಪಾತಿರಿಕ್ತವಾದ' ಉತ್ಪತ್ತಿಯು ಕೂಡದಿದ್ದರೂ ಪರಾಧೀನ ವಿಶೇಷವತ್ತ್ವ

ಕೂಟವಾದ ಉತ್ಪತ್ತಿಯು ಕೂಡುತ್ತದೆ. ಆದಕಾರಣ ಅನಾದಿತ್ವವನ್ನು ಹೇಳತಕ್ಕ ಶ್ರುತಿಯಿಂದ ವಿರೋಧವು ಬರುವುದಿಲ್ಲ. ಅಂತೂ ಉತ್ಪತ್ತಿಯಿದ್ದ ಪ್ರಯುಕ್ತ ಆಕಾಶವಾಯುಗಳಿಂದ ಸಾಮ್ಯವಿದ್ದುದರಿಂದ ಪರಬ್ರಹ್ಮನೂ ಜಗತ್ಕಾರಣನೆಂಬುವುದು ಯುಕ್ತವಲ್ಲ, ಎಂಬ ಪೂರ್ವಪಕ್ಷವು) ಕೂಡುವುದಿಲ್ಲ. (ಏಕೆಂದರೆ ಸ್ವಾತಂತ್ರ್ಯಂ ಎಂದು ಹೇಳಿದ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಆಕಾಶವಾಯು ಮೊದಲಾದವುಗಳು ಅಸ್ವತಂತ್ರಗಳಾದುದರಿಂದಲೇ ಅವುಗಳಿಗೆ ಉತ್ಪತ್ತಿಯು ಕೂಡುತ್ತದೆ ) ಶ್ರೀ ಪರಮಾತ್ಮನಾದರೂ ಸರ್ವಸ್ವತಂತ್ರನಾದ ಪ್ರಯುಕ್ತವೇ ಆತನಿಗೆ ಉತ್ಪತ್ತಿಯು ಕೂಡುವುದೇ ಇಲ್ಲ. (ಆದಕಾರಣ ಉತ್ಪತ್ತಿಯುಳ್ಳ ಆಕಾಶಾದಿಗಳ ಸಾಮ್ಯವಿಲ್ಲ. ಅಂತೂ ಶ್ರೀ ಹರಿಯೇ ಜಗತ್ಕಾರಣನೆಂಬುವುದು ಯುಕ್ತವೇ. ॥ ೩ ॥

೪ನೇ ತೇಜೋಧಿಕರಣದಲ್ಲಿ, 'ವಾಯೋರಗ್ನಿಃ' ವಾಯುವಿನಿಂದ ಅಗ್ನಿಯು ಹುಟ್ಟುತ್ತದೆ, 'ತತ್ತೇಜೋಽಸೃಜತ' ಬ್ರಹ್ಮನು ಅಗ್ನಿಯನ್ನು ಸೃಷ್ಟಿಸಿದನು, ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಅಗ್ನಿಯು ವಾಯುವಿನಿಂದ ಹುಟ್ಟುತ್ತದೋ, ಪರಬ್ರಹ್ಮನಿಂದಲೋ, ಎಂದು ಸಂದೇಹವು ಬಂದರೆ ವಾಯುವಿನಿಂದ ಹುಟ್ಟುವುದೆಂದು ಪೂರ್ವಪಕ್ಷವು. ಪರಬ್ರಹ್ಮನಿಂದಲೇ ಎಂದು ಸಿದ್ಧಾಂತವು. ಅದರಲ್ಲಿ ದ್ವಾರವೈಯರ್ಥ್ಯಂ (ದ್ವಾರಕಾರಣಕ್ಕೆ ವೈಯರ್ಥ್ಯವೇ) ಎಂಬ ಪೂರ್ವಪಕ್ಷ ನ್ಯಾಯವನ್ನೇ ವಿವರಿಸುತ್ತಾರೆ.

**ಸೂ ॥ (೧) ನ ಚ ವಿಷ್ಣೋರೇವ ತೇಜಸಃ ಉತ್ಪತ್ತೌ ದ್ವಾರಕಾರಣವೈಯರ್ಥ್ಯಮೇವ ॥**
**(೨) ದ್ವಾರಮನುಸೃತ್ಯೈವ ವಿಷ್ಣೋಃ ಪ್ರವೃತ್ತೇಃ ॥ ೪ ॥**

ಅ ॥ (೧) ವಾಯೋರಗ್ನಿಃ ಎಂಬ ಶ್ರುತಿಗೆ ಪ್ರಾಮಾಣ್ಯವನ್ನು ಹೇಳುವುದಕ್ಕಾಗಿ ಅಗ್ನಿಯು ವಾಯುದ್ವಾರಾ ಶ್ರೀಹರಿಯಿಂದ ಹುಟ್ಟಿದ್ದು, ಎಂದು ಹೇಳುವವನೊಡನೆ (೧) ಬ್ರಹ್ಮನು ವಾಯುವಿನ ಅಪೇಕ್ಷೆಯಿಲ್ಲದೇನೇ ಅಗ್ನಿಯನ್ನು ಸೃಷ್ಟಿ ಮಾಡಲಿಕ್ಕೆ ಸಮರ್ಥನೋ. ಅಲ್ಲವೋ? ಶಕ್ತನಲ್ಲವೆಂಬ ಪಕ್ಷದಲ್ಲಿ ಬ್ರಹ್ಮ ವಾಯು ಇವರಿಬ್ಬರಿಗೂ ಕಾರಣತ್ವವು ಬರಬೇಕಾಗಿರುವುದರಿಂದ, ವಾಯುವಿನ ಅಪೇಕ್ಷೆಯಿಲ್ಲದೇನೇ ಸೃಷ್ಟಿಸಲಿಕ್ಕೆ ಶಕ್ತನೆಂಬ ೧ನೇ ಪಕ್ಷವನ್ನೇ ಇಟ್ಟುಕೊಳ್ಳಬೇಕು. ಅದರಲ್ಲಿ ವಾಯುವಿನ ಅಪೇಕ್ಷೆಯಿಲ್ಲದೇನೇ ವಿಷ್ಣುವು ತೇಜಸ್ಸನ್ನು ಸೃಷ್ಟಿಸುತ್ತಾನೆಂದಂಗೀಕರಿಸಿದರೆ ವಾಯುರೂಪದ್ವಾರ ಕಾರಣವು ವ್ಯರ್ಥವೇ. ಏವಂಚ ದ್ವಾರಕಾರಣಕ್ಕೆ ವೈಯರ್ಥ್ಯವು ಬರಬೇಕಾಗುವುದರಿಂದ ತೇಜಸ್ಸಿಗೆ ವಾಯು ಬ್ರಹ್ಮ ಇಬ್ಬರೂ ಕಾರಣರು, ಎಂದೇ ಹೇಳಬೇಕು. ಆದುದರಿಂದ ಪರಬ್ರಹ್ಮನೇ ಮುಖ್ಯ ಕಾರಣನು ಎಂಬುವುದು ಕೂಡುವುದಿಲ್ಲ. ಎಂಬ ಪೂರ್ವಪಕ್ಷವು) ಕೂಡುವುದಿಲ್ಲ.' (ಏಕೆಂದರೆ ಅನುಸಾರಿತಾ— (ಶ್ರೀವಿಷ್ಣುವು ದ್ವಾರಕಾರಣವನ್ನು ಅನುಸರಿಸಿಯೇ ಸೃಷ್ಟಿಸುವುದು) (ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (ಅಗ್ನಿ ಮೊದಲಾದುದಕ್ಕೆ ವಾಯು ಮೊದಲಾದವರು ಮುಖ್ಯ ಕಾರಣರಾಗದಿದ್ದರೂ ಶ್ರೀಹರಿಯು ವಾಯು ಮೊದಲಾದ)ದ್ವಾರಕಾರಣವನ್ನನುಸರಿಸಿಯೇ (ತನ್ನ ಇಚ್ಛೆಯಿಂದಲೇ ಕ್ರೀಡೆಯಿಂದ ಅಗ್ನಿ ಮೊದಲಾದವುಗಳನ್ನು ಸೃಷ್ಟಿಸುವುದಕ್ಕಾಗಿ ಪ್ರವೃತ್ತಿ ಮಾಡುತ್ತಾನೆಂದು ಶ್ರುತ್ಯಾದಿ ಸಿದ್ಧವಾಗಿದೆ.(ಏವಂಚ ಶ್ರೀಹರಿಯು ಮಾಡಲಿಕ್ಕೂ ಮಾಡದಿರಲಿಕ್ಕೂ ಅನ್ಯಥಾ ಮಾಡಲಿಕ್ಕೂ ತಾನು ಒಬ್ಬನೇ ಶಕ್ತನಾದಾಗ್ಯೂ ವಾಯ್ವಾದಿಗಳ ದ್ವಾರಾ ಸೃಷ್ಟಿಸುತ್ತಾನೆಂದು ಶ್ರುತ್ಯಾದಿ ಸಿದ್ಧವಾದ ಕಾರಣ ಆತನೊಬ್ಬನೇ ಮುಖ್ಯತಃ ಸರ್ವಕರ್ತನೆಂಬುವುದು ಯುಕ್ತವೇ. ॥ ೪ ॥

೫ನೇ ಅಬಧಿಕರಣದಲ್ಲಿ ಅಗ್ನೇರಾಪಃ = ಅಗ್ನಿಯಿಂದ ಜಲವು ಹುಟ್ಟಿತು. ತದಪೋಽಸೃಜತ = ಬ್ರಹ್ಮನು ಜಲವನ್ನು ಸೃಷ್ಟಿಸಿದನು, ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಜಲವು ತೇಜಸ್ಸಿನಿಂದ ಹುಟ್ಟುತ್ತದೋ, ಪರಬ್ರಹ್ಮನಿಂದಲೋ, ಎಂದು ಸಂದೇಹವು ಬಂದರೆ ತೇಜಸ್ಸಿನಿಂದ ಎಂದು ಪೂರ್ವಪಕ್ಷವು. ಬ್ರಹ್ಮ

ನಿಂದಲೇ ಎಂದು ಸಿದ್ಧಾಂತವು. ಅದರಲ್ಲಿ ದೃಷ್ಟಯುಕ್ತ್ಯನುಸಾರಿತ್ವಂ=(ಕಾಣಲ್ಪಟ್ಟ ಯುಕ್ತಿಯನ್ನನು-ಸರಿಸುವಿಕೆ) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ತೇಜಸ ಏವಾಪಾಮುತ್ಪತ್ತ್ಯಂಗೀಕಾರೇ ಘರ್ಮಾತ್ಸ್ವೇದಾದಿದೃಷ್ಟ್ಯನುಸಾರ ಇತಿ ಗುಣಾಧಿಕ್ಯಂ ॥ (೨) ಮುಖ್ಯಾರ್ಥಪರಿತ್ಯಾಗಪ್ರಾಪ್ತೇಃ ॥ ೫ ॥**

ಅ ॥ (೧) ದ್ವಾರಕಾರಣತ್ವವನ್ನು ಬಿಟ್ಟು (ಅಂದರೆ ಶ್ರೀ ಹರಿಯು ತೇಜಸ್ಸಿನ ದ್ವಾರಾ ಜಲವನ್ನು ಸೃಷ್ಟಿಸುತ್ತಾನೆಂದು ಹೇಳದೆ) ಸ್ವತಂತ್ರವಾಗಿ ತೇಜಸ್ಸಿನಿಂದಲೇ ಜಲವು ಹುಟ್ಟುತ್ತದೆಂದಂಗೀಕರಿಸಿದರೆ ತಾಪದಿಂದ ಬೆವರು ಮೊದಲಾದುವುಗಳು ಹುಟ್ಟುತ್ತವೆಯೆಂದು ಕಂಡದ್ದರಿಂದ ಪ್ರತ್ಯಕ್ಷಸಿದ್ಧವಾದುದನ್ನು ಅನುಸರಿಸಿದ ಹಾಗಾಯ್ತು. (ಮತ್ತು ಪ್ರತ್ಯಕ್ಷಮೂಲಕವಾದ ಅನುಮಾನ: ಆಪಃ ತೇಜಸೋ ಜಾಯಂತೇ ಅಪ್ತ್ವಾತ್ ಸ್ವೇದಾದಿವತ್= ಜಲವು ಅಗ್ನಿಯಿಂದ ಹುಟ್ಟುತ್ತದೆ, ಜಲವಾದ ಪ್ರಯುಕ್ತ, ಬೆವರಿನಂತೆ, ಎಂಬ ಯುಕ್ತ್ಯನುಸರಣವು) ಹೀಗೆ ಅಗ್ನೇರಾಪಃ- ಎಂಬ ಶ್ರುತಿಗೆ ಪ್ರತ್ಯಕ್ಷ, ಯುಕ್ತಿಗಳಿಂದ ಕೂಡುವಿಕೆ ಎಂಬ ಗುಣ ಸಂಬಂಧದಿಂದ ಪ್ರಾಬಲ್ಯವು. (ಏವಂಚ ಪ್ರತ್ಯಕ್ಷ, ಪ್ರತ್ಯಕ್ಷಮೂಲಕವಾದ ಯುಕ್ತಿ ಇವುಗಳ ಅನುಸರಣವಿದ್ದ ಪ್ರಯುಕ್ತ ಜಲವು ಸಾಕ್ಷಾತ್ತಾಗಿ ಅಗ್ನಿಯಿಂದಲೇ ಹುಟ್ಟಿದ್ದು. ಆದಕಾರಣ ಬ್ರಹ್ಮನು ಸರ್ವಕಾರಣನಲ್ಲ, ಎಂಬ ಪೂರ್ವ ಪಕ್ಷವು ಕೂಡುವುದಿಲ್ಲ. (೨) ಏಕೆಂದರೆ ಮುಖ್ಯತಾ= ಮುಖ್ಯತ್ವವು, ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಇದಂ ಸರ್ವಮಸೃಜತ = ಶ್ರೀ ಹರಿಯು ಇವೆಲ್ಲವನ್ನು ಸೃಷ್ಟಿಸಿದನು. ಕರ್ತಾ ಸರ್ವಸ್ಯ ವೈ ವಿಷ್ಣುಃ= ಸಮಸ್ತಕ್ಕೂ ಶ್ರೀ ವಿಷ್ಣುವೇ ಕರ್ತನು, ಎಂಬ ಶ್ರುತಿಸ್ಮೃತಿಗಳಲ್ಲಿರತಕ್ಕ ಸರ್ವಶಬ್ದಕ್ಕೆ ಅಸಂಕುಚಿತವಾದ ಸರ್ವ ಎಂಬ ಮುಖ್ಯಾರ್ಥವನ್ನು ಬಿಡಬೇಕಾಗುವುದು. (ಹಿಂದೆ ಹೇಳಿದ ಯುಕ್ತಿಯಿಂದ ಯುಕ್ತವಾದ ಅಗ್ನೇರಾಪಃ ಎಂಬ ಶ್ರುತಿಯು ಅಗ್ನಿಗೆ ದ್ವಾರಕಾರಣತ್ವವನ್ನು ಪ್ರತಿಪಾದಿಸುವುದರಿಂದ ಸಾವಕಾಶವು. ಅಂತೂ ಇದಂ ಸರ್ವಮಸೃಜತ = ಈ ಎಲ್ಲಾ ವಸ್ತುವನ್ನು ಸೃಷ್ಟಿಸಿದನು. ಇತ್ಯಾದಿ ವಾಕ್ಯಗಳಲ್ಲಿರತಕ್ಕ ಸರ್ವ ಶಬ್ದಕ್ಕೆ ಮುಖ್ಯಾರ್ಥವು ಸಿಗುವುದರಿಂದ ಶ್ರೀ ವಿಷ್ಣುವು ಸರ್ವಜಗತ್ತಿಗೂ ಸೃಷ್ಟಿಕರ್ತನೆಂಬುವುದು ಯುಕ್ತವು) ॥ ೫ ॥

೬ನೇ ಪೃಥಿವ್ಯಧಿಕರಣದಲ್ಲಿ 'ತಾ ಆಪ ಐಕ್ಷಂತ 'ಬಹ್ವ್ಯಸ್ಸ್ಯಾಮ ಪ್ರಜಾಯೇಮಹೀತಿ' 'ತಾ ಅನ್ನಮಸೃಜಂತ'= ಜಲಗಳು ಸೃಷ್ಟಿಸುವೆವೆಂದಾಲೋಚಿಸಿ ಅನ್ನವನ್ನು ಸೃಷ್ಟಿಸಿದವು, ಅದ್ಭ್ಯಃ ಪೃಥಿವೀ= ಜಲಗಳಿಂದ ಪೃಥಿವಿಯು ಹುಟ್ಟಿತು. ಎಂಬುವ ಶ್ರುತಿಗಳ ವಿಪ್ರತಿಪತ್ತಿಯಿಂದ (1) ಜಲವು ಅನ್ನಕ್ಕೆ ದ್ವಾರಕಾರಣವೋ, (2) ಅಥವಾ ಪೃಥಿವಿಗೋ, ಎಂದು ಸಂಶಯವು ಬಂದರೆ ಜಲವು ಪೃಥಿವಿಗೂ ಕಾರಣವಲ್ಲ, ಅನ್ನಕ್ಕೂ ಅಲ್ಲ, ಎಂದು ಪೂರ್ವಪಕ್ಷವು. ಅದರಲ್ಲಿ ಉಕ್ತಾನ್ಯಾರ್ಥಾವಿರೋಧತಃ ಪ್ರಸಿದ್ಧನಾಮಸ್ವೀಕಾರೇ ಬಹುವಾಕ್ಯಾನುವರ್ತಿತಾ = ಅನ್ನಶಬ್ದವು ಅನ್ಯಾರ್ಥವನ್ನು ಹೇಳುವುದರಿಂದ ಅನ್ನವೆನ್ನುವ ಪ್ರಸಿದ್ಧ ನಾಮವನ್ನು ಸ್ವೀಕರಿಸಿದರೆ ಅನೇಕ ವಾಕ್ಯಗಳ ಅನುಸರಣವು, ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ ತಾಭ್ಯೋ ವಾ ಅನ್ನಮುತ್ಪದ್ಯತ ಇತ್ಯಾದ್ಯುಕ್ತ ಪ್ರಸಿದ್ಧಾನ್ಯಾಖ್ಯಾನ್ಯಾರ್ಥಾವಿರೋಧೇನ ಪ್ರಸಿದ್ಧಾನ್ನನಾಮ ಸ್ವೀಕಾರೇ ಬಹುವಾಕ್ಯಾನುವರ್ತಿತೇತಿ ಗುಣಃ। ಅನ್ನಶಬ್ದಸ್ಯ ಪ್ರಯೋಗಬಾಹುಲ್ಯಾತ್ಪೃಥಿವ್ಯಾಮಪಿ ಯುಕ್ತಮತ್ವಾತ್ । ಅಧಿಕಾರಾದೀನಾಂ ನಿರವಕಾಶತ್ವಾಚ್ಚ । ಬಹುವಾಕ್ಯಾನುರೋಧೋಽಪ್ಯತ್ರೈವೇತಿ ॥ ೬ ॥**

ಅ ||(ಜಲವು ಪೃಥಿವಿಗೆ ಕಾರಣವಲ್ಲ. ಅನ್ನಕ್ಕೂ ಕಾರಣವಲ್ಲ. ಹಿಂದೆ ಹೇಳಿದ ಶ್ರುತಿಗಳೂ ಪರಸ್ಪರ ವಿರುದ್ಧಗಳು. ನಿರವಕಾಶಗಳೂ ಆಗಿರುವುದರಿಂದ ಎರಡರಲ್ಲಿ ಒಂದನ್ನು ಗ್ರಹಣ ಮಾಡಲಿಕ್ಕೆ ಬರುವುದಿಲ್ಲ. 'ತಾ ಅನ್ನಮಸೃಜಂತ' 'ತಾ ಅಪೋಽನ್ನಮಸೃಜಂತ' 'ಅದ್ಭ್ಯೋ ವಾ ಅನ್ನಮುತ್ಪದ್ಯತೇ= ಜಲಗಳಿಂದ ಅನ್ನವು ಹುಟ್ಟುತ್ತದೆ. ಇದು ಮೊದಲಾದ ಶ್ರುತಿಗಳಲ್ಲಿರತಕ್ಕ ಅನ್ನಶಬ್ದಕ್ಕೆ ಪೃಥಿವೀ ಎಂಬ ಅರ್ಥವಾಗುವುದರಿಂದ ಶ್ರುತಿಯು ಸಾವಕಾಶವಾಗುತ್ತದೆ, ಎಂದು ಹೇಳಕೂಡದು.) ತಾ ಅನ್ನಮಸೃಜಂತ ಇದು ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಅನ್ನ ಎಂಬ ಲೋಕಪ್ರಸಿದ್ಧಾರ್ಥಕ ಶಬ್ದಕ್ಕೆ ಪೃಥಿವಿಗಿಂತ ಭಿನ್ನವಾದ ಅರ್ಥಕ್ಕೆ ಅವಿರುದ್ಧವಾಗಿ (ಅಂದರೆ ಅನ್ನ ಶಬ್ದಕ್ಕೆ ಪೃಥಿವೀವಾಚಕತ್ವವನ್ನೇ ಇಟ್ಟುಕೊಂಡು) ಪ್ರಸಿದ್ಧವಾದ ಅನ್ನ ಎಂಬ ನಾಮವನ್ನು ಸ್ವೀಕರಿಸಿದರೆ ತಸ್ಮಾದ್ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ ಅದ್ಭ್ಯ ಏವ ತದಧ್ಯನ್ನಾದ್ಯಂ ಜಾಯತೇ ।। ಇದು ಮೊದಲಾದ ಬಹುವಾಕ್ಯಗಳನ್ನನುಸರಿಸಿದಂತೆ ಆಗುತ್ತದೆ. ಹಾಗೆಯೇ 'ಅನ್ನಮಶಿತಂ ತ್ರೇಧಾ ವಿಧೀಯತೇ ಎಂದು ಪ್ರಸಿದ್ಧವಾದ ಅನ್ನಲಿಂಗವನ್ನು ಪ್ರತಿಪಾದಿಸತಕ್ಕ ಬಹು ವಾಕ್ಯಗಳನ್ನು ಅನುಸರಿಸಿದಂತೆ ಆಗುತ್ತದೆ, ಎಂಬ ಗುಣವು ಲಭಿಸುತ್ತದೆ. (ಮತ್ತು ಪೃಥಿವೀ ಶಬ್ದಕ್ಕೆ ಅನ್ನ ಎಂಬ ಅರ್ಥವನ್ನು ಇಟ್ಟುಕೊಂಡು ಅದ್ಭ್ಯಃ ಪೃಥಿವೀ ಎಂಬ ಶ್ರುತಿಗೆ ಸಾವಕಾಶತ್ವವು ಎಂದೂ ಹೇಳಕೂಡದು. ಜಲದಿಂದಲೇ ಅನ್ನದ ಸೃಷ್ಟಿಯೆಂದಂಗೀಕರಿಸಿದರೆ ಅದ್ಭ್ಯಃ ಪೃಥಿವೀ। ಪೃಥಿವ್ಯಾ ಓಷಧಯಃ। ಓಷಧೀಭ್ಯೋಽನ್ನಂ, ಜಲದಿಂದ ಪೃಥಿವಿಯು, ಪೃಥಿವಿಯಿಂದ ಓಷಧಿಗಳು, ಓಷಧಿಗಳಿಂದ ಅನ್ನವು ಎಂಬ ಶ್ರುತಿ ವಿರೋಧವು ಬರುವುದು. ಅಂತೂ ಶ್ರುತಿಗಳೂ ಅಪ್ರಮಾಣಗಳಾಗಿರುವ ಪ್ರಯುಕ್ತ ಶ್ರುತಿ ಸಮನ್ವಯದಿಂದ ಶ್ರೀವಿಷ್ಣುವು ಜಗತ್ಕಾರಣನೆನ್ನುವುದು ಸಿದ್ಧಿಸುವುದಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ. ಏಕೆಂದರೆ ಶಕ್ತಿಮತ್ತ್ವಂ=ಅನ್ನ ಶಬ್ದಕ್ಕೆ ಪೃಥಿವಿಯಲ್ಲಿಯೂ ಶಕ್ತಿಯಿದೆ, ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಅಪಶ್ಚ ಪೃಥಿವೀ ಚಾನ್ನಂ, ಪೃಥಿವೀ ವಾ ಅನ್ನಂ, ತಾ ಅಪೋಽನ್ನಮಸೃಜಂತ ಪೃಥಿವೀ ವಾ ಅನ್ನಂ, ಇದು ಮೊದಲಾದ ಶ್ರುತಿಗಳಲ್ಲಿ ಅನ್ನದಲ್ಲಿ ಅನ್ನ ಶಬ್ದ ಪ್ರಯೋಗವಿದ್ದಂತೆಯೇ ಪೃಥಿವಿಯಲ್ಲಿಯೂ ಕೂಡ ಅನ್ನ ಶಬ್ದಕ್ಕೆ ಬಹುಧಾ ಪ್ರಯೋಗವಿದೆ: ಬಹು ಪ್ರಯೋಗವಿದ್ದ ಮೇಲೆ ಅಲ್ಲಿ ಶಕ್ತಿಯಿದೆ ಎಂದು ಕಲ್ಪಿಸಬೇಕು (ಆದಕಾರಣ ಅನ್ನ ಶಬ್ದಕ್ಕೆ ಪೃಥಿವಿಯಲ್ಲಿ ಶಕ್ತಿಯಿದ್ದ ಪ್ರಯುಕ್ತ ತಾ ಅನ್ನಮಸೃಜಂತ ಎನ್ನುವಲ್ಲಿ ಅನ್ನ ಶಬ್ದದಿಂದ ಪೃಥಿವಿಯೇ ಹೇಳಲ್ಪಡುತ್ತದೆ. ಆದಕಾರಣ ಜಲವು ಪೃಥಿವಿಗೇನೇ ದ್ವಾರಕಾರಣವು.) (ಅಂದರೆ ಶ್ರೀಹರಿಯು ಜಲದ್ವಾರಾ ಪೃಥಿವಿಯನ್ನು ಸೃಷ್ಟಿಸುತ್ತಾನೆ.) (ಮತ್ತು ತತ್ತೇಜೋಽಸೃಜತ, ತದಪೋಽಸೃಜತ, ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್ ಬ್ರಹ್ಮನು ಅಗ್ನಿಯನ್ನು ಸೃಷ್ಟಿಮಾಡಿದನು, ಜಲವನ್ನು ಸೃಷ್ಟಿ ಮಾಡಿದನು, ಅವುಗಳಲ್ಲಿ ಒಂದೊಂದನ್ನು ಮೂರು ಮೂರರಿಂದ ಯುಕ್ತವನ್ನಾಗಿ ಮಾಡಿದನು, ಇದು ಮೊದಲಾದ ಶ್ರುತಿಗಳ ದೆಶೆಯಿಂದ ಈ ಪ್ರಕರಣವು ಭೂತಾಧಿಕಾರವು. (ಕಾರ್ಷ್ಣ್ಯ ಪ್ರತ್ಯಯರೂಪವಾದ ಪೃಥಿವಿಯ ಲಿಂಗಾದಿಗಳು ಪ್ರಸಿದ್ಧವಾದ ಅನ್ನದಲ್ಲಿ) ನಿರವಕಾಶಗಳೂ ಆಗಿವೆ. (ಆದಕಾರಣ ತಾ ಅನ್ನಮಸೃಜಂತ ಎನ್ನುವಲ್ಲಿ ಅನ್ನ ಶಬ್ದದಿಂದ ಪೃಥಿವಿಯೇ ಹೇಳಲ್ಪಡುತ್ತದೆ.) ಅದ್ಭ್ಯೋ ವಾ ಅನ್ನಮುತ್ಪದ್ಯತೇ, ಇತ್ಯಾದಿಗಳಲ್ಲಿ ಅನ್ನ ಶಬ್ದವು ಪೃಥಿವೀ ಪರವೇ ಆಗಿದೆ. ತದೇವ ಭೂಯಿಷ್ಠಮನ್ನಂ ಭವತಿ, ಅನ್ನಮಶಿತಂ ತ್ರೇಧಾ ಭವತಿ' ಇತ್ಯಾದಿಗಳಲ್ಲಿ ಅನ್ನಶಬ್ದಕ್ಕೆ ಪಾರ್ಥಿವವೆಂದರ್ಥವು. ಹೀಗೆ ಬಹು ವಾಕ್ಯಗಳ ಅನುಸರಣವು, ಸಿದ್ಧಾಂತದಲ್ಲಿಯೇ ಇರುವುದು. (ಪೂರ್ವಪಕ್ಷದಲ್ಲಿ ಬಹುವಾಕ್ಯಗಳ ಅನುಸರಣವಿಲ್ಲ.) (ಏವಂಚ ಅನ್ನ ಶಬ್ದಕ್ಕೆ ಪೃಥಿವಿಯಲ್ಲಿಯೂ ಶಕ್ತಿಯಿದ್ದ ಪ್ರಯುಕ್ತ ಅನ್ನಶ್ರುತಿಯು ಪೃಥಿವೀ ಪರವೆಂದು ಅಂಗೀಕರಿಸಿದರೆ ಶ್ರುತಿವಿರೋಧವಿಲ್ಲದಿರುವ ಕಾರಣ ಜಲವು ಪೃಥಿವಿಗೆ ಕಾರಣವೆಂದು ಸಿದ್ಧವಾಗುವ ಪ್ರಯುಕ್ತ ಶ್ರೀ ವಿಷ್ಣುವು ಲೀಲಾರ್ಥವಾಗಿ ಇತರ ವಸ್ತುಗಳನ್ನು ದ್ವಾರೀಕರಿಸಿಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆಂದು ಸಿದ್ಧವಾಯ್ತು. || ೬ ||

೭ನೇ ತದಭಿಧ್ಯಾನಾಧಿಕರಣದಲ್ಲಿ ಯತ್ಪ್ರಯನ್ತ್ಯಭಿಸಂವಿಶಂತಿ, ಜೀವರು ಶ್ರೀ ಪರಮಾತ್ಮನನ್ನು ಹೊಂದುತ್ತಾರೆ, ಲಯ ಹೊಂದುತ್ತಾರೆ. ರುದ್ರೋ ಮಾವಿಶಾಂತಕಃ = ರುದ್ರನೇ ಅಂತಕನಾಗಿ ಕೊಂದಬೇಡ, ಎಂಬ ಶ್ರುತಿ ವಿಪ್ರತಿಪತ್ತಿಯಿಂದ ಅಧಿಭೂತ ಅಧಿದೈವಗಳು ಶ್ರೀ ಪರಮಾತ್ಮನಿಂದ ಲಯ ಹೊಂದುತ್ತಾವೋ, ರುದ್ರನಿಂದಲೋ ಎಂದು ಸಂಶಯವು ಬಂದರೆ ರುದ್ರನಿಂದಲೇ ಎಂದು ಪೂರ್ವಪಕ್ಷವು. ಅದರಲ್ಲಿ ಲೋಕದೃಷ್ಟ್ಯನುಸಾರಿತ್ವಂ ರುದ್ರಾದಿಗಳು ಸಂಹಾರಕರು ಎಂದಂಗೀಕರಿಸಿದರೆ ಲೋಕದಲ್ಲಿ ಪಿತನಿಂದ ಇತರರೇ ಸಂಹಾರಕರೆಂದು ದೃಷ್ಟವಾಗಿರುವುದರಿಂದ ಲೋಕದಲ್ಲಿ ಕಂಡದ್ದನ್ನೇ ಅನುಸರಣವು. ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ ನ ಚ ರುದ್ರಾದೀನಾಂ ಲಯಕಾರಿತ್ವಾಂಗೀಕಾರೇ ಪಿತುರನ್ಯಸ್ಯೈವ ಮಾರಕತ್ವದೃಷ್ಟೇ ಲೋಕದೃಷ್ಟಾನುಸಾರಿತ್ವಮಿತಿ ಗುಣಃ । ಲೋಕಪಿತ್ರವೈರೂಪ್ಯಾದ್ವಿಷ್ಣೋರ್ಯಥಾ ವಾಕ್ಯಮಂಗೀಕಾರೋಪಪತ್ತೇಃ । ಅನ್ಯಥಾ ನ ವಿಷ್ಣೋರನ್ಯೋ ವಿಲಯಕೃನ್ನ ವಿಷ್ಣೋರನ್ಯೋ ವಿಮುಕ್ತಿದಃ' ಇತ್ಯಾದಿ ಶ್ರುತಿವಿರೋಧಾತ್ । ರುದ್ರಸ್ಯ ತು ಕ್ವಚಿತ್ಸಂಹಾರದ್ವಾರತ್ವೇನೈವ ತದ್ವಾಕ್ಯಾನಾಂ ಸಾವಕಾಶತ್ವಾತ್ ॥ ೭ ॥

ಅ ॥ (1) ರುದ್ರ ಯಮ ಮೊದಲಾದವರು ಮಾರಕರು ಎಂದಂಗೀಕರಿಸಿದರೆ (ಶ್ರೀವಿಷ್ಣುವು ಜಗತ್ತಿಗೆ ಸರ್ಜಕನಾಗಿರುವುದರಿಂದ ಪಿತೃಭೂತನು) ಲೋಕದಲ್ಲಿ ಪಿತನಿಂದ ಇತರರೇ ಮಾರಕರೆಂದು ಕಂಡುದರಿಂದ ಲೋಕದಲ್ಲಿ ದೃಷ್ಟವಾದುದನ್ನೇ ಅನುಸರಿಸಿದಂತೆ ಆಯ್ತು. ಎಂದು ಗುಣವು ಎಂಬುವುದು (ಅಂದರೆ ಲೋಕದಲ್ಲಿ ಕಂಡದ್ದನ್ನನುಸರಿಸಿ ಸೃಷ್ಟಿಕರ್ತನಾದ ವಿಷ್ಣುವಿನಿಂದ ಇತರರಾದ ರುದ್ರಾದಿಗಳೇ ಸಂಹಾರಕರೆಂದಂಗೀಕರಿಸಿದರೆ, ಶ್ರೀ ವಿಷ್ಣುವು ಸಂಹಾರಕನು ಇತ್ಯಾದಿ ಪ್ರತಿಪಾದಕ ಶ್ರುತಿಗಳು ಅಪ್ರಮಾಣಗಳಾಗುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವಾದಿಗಳು ಕೂಡುವುದಿಲ್ಲ ಎಂಬ ಪೂರ್ವಪಕ್ಷವು) ಯುಕ್ತವಲ್ಲ (ಏಕೆಂದರೆ ವೈರೂಪ್ಯಂ ವಿಷ್ಣುವಿಗೆ ಲೋಕ ಪಿತೃಗಳಿಂದ ವೈಲಕ್ಷಣ್ಯವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಶ್ರೀ ಹರಿಯು ಅಹಂಕಾರಾದಿ ದೋಷರಹಿತನಾದುದರಿಂದ ಲೋಕದಲ್ಲಿದ್ದ ಪಿತೃಗಳಿಗಿಂತ ವಿಲಕ್ಷಣನು. ಅದರಿಂದ ಇದಂ ಸರ್ವಂ ವಿಲಾಪಯತಿ = ಇವೆಲ್ಲವನ್ನೂ ನಾಶಗೊಳಿಸುತ್ತಾನೆ. ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ' ಶ್ರೀ ಹರಿಯೊಬ್ಬನೇ ಸೃಷ್ಟಿಸುವವನು, ರಕ್ಷಿಸುವವನು, ಸಂಹರಿಸುವವನು, ಇದು ಮೊದಲಾದ ಶ್ರುತಿ ಸ್ಮೃತಿರೂಪ ವಾಕ್ಯಗಳನ್ನ ಅತಿಕ್ರಮಿಸದೆ ಅವುಗಳನ್ನನುಸರಿಸಿಯೇ ಶ್ರೀ ವಿಷ್ಣುವೇ ಸರ್ವ ಸಂಹಾರಕನೆಂದು ಅಂಗೀಕರಿಸುವುದು ಯುಕ್ತವಾಗುತ್ತದೆ. ಇಲ್ಲವಾದರೆ ವಿಷ್ಣುವಿಗಿಂತ ಇನ್ನೊಬ್ಬನು ನಾಶಮಾಡುವವನಿಲ್ಲ, ಇನ್ನೊಬ್ಬನು ಮೋಕ್ಷಕೊಡುವವನೂ ಇಲ್ಲ, ಇದು ಮೊದಲಾದ ಶ್ರುತಿಗಳಿಂದ ವಿರೋಧವು ಬರುವುದು. ರುದ್ರಾದಿಗಳು ಸಂಹಾರಕರೆಂದು ಹೇಳಿದ್ದು ಕೆಲವು ವಸ್ತುಗಳ ಸಂಹಾರದಲ್ಲಿ ಅವರು ದ್ವಾರಕಾರಣರಾದ ಪ್ರಯುಕ್ತವೇ ಹೀಗೆ ಆ ವಾಕ್ಯಗಳು ಸಾವಕಾಶಗಳಾಗುತ್ತವೆ. (ಅಂತೂ ಶ್ರೀ ವಿಷ್ಣುವಿಗೆ ಲೋಕದಲ್ಲಿದ್ದ ಪಿತೃಗಳಿಗಿಂತ ವೈಲಕ್ಷಣ್ಯವಿದ್ದಪ್ರಯುಕ್ತವೇ ಶ್ರೀ ಹರಿಯೊಬ್ಬನಿಗೇನೇ ಸೃಷ್ಟಿಸಂಹಾರಾದಿ ಕರ್ತೃತ್ವವು ಉಪಪನ್ನವಾಗುತ್ತದೆ.) ॥ ೭ ॥

೮ನೇ ವಿಪರ್ಯಯಾಧಿಕರಣದಲ್ಲಿ ಅತ ಏವ ಹೀದಂ ಪರಾತ್ಪರಾದುತ್ಪದ್ಯತೇ ಕ್ರಮಾದ್ವಿಲೀಯತೇ, ಅಕ್ಷರಾತ್ಪರಮಾಜ್ಜೀವ ಸರ್ವಮುತ್ಪದ್ಯತೇ ಕ್ರಮಾತ್ । ವ್ಯುತ್ಕ್ರಮಾದ್ವಿಲಯಶ್ಚೈವ ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಅಧಿಭೂತಾದಿಗಳು ಉತ್ಪತ್ತಿ ಕ್ರಮವನ್ನನುಸರಿಸಿಯೋ ಲಯವನ್ನು ಹೊಂದುತ್ತವೋ? ವ್ಯುತ್ಕ್ರಮದಿಂದಲೋ, ಎಂದು ಸಂದೇಹವು ಬಂದರೆ ಉತ್ಪತ್ತಿ ಕ್ರಮದಿಂದಲೇ ಲಯ

ವೆಂದು ಪೂರ್ವಪಕ್ಷವು. ಅದರಲ್ಲಿ ಲೋಕದೃಷ್ಟಾನುಸಾರಿತ್ವಂ (ಲೋಕದಲ್ಲಿ ಕಂಡದ್ದನ್ನು ಅನುಸರಿಸು ವಿಕೆಯು) ಎಂಬ ಪೂರ್ವೋಕ್ತವಾದ ಪೂರ್ವಪಕ್ಷ ನ್ಯಾಯವನ್ನೇ ವಿವರಿಸುತ್ತಾರೆ.

ಮೂ ॥ (೧) ನ ಚಲೋಕಾನುಸಾರಿತ್ವಂ। ಕ್ರಮಾದುತ್ಪದ್ಯತೇ ಕ್ರಮೊದ್ವಿಲೀಯತೇ, ಕ್ರಮೇಣೈವೋತ್ಪತ್ತಿರ್ವಿಲಯಶ್ಚ ಕ್ರಮೇಣೈವ ಹ್ಯಸ್ಯೋತ್ಪತ್ತಿಲಯೌ ಇತ್ಯಾದಿ ಲೋಕಾನುಸಾರಿ ಬಹುಶ್ರುತ್ಯನುರೋಧಶ್ಚ ಯಥೋತ್ಪತ್ತಿಲಯೋ । (೨) ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ । ಸೃಷ್ಟಾವನ್ಯೋ ಲಯೇ ಚಾನ್ಯ ಇತಿ ವೇದವಿದೋ ವಿದುಃ ॥ ಇತಿ ಶ್ರುತೇಃ (೩) ಕ್ರಮವಾಕ್ಯಸ್ಯ ಸಾವಕಾಶತ್ವಾದ್ವೈರೂಪ್ಯಂ ಬಹು ಪ್ರಕಾರತ್ವಂ ಕ್ರಮಸ್ಯ ॥ ೮ ॥

ಅ ॥ (೧) ಲೋಕದಲ್ಲಿ ಕಂಡದ್ದನ್ನು ಅನುಸರಿಸುವಿಕೆಯು (ಅಂದರೆ ಲೋಕದಲ್ಲಿ ಉತ್ಪತ್ತಿಕ್ರಮವನ್ನನುಸರಿಸಿಯೇ ಲಯವು ಪ್ರಾಯಶಃ ಕಂಡದೆ) ಉತ್ಪತ್ತಿಕ್ರಮದಿಂದಲೇ ಲಯವೆಂದಂಗೀಕರಿಸಿದರೆ ಕ್ರಮದಿಂದಲೇ ಹುಟ್ಟುತ್ತದೆ. ಕ್ರಮವಾಗಿಯೇ ಲಯ ಹೊಂದುತ್ತದೆ. ಕ್ರಮದಿಂದಲೇ ಉತ್ಪತ್ತಿಯು ಮತ್ತು ಲಯವು. ಕ್ರಮದಿಂದಲೇ ಈ ಜಗತ್ತಿಗೆ ಜನ್ಮಲಯಗಳು ಇದು ಮೊದಲಾದ ಲೋಕಾನುಸಾರಿಗಳಾದ ಬಹುಶ್ರುತಿ ವಾಕ್ಯಗಳನ್ನು ಅನುಸರಿಸಿದಂತೆಯೇ ಆಗುವುದು. (ಎವಂಚ ಲೋಕದೃಷ್ಟಾನುಸಾರಿಯಾದ ಕ್ರಮಶ್ರುತಿಯ ವಿರೋಧದಿಂದ ವ್ಯುತ್ಕ್ರಮ ಶ್ರುತಿಗೆ ಅಪ್ರಾಮಾಣ್ಯವಿದ್ದಂತೆಯೇ ಇತರ ಶ್ರುತಿಗಳಿಗೂ ಅಪ್ರಾಮಾಣ್ಯವಿದ್ದ ಪ್ರಯುಕ್ತ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ ಏಕೆಂದರೆ—ವೈರೂಪ್ಯಂ (ಲೋಕ ಶಿಷ್ಟಗಳಿಂದ ವೈಲಕ್ಷಣ್ಯವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಅಧಿಭೂತಾದಿಗಳು ಉತ್ಪತ್ತಿಕ್ರಮಕ್ಕಿಂತ ವಿಪರೀತವಾಗಿಯೇ ಲಯವನ್ನು ಹೊಂದುತ್ತವೆ. ಲೋಕಾನುಸಾರಿಗಳಾದ ಬಹುವಾಕ್ಯಗಳಿಂದ ವಿರೋಧವಿಲ್ಲ. ಕ್ರಮವು, ವ್ಯುತ್ಕ್ರಮ ಅನುಕ್ರಮ ಭೇದದಿಂದ ಎರಡು ಪ್ರಕಾರವಾಗಿದೆ. ಕ್ರಮಾದ್ವಿಲೀಯತೇ ಎಂಬ ವಾಕ್ಯವು ವ್ಯುತ್ಕ್ರಮ ಪರವಾಗಿ ಸಾವಕಾಶವಾಗಿದೆ. (೨) ವ್ಯುತ್ಕ್ರಮ ಅನುಕ್ರಮ ಎಂದು ಕ್ರಮವು ೨ ವಿಧವು. ಸೃಷ್ಟಿಯಲ್ಲಿ ಬೇರೆ ಕ್ರಮವು. ಲಯದಲ್ಲಿ ಬೇರೆ, ಹೀಗೆ ವೇದಜ್ಞರು ಹೇಳುತ್ತಾರೆ, ಎಂಬ ಶ್ರುತಿಯು ಕ್ರಮವು ಅನೇಕಪ್ರಕಾರವಿದೆ. ಎಂಬ ವಿಷಯದಲ್ಲಿ ಪ್ರಮಾಣವು. ಅಂತೂ ವ್ಯುತ್ಕ್ರಮ ಅನುಕ್ರಮ ಭೇದದಿಂದ ಕ್ರಮವು ಎರಡು ವಿಧವಾದ ಪ್ರಯುಕ್ತ ಕ್ರಮವಾಕ್ಯವು ವ್ಯುತ್ಕ್ರಮ ಪರವಾಗಿ ಸಾವಕಾಶವಾಗಿರುವುದರಿಂದ ಉತ್ಪತ್ತಿಕ್ರಮದಿಂದಲೇ ಲಯವೆಂದಂಗೀಕರಿಸಿದರೆ ಬಹುವಾಕ್ಯಗಳನ್ನನುಸರಿಸಿದಂತೆ ಆಗುವುದಿಲ್ಲ. ಹೀಗೆ ಕ್ರಮ ವಾಕ್ಯವು ಸಾವಕಾಶವಾಗಿರುವುದರಿಂದ ಕ್ರಮವು ಅನೇಕ ಪ್ರಕಾರವು)(ಎವಂಚ ಕ್ರಮವು ವ್ಯುತ್ಕ್ರಮ ಅನುಕ್ರಮ ಭೇದದಿಂದ ಬಹುಪ್ರಕಾರವಾಗಿರುವುದರಿಂದ ವ್ಯುತ್ಕ್ರಮದಿಂದ ಲಯವೆಂದಂಗೀಕರಿಸಿದರೂ ಶ್ರುತಿಗೆ ಪ್ರಾಮಾಣ್ಯವು ಕೂಡುವುದರಿಂದ ಶ್ರೀ ಹರಿಯೇ ಜಗತ್ಕರ್ತನೆಂಬುದು ಯುಕ್ತವು ॥ ೮ ॥

೯ನೇ ಅಂತರಾಧಿಕರಣದಲ್ಲಿ ಅಕ್ಷರಾತ್ಪರತಃ ಪರ ಎಂಬ ಶ್ರುತಿ, ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ, ಎಂಬ ಲಿಂಗದರ್ಶನ ಇವುಗಳಿಂದ (೧) ಅಧಿಭೂತಾದಿಗಳಲ್ಲವೂ ಉತ್ಪತ್ತಿ ಕ್ರಮಕ್ಕಿಂತ ವಿಪರೀತವಾಗಿ ಲಯವನ್ನು ಹೊಂದುತ್ತವೋ. (೨) ಕೆಲವು ಪದಾರ್ಥಗಳು ಕ್ರಮದಿಂದಲೂ ಲಯವನ್ನು ಹೊಂದುತ್ತವೋ ಎಂದು ಸಂದೇಹವು ಬಂದರೆ ಎಲ್ಲರಿಗೆ ವ್ಯುತ್ಕ್ರಮದಿಂದ ಲಯವಲ್ಲ ಮತ್ತೆ ಕೆಲವರಿಗೆ ಕ್ರಮದಿಂದಲೂ, ಕೆಲ

ವರಿಗೆ ವ್ಯುತ್ಕ್ರಮದಿಂದಲೂ ಲಯವೆಂದು ಪೂರ್ವಪಕ್ಷವು. ಇಲ್ಲಿಯೂ ಲೋಕದೃಷ್ಟ್ಯನುಸಾರಿತ್ವಂ ಎಂಬ ಪೂರ್ವಪಕ್ಷ ನ್ಯಾಯವನ್ನೇ ವಿವರಿಸುತ್ತಾರೆ.

**ಮೂ ॥ (೧) ನ ಚ ಕೇಷಾಂಚಿತ್ಕ್ರಮಾಲ್ಲಯಃ ಕೇಷಾಂಚಿದ್ವ್ಯುತ್ಕ್ರಮಾಲ್ಲಯಃ ಇತ್ಯಂಗೀಕಾರೇ ಲೋಕದೃಷ್ಟ್ಯನುಸಾರಾದಂತರಾ ವಿಜ್ಞಾನಮನಸೀ ವ್ಯುತ್ಕ್ರಮಃ । (೨) ಸರ್ವಂ ವಾ ಏತತ್ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ ಇತಿ ಶ್ರುತೌ ಸರ್ವಸ್ಯಾಪಿ ವ್ಯುತ್ಕ್ರಮಾಲ್ಲಯೇ ಸಂಗ್ರಹಾತ್ (೩) ತಲ್ಲಿಂಗಸ್ಯ ತು ಚರಾಚರ ವ್ಯಪಾಶ್ರಯವಿಜ್ಞಾನಾದಿ ವಿಷಯತ್ವೇನೈವ ಸಾವಕಾಶತ್ವಾತ್ ॥ ೯ ॥**

ಅ ॥ (೧) ಕೆಲವರಿಗೆ ಕ್ರಮದಿಂದ ಲಯವು. ಕೆಲವರಿಗೆ ವ್ಯುತ್ಕ್ರಮದಿಂದ ಎಂದಂಗೀಕರಿಸಿದರೆ ಲೋಕದಲ್ಲಿ ಪ್ರತ್ಯಕ್ಷಸಿದ್ಧವಾದುದನ್ನು ಅನುಸರಿಸಿದಂತೆಯೇ ಆಗುವುದು. (ಹೇಗೆಂದರೆ ಲೋಕದಲ್ಲಿ ಪಿತನ ಇದಿರು ಮಗನಿಗೂ, ಮಗನ ಇದಿರು ಪಿತನಿಗೂ ಮರಣವು ಕಂಡದೆ) ಆದಕಾರಣ ವಿಜ್ಞಾನತತ್ತ್ವ ಮನಸ್ತತ್ತ್ವಗಳನ್ನು ಬಿಟ್ಟು ವ್ಯುತ್ಕ್ರಮದಿಂದ ಲಯವು. (ವಿಜ್ಞಾನತತ್ತ್ವ ಮನಸ್ತತ್ತ್ವಗಳಿಗಾದರೂ ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ' ಎಂದು ಮನಸ್ತತ್ತ್ವದಿಂದ ಹುಟ್ಟಿದ ವಿಜ್ಞಾನತತ್ತ್ವಕ್ಕೆ 'ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ' ಎಂದು ಮನಸ್ತತ್ತ್ವದ ಲಯವಾದ ಮೇಲೆಯೇ ಲಯವನ್ನು ಹೇಳಿದ ಕಾರಣ ತದನ್ಯಥಾನುಪಪತ್ತಿ ರೂಪಲಿಂಗದಿಂದಲೇ ಉತ್ಪತ್ತಿ ಕ್ರಮವನ್ನನುಸರಿಸಿಯೇ ಲಯವು) (ಏವಂಚ ಲೋಕ ದೃಷ್ಟ್ಯನುಸಾರಿ ಲಿಂಗಕ್ಕೆ ವಿರುದ್ಧವಾದ ಶ್ರುತಿಯು ಅಪ್ರಮಾಣವಾದಪ್ರಯುಕ್ತ ಶ್ರುತಿ ಬಲದಿಂದ ಶ್ರೀವಿಷ್ಣುವು ಜಗತ್ಕಾರಣನೆಂಬುವುದು ಯುಕ್ತವಲ್ಲ,) ಎಂಬ ಪೂರ್ವಪಕ್ಷವು ಉಚಿತವಲ್ಲ, (ಏಕೆಂದರೆ ಸರ್ವಸಂಗ್ರಹಃ= ಲಯವನ್ನು ಹೊಂದತಕ್ಕ ಎಲ್ಲಾ ವಸ್ತುಗಳಿಗೂ ಸಂಗ್ರಹವು)ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಸಮಸ್ತಪದಾರ್ಥಗಳೂ ಕ್ರಮದಿಂದ ಹುಟ್ಟುತ್ತವೆ. ವ್ಯುತ್ಕ್ರಮದಿಂದ ಲಯ ಹೊಂದುತ್ತವೆ, ಎಂದು ಶ್ರುತಿಯಲ್ಲಿ ಸಮಸ್ತ ಪದಾರ್ಥಗಳಿಗೂ ವ್ಯುತ್ಕ್ರಮದಿಂದ ಲಯವು ಸಂಗ್ರಹೀತವಾಗಿದೆ. ವಿಜ್ಞಾನತತ್ತ್ವ ಮನಸ್ತತ್ತ್ವಗಳಿಗೆ ಉತ್ಪತ್ತಿ ಕ್ರಮಾನುಸಾರವಾಗಿಯೇ ಲಯವೆಂದು ಸಾಧಿಸತಕ್ಕ ಶ್ರುತಿದ್ವಯಾನ್ಯಥಾನುಪಪತ್ತಿ ರೂಪಲಿಂಗವು. ಚೇತನ ಅಚೇತನ ರೂಪಗಳಾದ ವಿಜ್ಞಾನ ಮನಃಪದಗಳಿಂದ ತಿಳಿಯಲ್ಪಡುವ ತತ್ತ್ವ ಭಿನ್ನಗಳಾದ ವಿಜ್ಞಾನ ಮನಸ್ಸುಗಳನ್ನು ವಿಷಯೀಕರಿಸಿಕೊಂಡು ಸಾವಕಾಶವಾಗುತ್ತದೆ. ಮನಸಶ್ಚ ವಿಜ್ಞಾನಂ ಎಂಬ ಶ್ರುತಿಯಾದರೂ ಚೇತನಾಚೇತನ ವಿಷಯಕವಾದ ವೃತ್ತಿ ರೂಪವಾದ ಜ್ಞಾನವು ಮನೋರೂಪವಾದ ಇಂದ್ರಿಯದಿಂದ ಹುಟ್ಟಿದ್ದು ಎಂದು ಪ್ರತಿಪಾದಿಸಿಯೇ ಸಾವಕಾಶವಾಗುತ್ತದೆ.) 'ಏವಂಚ ಸರ್ವಂ ವಾ ಎಂಬ ಶ್ರುತಿಯಲ್ಲಿ ಲಯವನ್ನು ಹೊಂದತಕ್ಕ ಎಲ್ಲಾ ವಸ್ತುಗಳನ್ನು ಸಂಗ್ರಹಿಸಿರುವುದರಿಂದ ವ್ಯುತ್ಕ್ರಮದಿಂದಲೇ ಲಯವೆಂದು ಸಿದ್ಧಿಸುವುದರಿಂದ ಶ್ರುತಿಗಳಿಗೆ ಪ್ರಾಮಾಣ್ಯವು ಸಿದ್ಧಿಸುವ ಪ್ರಯುಕ್ತ ಶ್ರೀ ವಿಷ್ಣುವು ಜಗತ್ಕಾರಣನೆಂಬುವುದು ಯುಕ್ತವೇ ॥ ೯ ॥

೧೦ನೇ ನ್ಯಾಯಾಧಿಕರಣದಲ್ಲಿ ನಿತ್ಯೋ ನಿತ್ಯಾನಾಂ, ಅಂತಸ್ತಮಸಿ ವಿಲೀನಃ ಎಂಬ ಶ್ರುತಿಗಳ ವಿರೋಧದಿಂದ ಶ್ರೀ ಪರಮಾತ್ಮನಿಗೆ ಲಯವಿದೆಯೋ, ಇಲ್ಲವೋ ಎಂದು ಸಂದೇಹವು ಬಂದರೆ ಲಯವಿದೆ ಎಂದು ಪೂರ್ವಪಕ್ಷವು. ಅದರಲ್ಲಿ ಜೀವಸಾಮ್ಯಂ—ಜೀವರಿಂದ ಸಾಮ್ಯವು ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ಚೇತನತ್ವೇನ ಸಾಮ್ಯಾದ್ವಿಷ್ಣೋರಪಿ ದೇಹಲಯಃ । (೨) ಸರ್ವೇ ವಾ ಏತೇ ಚಿದಾತ್ಮಾನೋ ಬ್ರಹ್ಮಲ್ಲಯಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತೀತಿ**




## ಎರಡನೇ ಅಧ್ಯಾಯ

**ತಸ್ಯೋದರೇ ಸರ್ವಸಂಗ್ರಹಣಾದಿಶ್ರುತಿಭ್ಯೋ ನಿತ್ಯತ್ವಾವಗಮಾತ್ತದ್ದೇಹಸ್ಯ ।**
**ಅಶ್ರುತತ್ವಾಚ್ಚಾನ್ಯಥಾ ॥ ೧೦ ॥**

ಅ ॥ ಶ್ರೀ ವಿಷ್ಣುವೂ ಚೇತನನಾಗಿರುವುದರಿಂದ ಚೇತನತ್ವೇನ ಜೀವರಿಂದ ಸಾಮ್ಯವಿದ್ದಪ್ರಯುಕ್ತ ಶ್ರೀ ವಿಷ್ಣುವಿಗೂ ದೇಹಲಯವಿದೆ. (ಅಂದರೆ ವಿಷ್ಣುರ್ಲಯವಾನ್ ಚೇತನತ್ವಾತ್ ಜೀವವತ್=ಜೀವನಂತೆಯೇ ಚೇತನನಾದ ಪ್ರಯುಕ್ತ ವಿಷ್ಣುವೂ ದೇಹನಾಶವುಳ್ಳವನು, ಎಂಬ ಯುಕ್ತಿಯು ಉಕ್ತವಾಯ್ತು.) (ತಥಾ ಚ ವಿಷ್ಣುವು ಸರ್ವಸ್ವತಂತ್ರನಾದುದರಿಂದ ಉತ್ಪತ್ತಿಯಿಲ್ಲವೆಂದು ಹೇಳಿದಾಗ್ಯೂ ಸರ್ವಸ್ವತಂತ್ರನಾದವನಿಗೆ ಕ್ರೀಡೆಯಿಂದ ಶರೀರವನ್ನು ತೆಗೆದುಕೊಂಡು ಪರಿತ್ಯಾಗವು ಕೂಡಬಹುದಷ್ಟೆ.) (ಏವಂಚ ವಿಷ್ಣುವಿಗೆ ಜೀವರ ಸಾಮ್ಯವಿದ್ದುದರಿಂದ ಜೀವರಂತೆ ನಾಶವಿದೆ ಎಂದು ಸಿದ್ಧಿಸುವಪ್ರಯುಕ್ತ ಪ್ರಬಲವಾದ ಲಯ ಪ್ರತಿಪಾದಕ ಶ್ರುತಿವಿರೋಧದಿಂದ ನಿತ್ಯತ್ವಪ್ರತಿಪಾದಕಶ್ರುತಿಯು ಅಪ್ರಮಾಣವಾದಪ್ರಯುಕ್ತ ಶ್ರುತಿ ಬಲದಿಂದ ಶ್ರೀ ವಿಷ್ಣುವು ಜಗತ್ಕಾರಣನೆಂಬುವುದು ಕೂಡುವುದಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ, ಏಕೆಂದರೆ ಸರ್ವಸಂಗ್ರಹಃ=(ಪ್ರಲಯ ಕಾಲದಲ್ಲಿ ಶ್ರೀಹರಿಯ ಉದರದಲ್ಲಿ ಎಲ್ಲಾ ಚೇತನರಿಗೂ ಪ್ರವೇಶವು) ಎಂಬ ಸಿದ್ಧಾಂತ ನ್ಯಾಯವನ್ನು (ವಿವರಿಸುತ್ತಾರೆ.) ಎಲ್ಲಾ ಚೇತನರೂ ಚತುರ್ಮುಖನಲ್ಲಿ ಲಯವನ್ನು ಹೊಂದಿ ಪ್ರಲಯ ಕಾಲದಲ್ಲಿ ಶ್ರೀ ಹರಿಯ ಉದರದಲ್ಲಿ ಪ್ರವೇಶಿಸುತ್ತಾರೆ, ಎಂದು ವಿಷ್ಣುವಿನ ಉದರದಲ್ಲಿ ಎಲ್ಲಾ ಚೇತನರೂ ಪ್ರವೇಶಿಸುತ್ತಾರೆ ಎಂದು ಪ್ರತಿಪಾದಿಸತಕ್ಕ ಶ್ರುತಿಗಳ ದೆಸೆಯಿಂದ ಶ್ರೀ ಪರಮಾತ್ಮನ ದೇಹವು ಅನಾದಿನಿತ್ಯವೆಂದೇ ತಿಳಿಯುತ್ತದೆ. (ವಿಷ್ಣುವಿನ ದೇಹವು ಅನಿತ್ಯವೆಂದಾದರೆ ಪ್ರಲಯಕಾಲದಲ್ಲಿ ಸರ್ವಚೇತನರು ಆತನ ಉದರದೊಳಗೆ ಇರುತ್ತಾರೆಂಬುವುದು ಕೂಡದೆ ಹೋದೀತು, ಮಾತ್ರವಲ್ಲ. ಅನ್ಯಥಾ=ಬೇರೆ ರೀತಿಯಾಗಿ ಅಂದರೆ)(ಶ್ರೀ ವಿಷ್ಣುವಿನ ದೇಹಕ್ಕೆ ನಾಶವಿದೆ ಎಂದು) ಎಲ್ಲಿಯೂ ಶ್ರುತವಾಗಲಿಲ್ಲ. (ಏವಂಚ ಪ್ರಲಯ ಕಾಲದಲ್ಲಿ ಶ್ರೀ ವಿಷ್ಣುವಿನ ಹೊಟ್ಟೆಯಲ್ಲಿ ಸಮಸ್ತ ಚೇತನರು ಪ್ರವೇಶ ಮಾಡುತ್ತಾರೆಂದು ಶ್ರುತಿಯಲ್ಲಿ ಹೇಳಿದೆ. ಅಂತಸ್ತಮಸಿ ನಿಲೀನಃ ಎಂಬ ಶ್ರುತಿಯು ಶ್ರೀಹರಿಯು ಪ್ರಕೃತಿಯಿಂದ ಆಚ್ಛಾದಿತನಾಗಿರುತ್ತಾನೆನ್ನುವ ಅರ್ಥವನ್ನು ಹೇಳುವುದರಿಂದ ಸಾವಕಾಶವಾಗುತ್ತದೆ. ಚೇತನತ್ವ ಯುಕ್ತಿಯು ಶ್ರುತಿವಿರೋಧದಿಂದ ಅಪ್ರಮಾಣವು. ಶ್ರೀ ವಿಷ್ಣುವಿನ ದೇಹವು ಅನಿತ್ಯವೆಂದು ಹೇಳತಕ್ಕ ಸ್ಪಷ್ಟ ಶ್ರುತಿಯು ಸರ್ವಥಾ ಇಲ್ಲದಿರುವುದರಿಂದ ಲಯವಿಲ್ಲದಿರುವ ಕಾರಣ ನಿತ್ಯತ್ವವೇ (ಲಯಾಭಾವವೇ) ಸಿದ್ಧವಾಗುವ ಪ್ರಯುಕ್ತ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವು) ॥ ೧೦ ॥

೧೧ನೇ ಅಧಿಕರಣದಲ್ಲಿ 'ನಿತ್ಯೋ ನಿತ್ಯಾನಾಂ' 'ಸರ್ವ ಏತೇ ಚಿದಾತ್ಮಾನೋ ವ್ಯುಚ್ಚರಂತಿ' ಎಂಬ ಶ್ರುತಿಗಳ ವಿರೋಧದಿಂದ ಜೀವನು ಹುಟ್ಟುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ ಹುಟ್ಟುವುದಿಲ್ಲ,ಎಂದು ಪೂರ್ವಪಕ್ಷವು. ಅಲ್ಲಿ ಅನಾದಿತಾ (ಜೀವರಿಗೆ ಅನಾದಿತ್ವವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚಾನಾದಿತ್ವಾಜ್ಜೀವಸ್ಯ ಪರಾಧೀನವಿಶೇಷಾಪ್ರಾಪ್ತಿಃ ॥ (೨) ಇದಂ ಸರ್ವಮಸೃಜತೇತಿ ಸರ್ವಸ್ಮಿನ್ ಗೃಹೀತತ್ವಾತ್।ಪರಾಧೀನ ವಿಶೇಷವತ್ತ್ವೇಽಪ್ಯನಾದಿತ್ವಸ್ಯಾ ವಿರೋಧಾತ್ ॥ ೧೧ ॥**

ಅ ॥ (೧) ಜೀವನು ಅನಾದಿಯಾದುದರಿಂದ (ಸ್ವರೂಪತಃ ಉತ್ಪತ್ತಿಯಿಲ್ಲದಿರುವುದರಿಂದ) ಆತನಿಗೆ ಪರಾಧೀನ ವಿಶೇಷ ಪ್ರಾಪ್ತಿಯಿಲ್ಲ. (ಏವಂಚ ಜೀವನು ಅನಾದಿನಿತ್ಯನಾದುದರಿಂದ ಉತ್ಪತ್ತಿಯು ಕೂಡ

ದಿರುವ ಪ್ರಯುಕ್ತ ವಿಷ್ಣುವಿಗೆ ಸರ್ವಕರ್ತೃತ್ವವು ಕೂಡುವುದಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ.) ಏಕೆಂದರೆ (೨) ಶ್ರೀಹರಿಯು ಎಲ್ಲಾ ವಸ್ತುವನ್ನು ಸೃಷ್ಟಿ ಮಾಡಿದನು, ಎಂದು ಹೇಳುವಾಗ ಸರ್ವಪದಾರ್ಥದಲ್ಲಿ ಜೀವನೂ ಸೇರಿರುವುದರಿಂದ ಆತನಿಗೆ ಉತ್ಪತ್ತಿಯು ಸಿದ್ಧವಾಯ್ತು. ಹೀಗೆ ಆತನಿಗೆ ಪರಾಧೀನ ವಿಶೇಷವತ್ತ್ವರೂಪವಾದ ಉತ್ಪತ್ತಿಯನ್ನಂಗೀಕರಿಸಿದರೂ ಜೀವಸ್ವರೂಪವು ಅನಾದಿನಿತ್ಯವೆಂದು ಹೇಳಿದುದಕ್ಕೆ ವಿರೋಧವಿಲ್ಲ. ಅಂತೂ ಜೀವನಿಗೂ ಉತ್ಪತ್ತಿಯಿದೆ ಎಂದು ಸಿದ್ಧವಾಗುವ ಪ್ರಯುಕ್ತ ಆತನಿಗೆ ಸರ್ವಜಗತ್ಕರ್ತೃತ್ವವು ಯುಕ್ತವು. ||೧೧||

೧೨ನೇ ಉತ್ಕ್ರಾಂತ್ಯಧಿಕರಣದಲ್ಲಿ 'ವ್ಯಾಪ್ತಾ ಹ್ಯಾತ್ಮಾನಃ' 'ಅಣುರ್ಹ್ಯೇಷ ಆತ್ಮಾ' ಎಂಬ ಶ್ರುತಿಗಳ ವಿವಾದದಿಂದ (1) ಜೀವನು ವ್ಯಾಪ್ತನೋ, (2) ಅಣುವೋ ಎಂದು ಸಂದೇಹವು ಬಂದರೆ ವ್ಯಾಪ್ತನೆಂದು ಪೂರ್ವಪಕ್ಷವು. ಅದರಲ್ಲಿ ತತ್ರತತ್ರ ಪರಿಜ್ಞಾನಂ—ಜೀವನಿಗೆ ಆಯಾಯ ಅಂಗಗಳಲ್ಲಿ ಸ್ಪರ್ಶಾದಿಗಳ ಜ್ಞಾನವು ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || (೧) ನ ಚ ಸರ್ವದೇಹಸ್ಪರ್ಶಜ್ಞಾನಾದ್ರಸಾದೀನಾಂ ಚ ತತ್ರ ತತ್ರ ಪರಿಜ್ಞಾನಾಜ್ಜೀವಸ್ಯಾನಣುತ್ವಂ (೨) ಉತ್ಕ್ರಾಂತಿಗತ್ಯಾದೇಃ | ಆದಿಶಬ್ದೇನ ಸೂಕ್ಷ್ಮತೇಜೋರೂಪೇಣ ವ್ಯಾಪ್ತ್ಯಾ ಸ್ಪರ್ಶಾದಿಜ್ಞಾನೋಪಪತ್ತಿಃ | ಅತೋಽಣುತ್ವಮನಣುತ್ವಂ ಚೇತಿ ಭಾವಃ ||೧೨||

ಅ || (೧) ಜೀವರಿಗೆ ದೇಹದ ಎಲ್ಲಾ ಅವಯವಗಳಲ್ಲಿಯೂ ಸ್ಪರ್ಶಜ್ಞಾನವಿದ್ದುದರಿಂದಲೂ, ಆಯಾಯ ರಸನೇಂದ್ರಿಯ ಮೊದಲಾದ ಇಂದ್ರಿಯಾಧಿಷ್ಠಾನಗಳಲ್ಲಿ ಏಕ ಕಾಲದಲ್ಲಿ ರಸಾದಿಗಳ ಜ್ಞಾನವು ಬರುವುದರಿಂದಲೂ ಜೀವನಿಗೆ ಅಣುತ್ವವಿಲ್ಲ ('ಏವಂ ಚಾತ್ಮಾಕಾರ್ತ್ಸ್ನ್ಯಂ' ಎಂಬಲ್ಲಿ ದೇಹ ಪರಿಮಾಣವು ನಿರಸ್ತವಾಗಿರುವ ಕಾರಣ ಪರಿಶೇಷತಃ ವ್ಯಾಪ್ತನೆಂದೇ ಸಿದ್ಧವಾಗುತ್ತದೆ. ಎಂಬ ಪೂರ್ವಪಕ್ಷವು ಕೂಡುವುದಿಲ್ಲ. ಏಕೆಂದರೆ ಗತ್ಯಾದಿಃ (ಗಮನಾಗಮನಾದಿಗಳು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಜೀವರಿಗೆ ದೇಹದಿಂದ ಉತ್ಕ್ರಮಣ, ಲೋಕಾಂತರಗಮನ, ಲೋಕಾಂತರದಿಂದ ಆಗಮನ, ಇದು ಮೊದಲಾದವುಗಳು ಇರುವ ಪ್ರಯುಕ್ತ ಜೀವರು ಅಣುವೇ. (೨) ಗತ್ಯಾದಿ ಎಂಬ ಅನುವ್ಯಾಖ್ಯಾನದಲ್ಲಿದ್ದ ಆದಿಶಬ್ದದಿಂದ ಸೂಕ್ಷ್ಮತೇಜೋರೂಪವಾದ ಚಿದ್ಗುಣದಿಂದ ಜೀವರಿಗೆ ವ್ಯಾಪ್ತಿಯಿದ್ದುದರಿಂದ ದೇಹದ ಎಲ್ಲಾ ಅವಯವಗಳಲ್ಲಿ ಏಕಕಾಲದಲ್ಲಿಯೇ ಸ್ಪರ್ಶಾದಿಗಳ ಜ್ಞಾನವು ಯುಕ್ತವಾಗುತ್ತದೆ. ಅಂತೂ ಹಿಂದೆ ಹೇಳಿದ ಪ್ರಕಾರ ಸ್ವರೂಪತಃ ಅಣುತ್ವವೂ ಚಿದ್ಗುಣದಿಂದ ದೇಹದ ಎಲ್ಲಾ ಅವಯವಗಳಲ್ಲಿ ವ್ಯಾಪ್ತಿಯೂ ಕೂಡುವುದರಿಂದ ೨ ಶ್ರುತಿಗಳಿಗೂ ಅಪ್ರಾಮಾಣ್ಯವಿಲ್ಲ. ||೧೨||

೧೩ನೇ ವ್ಯತಿರೇಕಾಧಿಕರಣದಲ್ಲಿ 'ಸ ನಿತ್ಯೋ ನಿರವಯವಃ ಸ ಏಕಧಾ ನ ಸಪ್ತಧಾ' 'ಸ ಪಂಚಧಾ ಸಪ್ತಧಾ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಜೀವನು ಒಂದೇ ರೂಪವುಳ್ಳವನೋ ಅನೇಕರೂಪವುಳ್ಳವನೋ ಎಂದು ಸಂಶಯವು ಬಂದರೆ ಒಂದೇ ರೂಪವುಳ್ಳವನು ಎಂದು ಪೂರ್ವಪಕ್ಷವು. ಅದರಲ್ಲಿ ಗುಣಸಾಮ್ಯಂ=(ಜೀವರಿಗೆ ಅನೇಕ ರೂಪಗಳಿದ್ದರೆ ಶ್ರೀಹರಿಯ ಗುಣಗಳಿಂದ ಸಾಮ್ಯವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || (೧) ನ ಚ ಜೀವಸ್ಯ ಬಹುರೂಪತ್ವತತ್ತ್ವಾವಿಶೇಷೇಣ ಗುಣಸಾಮ್ಯಂ || (೨) ಈಶಶಕ್ತ್ಯೈವ ಬಹುರೂಪತ್ವಾದೇಃ ||೧೩||

ಅ ॥ (೧) ಜೀವರಿಗೆ ಅನೇಕರೂಪಗಳನ್ನು ತೆಗೆದುಕೊಳ್ಳುವ ಶಕ್ತಿಯಿದೆ, ಎಂದಂಗೀಕರಿಸಿದರೆ ಶ್ರೀ ಹರಿಯಿಂದ ಗುಣಸಾಮ್ಯವು ಬರಬೇಕಾಗುವುದು. (ಆದುದರಿಂದ ಒಂದೇ ರೂಪವುಳ್ಳವನೆಂದು ಹೇಳುವ ಸಯುಕ್ತಿಕವಾದ ಶ್ರುತಿಯಿಂದ ವಿರೋಧಬರುವುದು. ಅನೇಕರೂಪಗಳವೆ ಎಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯವು ಬರುವ ಕಾರಣ ಶ್ರುತಿ ಸಮನ್ವಯದಿಂದ ವಿಷ್ಣುವು ಜಗತ್ಕಾರಣನೆಂಬುದು ಕೂಡುವುದಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ) (೨) ಯೋಗಿಗಳಿಗೂ ಕೂಡ ಬಹುರೂಪತ್ವಾದಿಗಳು ಯೋಗಾರಾಧಿತನಾದ ಶ್ರೀ ಹರಿಯ ಪ್ರಸಾದರೂಪವಾದ ಶಕ್ತಿಯ ಅಧೀನಗಳಾಗಿವೆ. ಒಂದಂಶದಿಂದ ಅನ್ಯತ್ರ ಗಮನಾದಿಗಳೂ ಕೂಡುತ್ತವೆ. ಅಂತೂ ಶ್ರೀ ಹರಿಯ ಅನುಗ್ರಹರೂಪವಾದ ಶಕ್ತಿಯಿಂದಲೇ ಬಹುರೂಪಗಳನ್ನು ತೆಗೆದುಕೊಳ್ಳುವ ಶಕ್ತಿ ಬರುವಕಾರಣ ಗುಣಸಾಮ್ಯವಿಲ್ಲದಿರುವುದರಿಂದ ಜೀವನು ಸ್ವರೂಪತಃ ಏಕರೂಪನು, ಅಂಶತಃ ಅನೇಕ ರೂಪಗಳುಳ್ಳವನು, ಎಂದಂಗೀಕರಿಸಿದರೆ ಶ್ರುತಿಗಳಿಗೆ ವಿರೋಧ ವಿಲ್ಲದಿರುವುದರಿಂದ ವಿಷ್ಣುವು ಜಗತ್ಕಾರಣನೆನ್ನುವುದು ಯುಕ್ತವೇ. ॥೧೩॥

೧೪ನೇ ಪೃಥಗಧಿಕರಣದಲ್ಲಿ ತತ್ತ್ವಮಸಿ, ಅಹಂಬ್ರಹ್ಮಾಸ್ಮಿ, ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ, ದ್ವಾ ಸುಪರ್ಣಾ ಇದು ಮೊದಲಾದ ಶ್ರುತಿಗಳ ವಿಪ್ರತಿಪತ್ತಿಯಿಂದ (೧) ಜೀವನು ಬ್ರಹ್ಮನಿಂದ ಭಿನ್ನನೋ (೨) ಅಭಿನ್ನನೋ ಎಂದು ಸಂದೇಹವು ಬಂದರೆ ಅಭಿನ್ನನೇ ಎಂದು ಪೂರ್ವ ಪಕ್ಷವು. ಅದರಲ್ಲಿ ಶ್ರುತೇಃ = ತತ್ತ್ವಮಸಿ ಇತ್ಯಾದಿ ಶ್ರುತಿಯು ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ಶ್ರುತ್ಯಾ ಜೀವೇಶ್ವರೈಕ್ಯಂ । (೨) ಸರ್ವಮಾನವಿರೋಧಾತ್ (೩) ಶ್ರುತೇಃ ಸಾದೃಶ್ಯೈಕ್ಯಾದಿನಾ ಸಾವಕಾಶತ್ವಾತ್ (೪) ಬಹುಮಾನವಿರೋಧೇ ಏಕಸ್ಯ ದೌರ್ಬಲ್ಯಾಚ್ಚ । (೫) ಧರ್ಮಿಗ್ರಾಹಿವಿರೋಧಾಚ್ಚ ॥ ೧೪ ॥

ಅ ॥ (೧) ತತ್ತ್ವಮಸಿ, ಅಹಂಬ್ರಹ್ಮಾಸ್ಮಿ ಇದು ಮೊದಲಾದ ಶ್ರುತಿಗಳಿಂದ ಜೀವೇಶ್ವರರಿಗೆ ಐಕ್ಯವು ಸಿದ್ಧವಾಗುತ್ತದೆ ಎಂದರೆ ಹಾಗೆ ಹೇಳಕೂಡದು. (ಏಕೆಂದರೆ) ಸರ್ವಮಾನವಿರೋಧಾತ್ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (೨) ಐಕ್ಯವು ಅನುಭವ ಮೊದಲಾದ ಸಮಸ್ತ ಪ್ರಮಾಣಗಳಿಂದಲೂ ವಿರುದ್ಧವು. (೩) (ಶ್ರುತಿಗಳು ಅಪೌರುಷೇಯಗಳಾಗಿರುವುದರಿಂದ ಅಪ್ರಾಮಾಣ್ಯ ಶಂಕಾಕಲಂಕಿತವಾಗಲಾರವು. ಆದಕಾರಣ) ತತ್ತ್ವಮಸಿ ಇತ್ಯಾದಿ ಶ್ರುತಿಗಳು ಸಾದೃಶ್ಯ ರೂಪ ಐಕ್ಯದಿಂದಲೂ ಪರೇಽವ್ಯಯೇ ಸರ್ವ ಏಕೀ ಭವಂತಿ ಇತ್ಯಾದಿಗಳು ಸ್ಥಾನೈಕ್ಯ ಮತ್ಯೈಕ್ಯಗಳಿಂದಲೂ ಸಾವಕಾಶಗಳಾಗುತ್ತವೆ. (೪) ಭೇದವನ್ನೇ ಗ್ರಹಿಸುವ ಅನುಭವ ಮೊದಲಾದ ಅನೇಕ ಪ್ರಮಾಣಗಳಿಂದ ವಿರೋಧವಿರುವಾಗ ಅಭೇದ ಪ್ರತಿಪಾದಕವೆಂದು ತೋರುವ ಶ್ರುತಿ ರೂಪ ಒಂದು ಪ್ರಮಾಣವು ದುರ್ಬಲವೆಂದೇ ಅವಶ್ಯವಾಗಿ ಅನ್ನಬೇಕು. (೫) ಮತ್ತು ಜೀವ ಈಶ್ವರರೆಂಬ ಧರ್ಮಿಗಳನ್ನು ತಿಳಿಸಿಕೊಡುವ ಅನುಭವ ಆಗಮಗಳು ಜೀವೇಶ್ವರರು ಪರಸ್ಪರ ಭಿನ್ನರೆಂದೇ ತಿಳಿಸಿಕೊಡುತ್ತವೆ. ಅಂತೂ ಹೀಗೆ ಸಮಸ್ತಪ್ರಮಾಣಗಳಿಂದಲೂ ವಿರೋಧವಿದ್ದುದರಿಂದ ಅಯುಕ್ತ (ಜೀವನು ಈಶ್ವರನಿಂದ ಐಕ್ಯವನ್ನು ಸರ್ವಥಾ ಹೊಂದುವುದಿಲ್ಲ. ಮತ್ತೆ ಭಿನ್ನನಾಗಿಯೇ ಇರುತ್ತಾನೆ.) ॥ ೧೪ ॥

೧೫ನೇ ಯಾವದಧಿಕರಣದಲ್ಲಿ ಬ್ರಹ್ಮೈವ ಭಯಮಭ್ಯುಪೈತಿ, 'ಆನಂತ್ಯಾಯ ಕಲ್ಪತೇ' ಎಂಬ ಶ್ರುತಿಗಳ ವಿರೋಧದಿಂದ ಜೀವನು ನಿತ್ಯನೋ, ಅನಿತ್ಯನೋ, ಎಂದು ಸಂದೇಹವು ಬಂದರೆ ಅನಿತ್ಯನೆಂದು ಪೂರ್ವಪಕ್ಷವು. ಅದರಲ್ಲಿ ಉತ್ಪತ್ತಿಮತ್ತ್ವಂ = (ಜನನವಿಶಿಷ್ಟತೆಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚೋತ್ಪತ್ತಿಮತ್ತ್ವಾದ್ವಿನಾಶಿತ್ವಂ ಜೀವಸ್ಯ । (೨) ಅನಿತ್ಯತ್ವೇ ತದಭೀಷ್ಟಮೋಕ್ಷಾದ್ಯಸಿದ್ಧೇಃ । (೩) ನಹಿ ಪರಾಧೀನವಿಶೇಷವತ್ತ್ವಮಾತ್ರೇಣ ವಿನಾಶಿತ್ವಂ । ತಾದೃಶಾನಾಮೇವ ನಿತ್ಯತ್ವಶ್ರುತಿವಿರೋಧಾತ್ ॥ ೧೫ ॥

ಅ ॥ (೧) ಜ್ಯೋತಏವ ಎಂಬಲ್ಲಿ ಜೀವನಿಗೆ ಉತ್ಪತ್ತಿಯಿದೆ ಎಂದು ನಿರ್ಣಯಿಸಿರುವುದರಿಂದ ವಿನಾಶವಿದೆ.(ಏವಂಚ ಜೀವನಿಗೆ ಉತ್ಪತ್ತಿಯಿದ್ದಪ್ರಯುಕ್ತ ಅನಿತ್ಯತ್ವವು,ಎಂದು ಯುಕ್ತಿಸಹಿತವಾದ ಅನಿತ್ಯತ್ವವನ್ನು ಪ್ರತಿಪಾದಿಸುವ ಶ್ರುತಿವಿರೋಧದಿಂದ ಜೀವನಿಗೆ ನಿತ್ಯತ್ವಪ್ರತಿಪಾದಕಶ್ರುತಿಯು ಅಪ್ರಮಾಣವಾದ ಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಕೂಡುವುದಿಲ್ಲ, ಎಂಬ ಪೂರ್ವಪಕ್ಷವು) ಯುಕ್ತವಲ್ಲ. (ಏಕೆಂದರೆ ಅಭೀಷ್ಟಾಸಿದ್ಧಿಃ(ಇಷ್ಟವು ಸಿದ್ಧಿಯಾಗದಿರುವಿಕೆ)ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (೨) ಜೀವನು ಅನಿತ್ಯನೆಂದಾದರೆ ಜೀವನಿಗೆ ಇಷ್ಟವಾದ ಮೋಕ್ಷಾದಿಗಳು ಸಿದ್ಧಿಸದೆ ಹೋಗಬೇಕಾಗುವವು. ವಿನಾಶದಿಂದ ವ್ಯಾಪ್ತವಾದ ಸ್ವರೂಪೋತ್ಪತ್ತಿರೂಪವಾದ ಯಾವುದು ಉತ್ಪತ್ತಿಯೋ,ಅದನ್ನು ಜ್ಯೋತ ಏವ ಎನ್ನುವಲ್ಲಿ ಜೀವನಿಗೆ ಹೇಳಲಿಲ್ಲ.) ಯಾವುದು ಜ್ಯೋತಏವ ಎನ್ನುವಲ್ಲಿ ಪರಾಧೀನ ವಿಶೇಷಲಾಭ ರೂಪವಾದ ಉತ್ಪತ್ತಿಯು ಜೀವನಿಗೆ ಉಕ್ತವಾಗಿದೆಯೋ, ಅದು ವಿನಾಶದಿಂದ ವ್ಯಾಪ್ತವಲ್ಲ. (ಏಕೆಂದರೆ) (೩) ಪರಾಧೀನ ವಿಶೇಷ ಲಾಭರೂಪ ಉತ್ಪತ್ತಿಯುಳ್ಳವರಿಗೇನೇ ಅವಿನಷ್ಟಾ ಏವೋತ್ಪದ್ಯಂತೇ ನ ವಿನಶ್ಯಂತಿ ಕದಾಚನ, ಎಂಬ ಶ್ರುತಿಯಲ್ಲಿ ನಿತ್ಯತ್ವವನ್ನೇ ಹೇಳಿದೆ. ಹೀಗೆ ನಿತ್ಯತ್ವಪ್ರತಿಪಾದಕ ಶ್ರುತಿವಿರೋಧ ಬರುವುದರಿಂದ (ವಿನಾಶ ಹೇಳಕೂಡದು.) (ಆದಕಾರಣ ನಿತ್ಯತ್ವವನ್ನೇ ಹೇಳಬೇಕು. ಹೀಗೆ ನಿತ್ಯತ್ವಪ್ರತಿಪಾದಕ ಶ್ರುತಿಗೆ ಅಪ್ರಾಮಾಣ್ಯವಿರುವುದರಿಂದ ಶ್ರುತಿಸಮನ್ವಯದಿಂದ ಶ್ರೀವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು) ॥ ೧೫ ॥

೧೬ನೇ ಪುಂಸ್ತ್ವಾಧಿಕರಣದಲ್ಲಿ 'ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ' ಸ ಆನಂದಃ ಸಬಲಃ ಸ ಓಜಃ 'ಸ ದುಃಖಾದ್ವಿಮುಕ್ತಃ ಆನಂದೀ ಭವತಿ ಸೋಽಜ್ಞಾನಾದ್ವಿಮುಕ್ತೋ ಜ್ಞಾನೀಭವತಿ ಸೋಽಬಲಾದ್ವಿಮುಕ್ತೋ ಬಲೀಭವತಿ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಜೀವನು ಜ್ಞಾನಾದಿ ರೂಪನೋ ಅಲ್ಲವೋ ಎಂದು ಸಂದೇಹವು ಬಂದರೆ ಜ್ಞಾನಾದಿರೂಪನಲ್ಲವೆಂದು ಪೂರ್ವಪಕ್ಷವು. ಅದರಲ್ಲಿ ಸ್ವಗುಣಾನನುಭೂತಿಃ ಜ್ಞಾನ ಆನಂದ ಮೊದಲಾದ ತನ್ನ ಗುಣಗಳಿಗೆ ಅನುಭವವಿಲ್ಲದಿರುವಿಕೆ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ಸ್ವಗುಣಾನನುಭೂತ್ಯನುಪಪತ್ತೇಃ ಪೂರ್ವಜ್ಞಾನಾದೀನಾಂ ಸಾಮಸ್ತ್ಯೇನಾಭಾವಃ ॥ (೨) ಪೂರ್ವಮವ್ಯಕ್ತಾನಾಂ ಪಶ್ಚಾತ್ಸನ್ವ್ಯಕ್ತ್ಯುಪಪತ್ತೇಃ ॥ ೧೬ ॥

ಅ ॥ (೧) ಜೀವನಿಗೆ ಸ್ವರೂಪ ಭೂತಗಳಾದ ಜ್ಞಾನ ಆನಂದ ಮೊದಲಾದ ತನ್ನ ಗುಣಗಳ ಅನುಭವವಿಲ್ಲವೆನ್ನುವುದು ಕೂಡದಿರುವುದರಿಂದ ಜೀವನು ಜ್ಞಾನಾನಂದಾದಿ ಸ್ವರೂಪನಲ್ಲ. (ಹಾಗಾದರೆ ಮುಕ್ತಿಯಲ್ಲಿ ತನ್ನ ಗುಣಗಳ ಅನುಭವವಿಲ್ಲವೆನ್ನುವುದು ಸಿದ್ಧವಷ್ಟೆ. ಮುಕ್ತಿಗಿಂತ ಮೊದಲು ಅನುಭವವಿಲ್ಲವೆನ್ನುವುದು ಅಜ್ಞಾನಾದಿ ಪ್ರತಿಬಂಧವಿದ್ದುದರಿಂದ ಕೂಡುತ್ತದೆ. ಆದಕಾರಣ ಜ್ಞಾನಾದಿ ಸ್ವರೂಪತ್ವವಿಲ್ಲವೆನ್ನುವುದು ಬರಲಾರದು ಎಂತ ಇಲ್ಲಿ ಅವಾಂತರ ಪೂರ್ವಪಕ್ಷ ನಿವೃತ್ತಿಗಾಗಿಯೇ ಪೂರ್ವಜ್ಞಾನಾದೀನಾಂ ಎಂಬುವಲ್ಲಿ ಪೂರ್ವ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. (ಅಂದರೆ ಪ್ರತಿಬಂಧವಶಾತ್ ಪೂರ್ವದಲ್ಲಿ ಅಭಿವ್ಯಕ್ತಗಳಾಗಲಿಲ್ಲ. ಮುಕ್ತಿಯಲ್ಲಿ ಅಭಿವ್ಯಕ್ತಗಳಾಗುತ್ತವೆ, ಎಂತ ಹೇಳಲಿಕ್ಕೆ ಬರಲಾರದು. ಜೀವ

ಸ್ವರೂಪವು ಅಪ್ರತಿಬದ್ಧವಾಗಿರುವಾಗ ಸ್ವರೂಪಗುಣಗಳಿಗೆ ಯಾವುದರಿಂದ ಅನುಭವವಿಲ್ಲವೆಂದು ಹೇಳುತ್ತೀರೋ, ಅಂತಹ ಪ್ರತಿಬಂಧಕಕ್ಕೆ ಅನುಪಪತ್ತಿಯಿರುವುದರಿಂದ ಅವ್ಯಕ್ತವಾಗಿ ಆನಂದಾದಿರೂಪತ್ವವು ಇದೆ ಎಂತ ಹೇಳಲಿಕ್ಕೆ ಬಾರದಿರುವುದರಿಂದ ಸಂಪೂರ್ಣಜ್ಞಾನಾನಂದಾದಿರೂಪತ್ವಾಭಾವವನ್ನೇ ಹೇಳಬೇಕು) ಅನುಭವವಿಲ್ಲದಿರುವುದರಿಂದ,ಆದಕಾರಣ ಆನಂದಾದಿಸ್ವರೂಪತ್ವವನ್ನು ಪ್ರತಿಪಾದಿಸತಕ್ಕಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿಸಮನ್ವಯದಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. ಎಂಬ ಪೂರ್ವಪಕ್ಷವು ಯುಕ್ತವಲ್ಲ (ಏಕೆಂದರೆ–ಸುವ್ಯಕ್ತಿಃ=(ಚೆನ್ನಾಗಿ ಅಭಿವ್ಯಕ್ತಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಮುಕ್ತಿಗಿಂತ ಮೊದಲು ಸಂಸಾರಾವಸ್ಥೆಯಲ್ಲಿ ಜೀವನು ಅಜ್ಞಾನದಿಂದ ಆವೃತನಾಗಿರುವುದರಿಂದ ಅವ್ಯಕ್ತಗಳಾದ ಜ್ಞಾನ ಆನಂದ ಮೊದಲಾದ ತನ್ನ ಗುಣಗಳಿಗೆ ಮೋಕ್ಷವಾದ ಮೇಲೆ ಸಂಪೂರ್ಣ ಅಜ್ಞಾನನಿವೃತ್ತಿಯಾಗಿ ಚೆನ್ನಾಗಿ ಅಭಿವ್ಯಕ್ತಿಯು ಕೂಡುತ್ತದೆ. (ಅಂತೂ ಮುಕ್ತಿಯಾದ ಮೇಲೆಯೇ ಜೀವರ ಸ್ವರೂಪ ಭೂತಗಳಾದ ಜ್ಞಾನ ಆನಂದ ಮೊದಲಾದ ತನ್ನ ಗುಣಗಳು ಚೆನ್ನಾಗಿ ಅಭಿವ್ಯಕ್ತಗಳಾಗುತ್ತವೆ.ಅದಕ್ಕಿಂತ ಮೊದಲು ಆವೃತಗಳಾಗಿರುತ್ತವೆ. ಆದ ಪ್ರಯುಕ್ತ ಮಾಡಲುಅನುಭವವಿರುವುದಿಲ್ಲ. ಆದಕಾರಣ ಶ್ರುತಿ ಸಮನ್ವಯದಿಂದ ವಿಷ್ಣುವು ಜಗತ್ಕಾರಣನೆನ್ನುವುದುಕೂಡುತ್ತದೆ.) ॥ ೧೭ ॥

೧೭ನೇ ಕರ್ತೃತ್ವಾಧಿಕರಣದಲ್ಲಿ 'ನಾನ್ಯಃ ಕರ್ತಾ' 'ಯಚ್ಛ್ರಮಂ ಕುರುತೇ ತದಭಿಸಂಪದ್ಯತೇ' ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ಜೀವನು ಕರ್ತನೋ, ಅಲ್ಲವೋ? ಎಂದು ಸಂದೇಹವು ಬಂದರೆ ಕರ್ತನಲ್ಲವೆಂದು ಪೂರ್ವಪಕ್ಷವು. ಅದರಲ್ಲಿ ಅಲ್ಪಕಲ್ಪನಂ=(ಅಲ್ಪವಾದುದನ್ನು ಕಲ್ಪಿಸುವಿಕೆ,) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚೇಶ್ವರಸ್ಯೈವ ಕರ್ತೃತ್ವೇ ಕಲ್ಪನಾಲಾಘವಂ । (೨) ಜೀವಸ್ಯಾಕರ್ತೃತ್ವೇ ಶಾಸ್ತ್ರವೈಯರ್ಥ್ಯಾತ್ । ತಸ್ಯಾಪಿ ಕರ್ತೃತ್ವೇ ಶಾಸ್ತ್ರಾರ್ಥಸಿದ್ಧೇಶ್ಚ ॥ ೧೭ ॥

ಅ ॥ (೧) (ಇತರ ವ್ಯಪದೇಶಾತ್' ಇತ್ಯಾದಿಗಳಲ್ಲಿ ಶ್ರೀಹರಿಗೇನೇ ಇತರಾಪೇಕ್ಷೆಯಿಲ್ಲದೆ ಕರ್ತೃತ್ವವಿದೆ, ಎಂದು ಶ್ರುತ್ಯಾದಿಗಳಿಂದ ಸಮರ್ಥಿಸಿರುವುದರಿಂದ) ಶ್ರೀಹರಿ ಒಬ್ಬನಿಗೇನೇ ಕರ್ತೃತ್ವವನ್ನಂಗೀಕರಿಸಿದರೆ ಅಲ್ಪವಾದುದನ್ನು ಕಲ್ಪಿಸಿದಂತೆ ಆಗುತ್ತದೆ, (ಹೀಗೆ ಯುಕ್ತಿಸಹಿತವಾದ ಅಕರ್ತೃತ್ವಪ್ರತಿಪಾದಕ ಶ್ರುತಿ ವಿರೋಧದಿಂದ ಜೀವನಿಗೆ ಕರ್ತೃತ್ವಪ್ರತಿಪಾದಕಶ್ರುತಿಯು ಅಪ್ರಮಾಣವಾದಕಾರಣ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ, ಎಂಬ) ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ) (ಶಾಸ್ತ್ರಸಿದ್ಧಿಃ=(ಶಾಸ್ತ್ರಾರ್ಥ ಸಿದ್ಧಿಯು ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (೨) ಜೀವನಿಗೆ ಸರ್ವಥಾ ಕರ್ತೃತ್ವವಿಲ್ಲವಾದರೆ, ಪ್ರಾತಸ್ಸಂಧ್ಯಾಮುಪಾಸೀತ, ನ ಸುರಾಂ ಪಿಬೇತ್'' ಇದು ಮೊದಲಾದ ವಿಧಿ ನಿಷೇಧ ರೂಪವಾದ ಶಾಸ್ತ್ರವು ವ್ಯರ್ಥವಾಗಬೇಕಾಗುವುದು. ಜೀವರಿಗೂ ಕರ್ತೃತ್ವವಿದೆ, ಎಂದಂಗೀಕರಿಸಿದರೆ ವಿಧಿ ನಿಷೇಧ ರೂಪವಾದ ಶಾಸ್ತ್ರಕ್ಕೆ ಪ್ರಯೋಜನವು ಸಿದ್ಧಿಸುವುದು. ಚ=ಅನುಗ್ರಾಹಕ ತರ್ಕ ಸಹಿತವಾದುದೇ ಸಾಧಕವು. (ಅಂತೂ ಜೀವನಿಗೆ ಕರ್ತೃತ್ವವಿದ್ದರೆ ಶಾಸ್ತ್ರಗಳಿಗೆ ಸಾರ್ಥಕ್ಯವು ಸಿದ್ಧಿಸುವ ಪ್ರಯುಕ್ತ ಶ್ರುತಿಸಮನ್ವಯದಿಂದ ಜಗತ್ಕರ್ತೃತ್ವವು ಯುಕ್ತವು ॥ ೧೭ ॥

೧೮ನೇ ಅಂಶಾಧಿಕರಣದಲ್ಲಿ ಅಂಶಾ ಏವ ಹೀಮೇ ಜೀವಾಃ' 'ನೈವಾಂಶೋ ನ ಸಂಬಂಧಃ' ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ಜೀವನು ಈಶ್ವರನ ಅಂಶನೋ ಅಲ್ಲವೋ ಎಂದು ಸಂದೇಹವುಬಂದರೆ

ಜೀವನು ಶ್ರೀ ಹರಿಯ ಅಂಶನೆಂದೂ ಅನಂಶನೆಂದೂ ನಿರ್ಣಯವಾಗುವುದಿಲ್ಲ. ಎಂದು ಪೂರ್ವಪಕ್ಷವು., ಅದರಲ್ಲಿ ನಾನಾಶ್ರುತಿಃ (ಅನೇಕ ವಿಧ ಶ್ರವಣವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ನಾನಾಶ್ರುತೇರಪ್ರಾಮಾಣ್ಯಂ ॥ (೨) ದೃಷ್ಟಭೇದಾನುಸಾರೇಣ ತೇಷಾಮರ್ಥೋಪಪತ್ತೇಃ ॥ (೩) ಅಪ್ರಾಮಾಣ್ಯಕಲ್ಪನಸ್ಯ ವಿಪರೀತಜ್ಞಾನಮೂಲತ್ವಾತ್॥ ॥ ೧೮ ॥**

ಅ ॥ (೧) ಅನೇಕ ಪ್ರಕಾರ ಶ್ರುತವಾಗಿರುವುದರಿಂದ ಆ ಶ್ರುತಿಗಳೂ ಅಪ್ರಮಾಣಗಳು. ಅಥವಾ ನಿಯಮದಿಂದ ಅಂಶತ್ವ, ಅನಂಶತ್ವಗಳೆಂಬ ವಿರುದ್ಧಾರ್ಥಗಳನ್ನು ಪ್ರತಿಪಾದಿಸುವ ಶ್ರುತಿ ವಾಕ್ಯಗಳಿಗೆ ಪರಸ್ಪರ ವಿರುದ್ಧಾರ್ಥತ್ವರೂಪ ಅನೇಕತ್ವವಿದ್ದುದರಿಂದಲೇ ಪ್ರಾಮಾಣ್ಯವಿಲ್ಲ. (ಹೀಗೆ ಆ ಶ್ರುತಿಗಳೂ ಅಪ್ರಮಾಣಗಳಾದುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ, ಎಂಬ) ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ವಿಪರ್ಯಯಃ ವ್ಯತ್ಯಾಸವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಜೀವೇಶ್ವರರ ಭೇದವು ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಅದನ್ನನುಸರಿಸಿ ಅಂಶತ್ವಾದಿಗಳನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಅಂಶತ್ವ ರೂಪವಾದ ಅಭೇದವೆಂಬ ಅರ್ಥವು ಕೂಡುತ್ತದೆ. (ಈ ರೀತಿಯಾಗಿ ಏತಕ್ಕೆ ಕಲ್ಪಿಸಬೇಕೆಂದರೆ) ವೇದವು ಅಪೌರುಷೇಯವಾಗಿರುವುದರಿಂದ ವೇದಕ್ಕೆ ವಕ್ತೃವಿನ ವಿಪರೀತಜ್ಞಾನಮೂಲಕತ್ವವು ಸರ್ವಥಾ ಕೂಡಲಾರದು. ವಕ್ತೃವಿಪರೀತ ಜ್ಞಾನದಿಂದ (ಭ್ರಾಂತಿಯಿಂದ) ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಕಲ್ಪಿಸಬೇಕು. (ಆದಾದರೂ ಅಪೌರುಷೇಯವಾದ ವೇದದಲ್ಲಿ ಸರ್ವಥಾ ಕೂಡದಿರುವುದರಿಂದ ಜೀವನು ಶ್ರೀ ಹರಿಯ ಅಂಶನೆಂದು ಹೇಳುವ ಶ್ರುತಿಗೆ ಭಿನ್ನಾಂಶನೆಂದು ಕಲ್ಪಿಸಿಕೊಂಡು ಪ್ರಾಮಾಣ್ಯವನ್ನು ಹೇಳಬೇಕು. ಹೀಗೆ ಶ್ರುತಿಸಮನ್ವಯದಿಂದ ಶ್ರೀ ಹರಿಗೆ ಜಗತ್ಕರ್ತೃತ್ವವು ಯುಕ್ತವೇ) ॥ ೧೮ ॥

೧೯ನೇ ಅದೃಷ್ಟಾಧಿಕರಣದಲ್ಲಿ ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ಶ್ರುತಿ ವಿರೋಧಪರಿಹಾರಪ್ರಕರಣವಾದುದರಿಂದ ನ ಜೀವಃ ಪರಮಾತ್ಮಪ್ರತಿಬಿಂಬಃ = ಜೀವನು ಶ್ರೀ ಹರಿಯ ಪ್ರತಿಬಿಂಬನಲ್ಲ, ಎಂದನುಮಿತವಾದ ಶ್ರುತಿಯ ವಿಪ್ರತಿಪತ್ತಿಯಿಂದ ಜೀವನು ಶ್ರೀ ಹರಿಯ ಪ್ರತಿಬಿಂಬನೋ ಅಲ್ಲವೋ ಎಂದು ಸಂದೇಹವು ಬಂದರೆ ಶ್ರೀ ಹರಿಯ ಪ್ರತಿಬಿಂಬನಲ್ಲವೆಂದು ಪೂರ್ವಪಕ್ಷವು. ಆದರಲ್ಲಿ ವೈಚಿತ್ರ್ಯಂ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ವೈಚಿತ್ರ್ಯಮನಾಭಾಸತ್ವೇ ಕಾರಣಂ । (೨) ಜೀವಾನಾಂ ಸಾಮಾನ್ಯತ ಆಭಾಸತ್ವೇऽಪಿ ವಿಶೇಷಾದೃಷ್ಟಾದ್ವೈಚಿತ್ರ್ಯೋಪಪತ್ತೇಃ ॥ ೧೯ ॥**

ಅ ॥ (೧) ಜೀವರಿಗೆ ಸುರ ಅಸುರ ನರ ತಿರ್ಯಕ್ತ್ವಾದಿ ರೂಪವಾದ ಪ್ರಮಿತವಾದ ವೈಚಿತ್ರ್ಯವು ಜೀವರು ಶ್ರೀಹರಿಯ ಪ್ರತಿಬಿಂಬರಲ್ಲ ಎಂಬಲ್ಲಿ ಕಾರಣವು. (ಏವಂಚ ಜೀವರಿಗೆ ಪರಸ್ಪರ ವೈಚಿತ್ರ್ಯವು ಪ್ರಮಿತವಾಗಿರುವುದರಿಂದ ಅವಿಚಿತ್ರನಾದ ಶ್ರೀಭಗವಂತನ ಪ್ರತಿಬಿಂಬತ್ವವು ಕೂಡದಿರುವುದರಿಂದ, ಜೀವನು ಶ್ರೀ ಹರಿಯ ಪ್ರತಿಬಿಂಬನೆಂದು ಹೇಳುವ ಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ, ಎಂಬ) ಪೂರ್ವಪಕ್ಷವು ಯುಕ್ತವಲ್ಲ (ಏಕೆಂದರೆ) ವಿಶೇಷ ಕಾರಣಂ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಜೀವರು ಸಾಮಾನ್ಯವಾಗಿ ಅಂದರೆ ಜೀವತ್ವ ರೂಪದಿಂದ ಭಗವಂತನ ಪ್ರತಿಬಿಂಬರಾದಾಗ್ಯೂ ಅನಾದಿಯಾದ ಅವಿದ್ಯಾ ಕರ್ಮಾದಿ ರೂಪವಾದ ವಿಶೇಷಾ

ದೃಷ್ಟರೂಪವಾದ ಕಾರಣದಿಂದ ಜೀವರಿಗೆ ವೈಚಿತ್ರ್ಯವು ಕೂಡುವುದು. (ಏವಂಚ ವಿಶೇಷಕಾರಣದಿಂದ ಜೀವರಿಗೆ ವೈಚಿತ್ರ್ಯವು ಉಪಪನ್ನವಾಗುವುದರಿಂದ ಭಗವಂತನ ಪ್ರತಿಬಿಂಬತ್ವವು ಕೂಡುತ್ತದೆ. ಆದುದ ರಿಂದ ಶ್ರುತಿ ಸಮನ್ವಯದಿಂದ ಶ್ರೀ ಹರಿಗೆ ಜಗತ್ಕರ್ತೃತ್ವವು ಯುಕ್ತವು ॥ ೧೯ ॥

ಇತಿ ಶ್ರೀಮದಾನಂದತೀರ್ಥ ಭಗತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯವಿವರಣೇ
ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ।

ಶ್ರೀಮನ್ನ್ಯಾಯ ವಿವರಣದಲ್ಲಿ ೨ನೇ ಅಧ್ಯಾಯದಲ್ಲಿ ೩ನೇ ಪಾದವು ಸಮಾಪ್ತವಾಯಿತು

ಇಂದೀವರದಳಶ್ಯಾಮಮಿಂದಿರಾನಂದವರ್ಧನಂ ।
ವಂದೇ ನಂದಸುತಂ ಸಾಂದ್ರಾನಂದಸುಂದರವಿಗ್ರಹಂ ॥

॥ ಶ್ರೀಃ ॥

ಅಧ್ಯಾತ್ಮ ವಿಷಯಕಗಳಾದ ಶ್ರುತ್ಯಾದಿ ಪ್ರಸಿದ್ಧಗಳಾದ ಪ್ರಬಲಯುಕ್ತ್ಯುಪೇತಗಳಾದ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣಗಳ ಪೂರ್ವ ಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿದುದನ್ನು ಇಲ್ಲಿ ವಿವರಿಸುತ್ತಾರೆ. (೧) ತತ್ರಸ್ಪಷ್ಟಾರ್ಥವಚ್ಛ್ರುತಿಃ (೨-೩-೪-೫) ॥ ವಿಶೇಷಶ್ರುತಿವೈರೂಪ್ಯಂ, (೬-೭) ಮಾಹಾತ್ಮ್ಯಂ (೮) ವ್ಯಕ್ತಸದ್ಗುಣಃ । (೯-೧೦) ದೃಷ್ಟಾಯುಕ್ತಿಃ (೧೧) ಸಮಾನತ್ವಂ (೧೨) ಕರ್ತೃಶಕ್ತಿವಿಮಿಶ್ರಿತಾ (೧೩) । ಯುಕ್ತಯಃ ಪೂರ್ವಪಕ್ಷೇಷು ಸುನಿರ್ಣೀತಾಸ್ತು ತಾದೃಶಾಃ । ಯುಕ್ತಯೋ ನಿರ್ಣಯಸ್ತ್ವೈವ ಸ್ವಯಂ ಭಗವತೋದಿತಾಃ ॥ ಎಂದು.

೧ನೇ ಪ್ರಾಣಾಧಿಕರಣದಲ್ಲಿ 'ಪ್ರಾಣಾ ಏವೇದಮಗ್ರ ಆಸುಃ' 'ಅಥ ಪ್ರಾಣಾ ಏವಾನಾದಯಃ' 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಪ್ರಾಣಗಳು ಹುಟ್ಟುತ್ತವೋ ಇಲ್ಲವೋ, ಎಂದು ಸಂದೇಹವು ಬಂದರೆ ಪ್ರಾಣಗಳು ಹುಟ್ಟುವುದಿಲ್ಲ, ಎಂದು ಪೂರ್ವ ಪಕ್ಷವು. ಹುಟ್ಟುತ್ತವೆಂದು ಸಿದ್ಧಾಂತವು. ಅದರಲ್ಲಿ ಸ್ಪಷ್ಟಾರ್ಥವಚ್ಛ್ರುತಿ:= (ಸ್ಪಷ್ಟ ಅರ್ಥವುಳ್ಳ ಶ್ರುತಿಯು) ಎಂಬ ಪೂರ್ವ ಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಪೂ ॥ (೧) ನ ಚ ಪ್ರಾಣಾನಾಮುತ್ಪತ್ತ್ಯಂಗೀಕಾರೇ 'ಪ್ರಾಣಾ ಏವಾನಾದಯಃ ಇತ್ಯಾದಿ ಸ್ಪಷ್ಟಾರ್ಥವದ್ವಿಶೇಷಶ್ರುತಿವಿರೋಧಃ । (೨) ಆತ್ಮೈವೇದಮಗ್ರ ಆಸೀತ್ಸ ಪ್ರಾಣಮಸೃಜತ' ಸ ಪ್ರಾಣಾನ್ ಇತ್ಯಾದಿವಚನಾದನಾದಿತ್ವ ಏವ ಸ್ಪಷ್ಟಾರ್ಥವಿಶೇಷ ಶ್ರುತಿವಿರೋಧಾತ್। (೩) ಇದಂ ಸರ್ವಮಸೃಜತೇತಿಸಾಮಾನ್ಯವಚನಸ್ಯಾಧಿಕ್ಯಂ ಸಿದ್ಧಾಂತೇ। ವಿಶೇಷಮಾತ್ರಶ್ರುತೇಃ ಸಕಾಶಾತ್ ಉಭಯಶ್ರುತೇಃ ಪ್ರಾಬಲ್ಯಾತ್ ॥ ೧ ॥

ಅ ॥ (೧) ಪ್ರಾಣಗಳಿಗೆ ಉತ್ಪತ್ತಿಯಿದೆ ಎಂದಂಗೀಕರಿಸಿದರೆ ಪ್ರಾಣಾ ಏವಾನಾದಯಃ=(ಪ್ರಾಣಗಳೇ ಅನಾದಿಗಳು) ಇದು ಮೊದಲಾದ ಅನಾದಿತ್ವರೂಪ ಸ್ಪಷ್ಟಾರ್ಥವನ್ನು ಪ್ರತಿಪಾದಿಸುವ 'ಪ್ರಾಣಾ ಏವ' ಎಂದು ಪ್ರಾಣ ರೂಪ ಅರ್ಥ ವಿಶೇಷವನ್ನಧಿಕರಿಸಿ ಪ್ರವೃತ್ತವಾದ ಶ್ರುತಿಯಿಂದ ವಿರೋಧವು. (ಏವಂಚ ಸ್ಪಷ್ಟಾರ್ಥವುಳ್ಳ ಶ್ರುತಿಯಿಂದ ಪ್ರಾಣಗಳಿಗೆ ಅನಾದಿತ್ವವನ್ನು ಅಂಗೀಕರಿಸಿದಾಗ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ.) ಎಂಬ ಪೂರ್ವ ಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಸ್ಪಷ್ಟಾರ್ಥ ವಚ್ಛ್ರುತಿಃ ಎಂಬ ನ್ಯಾಯವನ್ನೇ ಸಿದ್ಧಾಂತ ಪರವಾಗಿಯೂ ವಿವರಿಸುತ್ತಾರೆ.) ಪ್ರಳಯಕಾಲದಲ್ಲಿ ಆತ್ಮನೊಬ್ಬನೇ ಇದ್ದನು, ಆ ಪರಮಾತ್ಮನು ಪ್ರಾಣನನ್ನು ಸೃಷ್ಟಿಸಿದನು, ಆ ಪರಮಾತ್ಮನು ಪ್ರಾಣಗಳನ್ನು ಸೃಷ್ಟಿಮಾಡಿದನು, ಇದು ಮೊದಲಾದ ಪ್ರಮಾಣಗಳಿಂದ (ಪ್ರಾಣಗಳಿಗೆ) ಅನಾದಿತ್ವವನ್ನಂಗೀಕರಿಸಿದರೇನೇ ಸ್ಪಷ್ಟಾರ್ಥವುಳ್ಳ ವಿಶೇಷ ಶ್ರುತಿಗಳಿಂದ ವಿರೋಧವು.(ಅಂದರೆ ಈ ಶ್ರುತಿಯಲ್ಲಿ ಆತ್ಮೈವ ಎಂದು ಅವಧಾರಣವಿದ್ದುದರಿಂದಲೂ ಇತರರಿಗೆ ಅನಾದಿತ್ವವನ್ನು ನಿಷೇಧಿಸಿದುದರಿಂದಲೂ 'ಅಸೃಜತ' ಎಂದು ಪ್ರಾಣನಿಗೆ ಸ್ಪಷ್ಟವಾಗಿ ಉತ್ಪತ್ತಿಯನ್ನು ಪ್ರತಿಪಾದಿಸಿದುದರಿಂದಲೂ, ಪ್ರಾಣಂ, ಪ್ರಾಣಾನ್ ಎಂಬ ಅರ್ಥ ವಿಶೇಷವನ್ನಧಿಕರಿಸಿಕೊಂಡು ಪ್ರವೃತ್ತವಾದುದರಿಂದಲೂಅದನ್ನುಸ್ಪಷ್ಟಾರ್ಥವುಳ್ಳ ವಿಶೇಷಶ್ರುತಿಯೆಂದು ತಿಳಿಯಬೇಕು)ಅನಾದಿತ್ವ ಏವ ಎಂಬಲ್ಲಿದ್ದ ಏವ ಕಾರದಿಂದ ಪ್ರಾಣಗಳಿಗೆ ಅನಾದಿತ್ವಪ್ರತಿಪಾದಕ ಶ್ರುತಿಯು ನಿರವಕಾಶವಾಗಿರುವುದರಿಂದ ಸಿದ್ಧಾಂತಕ್ಕೆ

ಅವಿರೋಧಿಯು: (೩)ಇದಂ ಸರ್ವಮಸೃಜತ ಎಂದು ಸಾಮಾನ್ಯ ಶ್ರುತಿಯಿದ್ದುದರಿಂದ ಅದಕ್ಕೆ ಸಿದ್ಧಾಂತ ದಲ್ಲಿ ಆಧಿಕ್ಯವು. (ಇದರಿಂದ ನಿರ್ಣಯವು ಹೇಗೆಂದರೆ) ವಿಶೇಷಮಾತ್ರ ಶ್ರುತಿಯು ಸಕಾಶದಿಂದ ಸೂಕ್ಷ್ಮ ರೂಪವಾದ ಅನಾದಿತ್ವವನ್ನು ಪ್ರತಿಪಾದಿಸುವುದರಿಂದ ಸಾವಕಾಶವಾದ ಎರಡು ಶ್ರುತಿಗಳಿಗೆ ಪ್ರಾಬಲ್ಯವಿದೆ. (ಏವಂಚ ಸಾಮಾನ್ಯ ಶ್ರುತಿಯಿಂದ ಸಹಿತವಾಗಿರುವುದರಿಂದ ಪ್ರಬಲವಾದ ಸ್ಪಷ್ಟಾರ್ಥವುಳ್ಳ ವಿಶೇಷ ಶ್ರುತಿ ಯಿಂದ ಪ್ರಾಣನು ಹುಟ್ಟುತ್ತಾನೆಂದು ಸಿದ್ಧಿಸುವುದರಿಂದ ಶ್ರೀಹರಿಗೆ ಶ್ರುತಿಸಮನ್ವಯದಿಂದ ಜಗತ್ಕರ್ತೃ ತ್ವವು ಯುಕ್ತವು.) ॥ ೧ ॥

೨ನೇ ತತ್ಪ್ರಾಗಧಿಕರಣದಲ್ಲಿ 'ಏತಸ್ಮಾಜ್ಜಾಯತೇ ಪ್ರಾಣೋ ಮನಃ'ಎಂದೂ, 'ದ್ವಿಧಾ ಹ್ಯೇವೇಂ ದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ ಚ । ತತ್ರ ನಿತ್ಯಂ ಮನೋಽನಾದಿತ್ವಾತ್' ಇಂದ್ರಿಯಗಳು ನಿತ್ಯ ಅನಿತ್ಯ ಎಂದು ೨ ವಿಧವು. ಅದರಲ್ಲಿ ಮನಸ್ಸು ಅನಾದಿಯಾದುದರಿಂದ ನಿತ್ಯವು ಎಂಬ ಶ್ರುತಿ ವಿರೋಧ ದಿಂದ ಮನಸ್ಸು ಹುಟ್ಟುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ ಹುಟ್ಟುವುದಿಲ್ಲ. ನಿತ್ಯವು, ಎಂದು ಪೂರ್ವಪಕ್ಷವು. ಅದರಲ್ಲಿ ವಿಶೇಷಶ್ರುತಿವೈರೂಪ್ಯಂ (ವಿಶೇಷ ಶ್ರುತಿ ವಿರೋಧವು) ಎಂಬ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ನಿತ್ಯಂ ಮನೋಽನಾದಿತ್ವಾದಿತಿ ವಿಶೇಷ ಶ್ರುತಿ ವಿರೋಧಃ ॥ (೨) ಏತಸ್ಮಾ ಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚೇತಿ ವಿಶೇಷ ಶ್ರುತೇಃ ॥ ೨ ॥

ಅ ॥ (೧) ಮನಸ್ಸಿಗೆ ಉತ್ಪತ್ತಿಯಿದೆ ಎಂದಂಗೀಕರಿಸಿದರೆ ನಿತ್ಯಂ ಮನೋಽನಾದಿತ್ವಾತ್ ಎಂಬ ವಿಶೇಷಶ್ರುತಿಯಿಂದ ವಿರೋಧವು. (ಅಂತೂ ವಿಶೇಷಶ್ರುತಿಯು ವಿರೋಧವಿದ್ದುದರಿಂದ ಮನಸ್ಸಿಗೆ ಅನಾದಿತ್ವವಿದ್ದ ಪ್ರಯುಕ್ತ ಶ್ರೀಹರಿಗೆ ಸರ್ವಕರ್ತೃತ್ವವು ಯುಕ್ತವಲ್ಲ.) ಎಂಬ ಪೂರ್ವಪಕ್ಷವು ಕೂಡುವುದಿಲ್ಲ. (ಏಕೆಂದರೆ) (ವಿಶೇಷ ಶ್ರುತಿ ವೈರೂಪ್ಯಂ ಎಂಬುವುದನ್ನೇ ಸಿದ್ಧಾಂತಸಂಬಂಧಿಯಾಗಿ ವಿವರಿಸುತ್ತಾರೆ) (ಮನಸ್ಸು ಅನಾದಿಯೆಂದು ಹೇಳಿದರೆ) ಈ ಪರಮಾತ್ಮನಿಂದಲೇ ಪ್ರಾಣ ಮನಸ್ಸು ಸಮಸ್ತ ಇಂದ್ರಿಯಗಳೂ ಹುಟ್ಟುತ್ತವೆ, ಎಂದು ಹೇಳುವ ವಿಶೇಷ ಶ್ರುತಿಯಿಂದ ವಿರೋಧವು ಬರುತ್ತದೆ. (ಅನಾದಿಯೆಂದು ಹೇಳುವ ಶ್ರುತಿಯು ಸೂಕ್ಷ್ಮರೂಪದಿಂದ ಅನಾದಿಯೆಂದು ಹೇಳುತ್ತದೆ. ಆದಕಾರಣ ಅದರಿಂದಲೂ ವಿರೋಧವಿಲ್ಲ. (ಅಂತೂ ಮನಸ್ಸಿಗೆ ಉತ್ಪತ್ತಿ ಪ್ರತಿಪಾದಕ ವಿಶೇಷಶ್ರುತಿಯಿಂದ ವಿರೋಧವಿದ್ದ ಪ್ರಯುಕ್ತ ಮನಸ್ಸು ಅನಾದಿಯೆಂದು ಹೇಳಲಾಗುವುದಿಲ್ಲ. ಆದಕಾರಣ ಶ್ರೀಹರಿಗೆ ಸರ್ವಕರ್ತೃತ್ವವು ಯುಕ್ತವು ) ॥ ೨ ॥

೩ನೇ ತತ್ಪೂರ್ವಕತ್ವಾಧಿಕರಣದಲ್ಲಿ 'ಮನಸ್ಸರ್ವೇಂದ್ರಿಯಾಣಿ ಚ' 'ನ ಹ್ಯೇಷೋತ್ಪದ್ಯತೇ'ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ವಾಗಿಂದ್ರಿಯವು ಹುಟ್ಟುತ್ತದೋ, ಇಲ್ಲವೋ ಎಂದು ಸಂದೇಹವು ಬಂದರೆ ಹುಟ್ಟುವುದಿಲ್ಲ ಎಂದು ಪೂರ್ವಪಕ್ಷವು. ಅದರಲ್ಲಿ ವಿಶೇಷ ಶ್ರುತಿ ವೈರೂಪ್ಯಂ ಎಂಬ ನ್ಯಾಯವನ್ನು ಪೂರ್ವ ಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ (೧) ನ ಚ ವಾಗ್ವಾವ ನಿತ್ಯೇತಿ ವಿಶೇಷ ಶ್ರುತಿವಿರೋಧಃ॥ (೨) ಮನಸೋ ವಾ ವ ವಾಗುದಪದ್ಯತ 'ವಾಚೋ ವ್ಯಾಹರಣಮಿತಿ ವಿಶೇಷಶ್ರುತೇಃ ॥ ೩ ॥

ಅ ॥ (ವಾಗಿಂದ್ರಿಯವು ಹುಟ್ಟುತ್ತದೆಂದು ಇಟ್ಟುಕೊಂಡರೆ ವಾಕ್ ನಿತ್ಯವು ಎಂದು ಹೇಳುವ ವಿಶೇಷ ಶ್ರುತಿಯಿಂದ ವಿರೋಧವು. (ಏವಂಚ ವಿಶೇಷಶ್ರುತಿಯಿಂದ ವಿರೋಧವಿದ್ದ ಪ್ರಯುಕ್ತ ವಾಗಿಂದ್ರಿಯಕ್ಕೆ

ಅನಾದಿತ್ವವನ್ನು ಅಂಗೀಕರಿಸುವಾಗ ಶ್ರೀ ಹರಿಗೆ ಸರ್ವಕರ್ತೃತ್ವವು ಕೂಡುವುದಿಲ್ಲ.) ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ವಿಶೇಷ ಶ್ರುತಿವೈರೂಪ್ಯಂ ಎನ್ನುವುದನ್ನೇ ಸಿದ್ಧಾಂತಪರವಾಗಿ ವಿವರಿಸುತ್ತಾರೆ.) ವಾಗಿಂದ್ರಿಯವು ಅನಾದಿಯು ಎಂದು ಇಟ್ಟುಕೊಂಡರೆ) ಮನೋರೂಪ ಇಂದ್ರಿಯದಿಂದ ವಾಗಿಂದ್ರಿಯವು ಹುಟ್ಟುತ್ತದೆ, ವಾಗಿಂದ್ರಿಯದಿಂದ ಮಾತನಾಡುವಿಕೆಯು. ಎಂಬ ವಿಶೇಷ ಶ್ರುತಿವಿರೋಧವು ಬರುತ್ತದೆ. (ವಾಗಿಂದ್ರಿಯವು ಮನಸ್ಸಿನಿಂದ ಹುಟ್ಟುತ್ತದೆ, ಎಂದು ಶ್ರುತಿಯಿದ್ದುದರಿಂದ ವಾಗಿಂದ್ರಿಯವು ಹುಟ್ಟುವುದಿಲ್ಲವೆಂದು ಹೇಳಕೂಡದು. ವಾಗಿಂದ್ರಿಯಸ್ಯ ನಿತ್ಯತ್ವಂ ಶ್ರುತಿಸನ್ನಿಧಿಯೋಗ್ಯತಾ । ಉತ್ಪತ್ತಿರ್ಮನಸೋ ಜುಸ್ಮಾನ್ನ ನಿತ್ಯತ್ವಂ ಕುತಶ್ಚನ ॥ ಎಂಬ ಪ್ರಮಾಣದಿಂದ ವಾಗಿಂದ್ರಿಯಕ್ಕೆ ನಿತ್ಯತ್ವ ಅನಿತ್ಯತ್ವಗಳನ್ನು ಹೇಳುವ ಶ್ರುತಿವಿರೋಧವನ್ನು ಪರಿಹರಿಸಿಕೊಳ್ಳಬೇಕು. ಏವಂ ಚ ಇಂತಹ ಪ್ರಮಾಣ ಸಹಿತವಾದ ಪ್ರಬಲ ವಿಶೇಷ ಶ್ರುತಿಯಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯು ಸಿದ್ಧಿಸುವ ಪ್ರಯುಕ್ತ ಶ್ರೀ ಹರಿಯೇ ಜಗತ್ಕರ್ತನೆನ್ನುವುದು ಯುಕ್ತವು.) ॥ ೩ ॥

೪ನೇ ಸಪ್ತಗತ್ಯಧಿಕರಣದಲ್ಲಿ 'ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್' 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ' ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ಪ್ರಾಣಗಳು ಏಳೋ,ಅಥವಾಹತ್ತೋ, ಎಂದು ಸಂದೇಹವು ಬಂದರೆ, ಪ್ರಾಣಗಳು ಏಳೇ. ಹತ್ತೇ ಎಂದು ಸಂಖ್ಯಾನಿರ್ಣಯವಾಗುವುದಿಲ್ಲ, ಎಂದು ಪೂರ್ವಪಕ್ಷವು. ಅದರಲ್ಲಿ ವಿಶೇಷಶ್ರುತಿವೈರೂಪ್ಯಂ ಎನ್ನುವುದನ್ನೇ ಪೂರ್ವಪಕ್ಷಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ ನ ಚ ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ .ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾದಿತಿ ಸಂಖ್ಯಾವಿಶೇಷ ಶ್ರುತ್ಯೋರೇವ ಪರಸ್ಪರಂ ವಿರೋಧಃ 'ಗುಹಾಶಯಾಂ ನಿಹಿತಾಃ ಸಪ್ತಸಪ್ತೇತಿ ಸಪ್ತಭಾವಸ್ಯ ಬುದ್ಧೀಂದ್ರಿಯವಿಷಯತ್ವೇನ ವಿಶೇಷಿತತ್ವಾತ್ಸಂಖ್ಯಾಶ್ರುತ್ಯೋರ್ವಿಷಯವೈಲಕ್ಷಣ್ಯಾತ್ ॥ ೪ ॥

ಅ ॥ (೧) ಪುರುಷನಲ್ಲಿ ಈ ಹತ್ತು ಪ್ರಾಣ (ಇಂದ್ರಿಯ)ಗಳು, ಆತ್ಮನು ೧೧ನೇಯವನು., 'ಆತ್ಮನಿಂದ೭ಪ್ರಾಣಗಳು ಹುಟ್ಟುತ್ತವೆ,ಎಂದು ಪ್ರಾಣಗಳಲ್ಲಿ ಹತ್ತು,ಏಳು ಎಂದು ಸಂಖ್ಯೆಯನ್ನು ಹೇಳುವ ವಿಶೇಷ ಶ್ರುತಿಗಳಿಗೇನೇ ಪರಸ್ಪರ ವಿರೋಧವು.(ಹೀಗೆ ಪರಸ್ಪರ ವಿರೋಧವಿದ್ದುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವು ಬರುವುದರಿಂದ ಶ್ರುತಿಯಿಂದ ಶ್ರೀ ಹರಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ ) ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ವಿಶೇಷ ಶ್ರುತಿ ವೈರೂಪ್ಯಂ ಎಂಬ ನ್ಯಾಯವನ್ನೇ ಸಿದ್ಧಾಂತಪರವಾಗಿ ವಿವರಿಸುತ್ತಾರೆ) (ಸಂಖ್ಯಾಶ್ರುತಿಗಳಿಗೆ ಪರಸ್ಪರ ವಿರೋಧದಿಂದ ಅಪ್ರಾಮಾಣ್ಯವಿಲ್ಲ. ಹತ್ತು ಎಂದು ಹೇಳುವ ಶ್ರುತಿಯು ೫ಕರ್ಮೇಂದ್ರಿಯ, ೫ಜ್ಞಾನೇಂದ್ರಿಯ ಎಂಬ ಅರ್ಥವನ್ನು ಹೇಳುವುದು. ಏಳು ಎಂದು ಹೇಳುವ ಶ್ರುತಿಯು ಮನಸ್ಸು. ಬುದ್ಧಿ ಶ್ರೋತ್ರಾದಿಗಳು ಐದು, ಹೀಗೆ ೭ ಜ್ಞಾನೇಂದ್ರಿಯಗಳನ್ನು ಹೇಳುವುದು. ಹೀಗೆ ವಿಷಯಗಳು ಬೇರೆಬೇರೆಯಾಗಿವೆ. ಸಪ್ತ ಪ್ರಾಣಾಃ ಎಂದು ಹೇಳಲ್ಪಟ್ಟವುಗಳನ್ನು ಜ್ಞಾನೇಂದ್ರಿಯಗಳೆಂದು ಏಕೆ ಇಟ್ಟುಕೊಳ್ಳಬೇಕೆಂದರೆ) ಗುಹಾಶಯಾಂ=ಗುಹಾಹೃದಯವು; ಆಶಯಃ= ಸ್ಥಾನವು ಯಾವ ಬುದ್ಧಿಗೋ, ಅಂತಹ ಬುದ್ಧಿಯನ್ನುದ್ದೇಶಿಸಿ ಶ್ರೋತ್ರ ಚಕ್ಷುಸ್ಸು ಸ್ಪರ್ಶನ ರಸನ ಘ್ರಾಣ ಮನಸ್ಸು ಬುದ್ಧಿರೂಪಗಳಾದವು, ಪ್ರತಿ ಶರೀರದಲ್ಲಿಯೂ ಏಳುಏಳು ನಿಹಿತಗಳಾಗಿವೆ, ಎಂದು ಶ್ರುತಿಯಲ್ಲಿ ಸಪ್ತತ್ವಸಂಖ್ಯೆಯು ಜ್ಞಾನಸಾಧನವಾದ ಇಂದ್ರಿಯದಲ್ಲಿರತಕ್ಕುದೆಂದು ವಿಶೇಷಣ ಕೊಟ್ಟಿರುವುದರಿಂದ ಸಂಖ್ಯಾವಿಶೇಷಶ್ರುತಿಗಳು ವಿಲಕ್ಷಣ ವಿಷಯಗಳಿಂದ ಕೂಡಿರುವ ಪ್ರಯುಕ್ತ (ಶ್ರುತಿಗಳಿಗೆ ಪರಸ್ಪರವಿರೋಧವಿಲ್ಲ. ಆದುದರಿಂದ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವ ಪ್ರಯುಕ್ತ ಶ್ರೀ ಹರಿಗೆ ಸರ್ವಕರ್ತೃತ್ವವು ಯುಕ್ತವು.) ॥ ೪ ॥

೫ನೇ ಅಣ್ವಧಿಕರಣದಲ್ಲಿ 'ದಿವೀವ ಚಕ್ಷುರಾತತಂ' 'ಅಣುಭಿಃ ಪಶ್ಯತಿ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ಪ್ರಾಣಗಳು ವ್ಯಾಪ್ತಗಳೋ,ಅಣುಗಳೋ.ಎಂದು ಸಂದೇಹವು ಬಂದರೆ ವ್ಯಾಪ್ತಗಳೆಂದು ಪೂರ್ವಪಕ್ಷವು. ಅಣುಗಳೇ ಎಂದು ಸಿದ್ಧಾಂತವು. ಅದರಲ್ಲಿಯೂ ವಿಶೇಷ ಶ್ರುತಿವೈರೂಪ್ಯಂ ಎಂಬ ನ್ಯಾಯವನ್ನು ಪೂರ್ವಪಕ್ಷ ಸಿದ್ಧಾಂತಪರವಾಗಿ ವಿವರಿಸುತ್ತಾರೆ.

ಮೂ || (೧)ನ ಚ ದಿವೀವ ಚಕ್ಷುರಾತತಮಿತಿ ವ್ಯಾಪ್ತ್ಯುಕ್ತ್ಯ ವಿಶೇಷವಾಚಕ ಶ್ರುತಿವಿರೋಧಃ। (೨) ಅಣೂನಿ ವಾ ಇಂದ್ರಿಯಾಣಿ ತೇಷಾಂ ಪ್ರಕಾಶೋ ವ್ಯಾತತಃ ಇತಿ ತತೋಽಪ್ಯಣುತ್ವವಾಚಕ ವಿಶೇಷ ಶ್ರುತಿವಿರೋಧಾತ್ || ೫ ||

ಅ || (೧) (ಪ್ರಾಣಗಳು ಅಣು ಎಂದು ಹೇಳಿದರೆ)ಚಕ್ಷುರಿಂದ್ರಿಯವು ವ್ಯಾಪ್ತವಾಗಿದೆ, ಎಂದು ವ್ಯಾಪ್ತಿರೂಪ ವಿಶೇಷವನ್ನು ಹೇಳತಕ್ಕ ಶ್ರುತಿಯಿಂದ ವಿರೋಧವು. (ಅಣುವೆಂಬ ವಿಷಯದಲ್ಲಿಯೂ ಶ್ರುತಿಯಿದ್ದ ಪ್ರಯುಕ್ತ ನಿರ್ಣಯವು ಹೇಗೆಂದರೆ ಶ್ರೀ ವಿಷ್ಣುವು ವ್ಯಾಪ್ತನು ಎನ್ನುವಲ್ಲಿ ದೃಷ್ಟಾಂತವಾಗಿ ಚಕ್ಷುಸ್ಸುವ್ಯಾಪ್ತವಾಗಿದೆ ಎಂದು ಹೇಳಿದುದರಿಂದ ಈ ಶ್ರುತಿಯು ಪ್ರಬಲವಾಯ್ತು. ಅತಿ ಸುದೃಢವಾದುದನ್ನೇ ದೃಷ್ಟಾಂತೀಕರಿಸುವುದು) (ಏವಂಚ ವಿಶೇಷಶ್ರುತಿವಿರೋಧದಿಂದ ಅಣುತ್ವವು ಇಲ್ಲದಿರುವುದರಿಂದ ಅಣುತ್ವ ಶ್ರುತಿಗೆ ಪ್ರಾಮಾಣ್ಯವಿಲ್ಲದಿರುವ ಪ್ರಯುಕ್ತ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ.) ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ) (ಸ್ವರೂಪತಃ ಚಕ್ಷುರಿಂದ್ರಿಯಗಳು ವ್ಯಾಪ್ತಗಳು ಎನ್ನುವುದಕ್ಕೆ) ಇಂದ್ರಿಯಗಳು ಅಣುಗಳೇ, ಅವುಗಳ ಪ್ರಕಾಶವು ಮಾತ್ರ ವ್ಯಾಪ್ತವಾಗಿದೆ ಎಂದು (ದಿವೀವ ಎಂಬ ಶ್ರುತಿಪ್ರಸಿದ್ಧವಾದ ವ್ಯಾಪ್ತತ್ವವನ್ನಂಗೀಕರಿಸಿಕೊಂಡು ಅಣುತ್ವವನ್ನು ಹೇಳಿದುದರಿಂದ) ದಿವೀವ ಎಂಬ ಶ್ರುತಿಗಿಂತಲೂ ಅಣುತ್ವವನ್ನು ಹೇಳುವ ವಿಶೇಷಶ್ರುತಿಯಿಂದ ವಿರೋಧವು ಬರುವುದು. (ಅಂತೂ ವಿಶೇಷಶ್ರುತಿವಿರೋಧವಿದ್ದ ಪ್ರಯುಕ್ತ ಇಂದ್ರಿಯಗಳು ಅಣುಗಳೇ ಎಂದು ಸಿದ್ಧವಾಗುವ ಪ್ರಯುಕ್ತ ಶ್ರುತಿಸಮನ್ವಯದಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ) || ೫ ||

೬ನೇ ಶ್ರೇಷ್ಠಾಧಿಕರಣದಲ್ಲಿ 'ನೈಷ ಪ್ರಾಣ ಉದೇತಿ' ಅತ್ರತ ಏಷ ಪ್ರಾಣೋ ಜಾಯತೇ ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯಿದೆಯೋ, ಇಲ್ಲವೋ, ಎಂದು ಸಂದೇಹವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಅದರಲ್ಲಿ ಮಾಹಾತ್ಮ್ಯಂ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ || (೧) ನ ಚ 'ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ । ತಸ್ಯೋತ್ಪತ್ತಿರ್ನ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ' ಇತ್ಯಾದಿ ಮಾಹಾತ್ಮ್ಯವಚನಾನ್ಮುಖ್ಯಪ್ರಾಣಸ್ಯ ನೋತ್ಪತ್ತಿರಿತಿ ವಾಚ್ಯಂ। (೨) ಮಹತ್ತ್ವನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ । ಕಿಂನಾಮ ನ ಸೃಜೇದೇಷ ಯೇನ ಶಕ್ತ್ಯೇದಮಾವೃತಮಿತಿ ಶ್ರುತೇಸ್ತತೋಽಪಿ ಮಾಹಾತ್ಮ್ಯದ್ವಿಷ್ಣೋಃ || ೬ ||

ಅ || (೧) ಶರೀರದಲ್ಲಿ ಯಾವ ವಾಯುದೇವರ ಪ್ರಾಪ್ತಿಯೇ ಉತ್ಪತ್ತಿಯೋ, ಪರಿತ್ಯಾಗವೇ ಮರಣವೋ, ಅಂತಹ ಮುಖ್ಯಪ್ರಾಣನಿಗೆ ಉತ್ಪತ್ತಿಯೂ ಮರಣವೂ ಹೇಗೆ ಕೂಡುತ್ತದೆ? ಇದು ಮೊದಲಾದ

ಮಹಿಮೆಯನ್ನು ಪ್ರತಿಪಾದಿಸುವ ವಚನವಿದ್ದುದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ. (ಏವಂಚ ಸಮಸ್ತ ಜಗಜ್ಜನ್ಮಾದಿ ಕಾರಣತ್ವ ರೂಪವಾದ ಮಾಹಾತ್ಮ್ಯರೂಪ ಯುಕ್ತಿಯಿಂದ ಕೂಡಿರುವ ಅನಾದಿತ್ವ ಶ್ರುತಿ ವಿರೋಧದಿಂದ ಮುಖ್ಯ ಪ್ರಾಣನಿಗೆ ಉತ್ಪತ್ತಿ ಪ್ರತಿಪಾದಕವಾದ ಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿಸಮನ್ವಯದಿಂದ ಶ್ರೀ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ) ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ಮಾಹಾತ್ಮ್ಯಂ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ. ಶ್ರೀಕೃಷ್ಣರಾದವರಿಗೂ ಶ್ರೈಷ್ಠ್ಯವನ್ನು ಕೊಡುವವನಾದುದರಿಂದ ಶ್ರೀವಿಷ್ಣುವೇ ಮುಖ್ಯಪ್ರಾಣನಿಗೂ ಸೃಷ್ಟಿಕರ್ತನು. ಆತನೇ ಸರ್ವಸ್ವತಂತ್ರನು. ಯಾವ ಶ್ರೀಹರಿಯಿಂದ ಈ ಇಡೀ ಜಗತ್ತೂ ವಶೀಕೃತವೇ ಆಗಿದೆಯೋ, ಇಂತಹ ವಿಷ್ಣುವು ಯಾವುದನ್ನು ಸೃಷ್ಟಿಸಲಾರನು? ಸರ್ವವನ್ನೂ ಸೃಷ್ಟಿ ಮಾಡಿಯೇ ಮಾಡುತ್ತಾನೆ, ಎಂಬ ಶ್ರುತಿಯಿಂದ ಪ್ರಾಣನಕ್ಕಿಂತಲೂ ಶ್ರೀ ವಿಷ್ಣುವಿಗೆ ಹೆಚ್ಚು ಮಹಾತ್ಮ್ಯೆಯುಕ್ತವಾಯಿತು. (ಅಂತೂ ಮುಖ್ಯಪ್ರಾಣೋತ್ಪಾದಕತ್ವರೂಪ ಮಹಾಮಹಿಮೆಯುಳ್ಳ ಶ್ರೀ ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟಿದ್ದಾನೆನ್ನುವುದು ಕೂಡುವ ಪ್ರಯುಕ್ತ ಶ್ರುತಿಸಮನ್ವಯದಿಂದ ಶ್ರೀವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವು) ॥ ೬ ॥

೭ನೇ ಚಕ್ಷುರಾದ್ಯಧಿಕರಣದಲ್ಲಿ 'ನ ಪ್ರಾಣಃ ಕಿಂಚಿದಾಶ್ರಿತಃ' ಪ್ರಾಣನು ಯಾವುದನ್ನೂ ಆಶ್ರಯಿಸಿಕೊಂಡಿಲ್ಲ, 'ಪ್ರಾಣಸ್ಯೈತದ್ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ' ಇಡೀ ಜಗತ್ತು ಮುಖ್ಯಪ್ರಾಣನ ಅಧೀನವು. ಮುಖ್ಯ ಪ್ರಾಣನು ಪರಮಾತ್ಮನ ಅಧೀನದಲ್ಲಿರುವವನು, ಎನ್ನುವ ವಿಪ್ರತಿಪತ್ತಿಯಿಂದ ಮುಖ್ಯಪ್ರಾಣನು ಸ್ವತಂತ್ರನೋ, ಪರತಂತ್ರನೋ, ಎಂದು ಸಂದೇಹವು ಬಂದರೆ ಸ್ವತಂತ್ರನೇ ಎಂದು ಪೂರ್ವಪಕ್ಷವು. ಆದರಲ್ಲಿ ಮಾಹಾತ್ಮ್ಯಂ ಎಂಬ ನ್ಯಾಯವನ್ನೇ ಪೂರ್ವಪಕ್ಷ ಸಿದ್ಧಾಂತ ಸಂಬಂಧಿಯಾಗಿ ಇಟ್ಟುಕೊಳ್ಳಬೇಕು. 'ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್ । ಯಥಾ ಪ್ರಾಣಸ್ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್ । ಯಾವ ಮುಖ್ಯ ಪ್ರಾಣನ ಆಶ್ರಯದಿಂದ ಜಗತ್ತಿಗೆ ಚೇಷ್ಟೆಯಾಗುತ್ತದೋ ಆತನು ಇನ್ನೊಬ್ಬನನ್ನು ಹೇಗೆ ಆಶ್ರಯಿಸಿಯಾನು? ಮುಖ್ಯಪ್ರಾಣನಂತೆ ರಾಜನು ಸಮಸ್ತರಿಗೂ ಮುಖ್ಯಾಶ್ರಯನಾಗುವನು, ಎಂದು ಭಾರತದಲ್ಲಿ ಹೇಳಿದ ಸರ್ವಚೇಷ್ಟಕತ್ವರೂಪವಾದ ಯುಕ್ತಿಯಿಂದೊಡಗೂಡಿದ 'ಪ್ರಾಣಾದಿದಮಾವಿರಾಸೀತ್ ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯೈತಿ ನ ಪ್ರಾಣಃ ಕಿಂಚಿದಾಶ್ರಿತಃ = ಮುಖ್ಯಪ್ರಾಣನಿಂದ ಜಗತ್ತು ಹುಟ್ಟಿತು, ಪ್ರಾಣನು ಧರಿಸುತ್ತಾನೆ, ಆತನಲ್ಲಿ ಲಯವನ್ನು ಹೊಂದುತ್ತದೆ, ಪ್ರಾಣನು ಯಾರನ್ನೂ ಆಶ್ರಯಿಸಿಕೊಂಡಿಲ್ಲ, ಎಂಬ ಅಗ್ನಿವೇಶ್ಯಶ್ರುತಿಯು ಪ್ರಬಲವಾದ ಪ್ರಯುಕ್ತ ಪ್ರಾಣನಿಗೆ ಸ್ವಾತಂತ್ರ್ಯಾಖ್ಯ ಮಾಹಾತ್ಮ್ಯೆಯು ಇದೆ ಎಂದು ಪೂರ್ವಪಕ್ಷವು ಯುಕ್ತವಲ್ಲ, ಏಕೆಂದರೆ ಸರ್ವಂ ಹ್ಯೇವೈತತ್ಪರಮೇಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ ಸ ಏಕ ಏವೈತಾನ್ನಯತ್ಯನ್ನಯತಿ ವಶೀಕರೋತಿ ಎಂಬ ಗೌಪವನಶ್ರುತಿಯಲ್ಲಿ ಚಕ್ಷುರಾದೀಂದ್ರಿಯಗಳಿಂದೊಡಗೂಡಿ ಪ್ರಾಣನೂ ಶ್ರೀಪರಮಾತ್ಮನ ಅಧೀನದಲ್ಲಿಯೇ ಇರುವವನೆಂದು ಶ್ರುತವಾಗಿದೆ. ಸರ್ವಕರ್ತಾಽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ । ಕಥಮೇವಾನ್ಯಥಾ ಸ ಸ್ಯಾದ್ಯತೋ ನೈವೇಶ್ವರದ್ವಯಂ" ಮುಖ್ಯಪ್ರಾಣನು ಸರ್ವಕರ್ತನಾದಾಗ್ಯೂ ಶ್ರೀಹರಿಯನ್ನು ಆಶ್ರಯಿಸಿಕೊಂಡೇ ಇರುತ್ತಾನೆ. ಏಕೆಂದರೆ ಇಬ್ಬರು ನಿಯಾಮಕರೆಂಬುವುದು ಸರ್ವಥಾ ಕೂಡಲಾರದಷ್ಟೆ ಎಂಬ ವಾಕ್ಯೋಕ್ತ ಯುಕ್ತಿಯಿಂದ ಇಬ್ಬರು ಸ್ವತಂತ್ರರು ಎಂಬುವುದು ಸರ್ವಥಾ ಕೂಡದಿರುವುದರಿಂದ ಮುಖ್ಯಪ್ರಾಣನಿಗೆ ಅವಾಂತರ ಸ್ವಾತಂತ್ರ್ಯವು. ಮಹಾಸ್ವಾತಂತ್ರ್ಯಾಖ್ಯ ಮಾಹಾತ್ಮ್ಯವು ವಿಷ್ಣುವಿಗೇನೇ. ಅಂತೂ ಮುಖ್ಯಪ್ರಾಣನು ಪರತಂತ್ರನೇ. ಸರ್ವಸ್ವತಂತ್ರನಾದ ಶ್ರೀವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ .॥ ೭ ॥

೮ನೇ ಪಂಚವೃತ್ತ್ಯಧಿಕರಣದಲ್ಲಿ 'ಸರ್ವೇ ವಾ ಏತೇ ಮುಖ್ಯದಾಸಾಃ । ಮುಖ್ಯಸ್ಯೈವ ಸ್ವರೂಪಾಣಿ' ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರೋ, ಸ್ವರೂಪರೋ ಎಂದು ಸಂದೇಹವು ಬಂದರೆ, ಭೃತ್ಯರೇ, ಅಥವಾ ಸ್ವರೂಪರೇ, ಎಂದು ಪೂರ್ವಪಕ್ಷವು. ಅದರಲ್ಲಿ ವ್ಯಕ್ತಸದ್ಗುಣಃ=(ಅಭಿವ್ಯಕ್ತ ಸದ್ಗುಣಗಳುಳ್ಳವನು) ಎಂಬ ನ್ಯಾಯವನ್ನು ಪೂರ್ವಪಕ್ಷಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ (೧) ನ ಚ ಪ್ರಾಣಾದಿಪಂಚಕಸ್ಯ ವ್ಯಕ್ತಸದ್ಗುಣತ್ವಾನ್ಮುಖ್ಯಪ್ರಾಣವೃತ್ತಿತ್ವಮೇವ ॥
(೨) ಅಶೇಷ ಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ । ತದ್ದಾಸಾಃ ಪಂಚ ಚಾನ್ಯೇಽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ । ಇತಿಶ್ರುತೇರ್ಮುಖ್ಯ ಪ್ರಾಣಸ್ಯ ತತೋಽಪಿ ವ್ಯಕ್ತಸದ್ಗುಣತ್ವಾತ್ ॥ ೮ ॥

ಅ ॥ (೧) ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ಐವರಿಗೂ (ಸರ್ವರ ಶರೀರಗಳಲ್ಲಿ ಎಪ್ಪತ್ತ ಎರಡು ಸಹಸ್ರ ೭೨೦೦೦ ನಾಡಿಗಳಲ್ಲಿ ಊರ್ಧ್ವ ಅಧಃ ಮಧ್ಯ ಸ್ಥಾನಗಳಲ್ಲಿ) ಸಂಚರಣ ರೂಪ ವ್ಯಕ್ತಸದ್ಗುಣಗಳಿದ್ದುದರಿಂದ ಮುಖ್ಯಪ್ರಾಣಸ್ವರೂಪತ್ವವೇ. (ದಾಸತ್ವವಲ್ಲ) ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ ಎಂಬ ಶ್ರುತಿಯಿಂದ ದಾಸರಿಗೂ ವ್ಯಕ್ತಸದ್ಗುಣಗಳಿದ್ದರೆ ಮುಖ್ಯಪ್ರಾಣನ ಸಾಮ್ಯವು ಬರುವುದರಿಂದ ದಾಸತ್ವವೇ ಕೂಡದೆ ಹೋಗುವುದು. 'ಪ್ರಾಣಾಪಾನಾದಯಸ್ಸರ್ವೇ ಮುಖ್ಯದಾಸಾ ಯತೋಽನಿಶಂ । ಅತಸ್ತದಾಜ್ಞಯಾ ನಿತ್ಯಂ ಸ್ವಾನಿ ಕರ್ಮಾಣಿ ಕುರ್ವತೇ' ಎಂಬ ಸ್ಮೃತ್ಯುಕ್ತವಾದ ಯುಕ್ತಿಯಿಂದ ಕೂಡಿದ ಸ್ವಾಮಿಭೃತ್ಯಭಾವವನ್ನು ಬಿಡಲು ಸಾಧ್ಯವೇ ಇಲ್ಲ. ಆದಕಾರಣ ವ್ಯಕ್ತಸದ್ಗುಣಗಳಿಂದ ಪ್ರಾಣಾದಿಗಳಿಗೆ ಮುಖ್ಯಪ್ರಾಣಸ್ವರೂಪತ್ವವನ್ನಂಗೀಕರಿಸುವಾಗ ದಾಸತ್ವ ಪ್ರತಿಪಾದಕ ಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿ ಸಮನ್ವಯದಿಂದ ಜಗತ್ಕಾರಣತ್ವವು ಯುಕ್ತವಲ್ಲ) ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ವ್ಯಕ್ತಸದ್ಗುಣಃ ಎಂಬ ನ್ಯಾಯವನ್ನೇ ಸಿದ್ಧಾಂತ ಸಂಬಂಧಿಯಾಗಿಯೂ ವಿವರಿಸುತ್ತಾರೆ) ಮುಖ್ಯಪ್ರಾಣನ ಐದು ರೂಪಗಳೂ ಸರ್ವಗುಣ ಪರಿಪೂರ್ಣಗಳು. (ಅಂದರೆ ದಾಸರಿಗಿಂತ ಮುಖ್ಯಪ್ರಾಣ ಸ್ವರೂಪಗಳಲ್ಲಿ ಹೆಚ್ಚು ಗುಣಗಳು) ಪ್ರಾಣ ಮೊದಲಾದ ಇತರ ಐವರು ದಾಸರೂ ಸದ್ಗುಣಗಳಿಂದ ಕೂಡಿದವರೆ. ಎಂಬ ಶ್ರುತಿಯಿಂದ ಮುಖ್ಯಪ್ರಾಣನಿಗೆ ದಾಸರಿಗಿಂತಲೂ ವ್ಯಕ್ತ ಸದ್ಗುಣಗಳಿವೆ. (ಅಂದರೆ ಮುಖ್ಯಪ್ರಾಣನ ದಾಸರಾದ ಪ್ರಾಣಾದಿಗಳಿಗೆ ವ್ಯಕ್ತ ಸದ್ಗುಣಗಳಿದ್ದರೂ ಸ್ವಾನಿ ಕರ್ಮಾಣಿ ಕುರ್ವತೇ ಎಂಬ ಸ್ಮೃತಿಯಿಂದ ಮುಖ್ಯಪ್ರಾಣನ ಆಜ್ಞೆಯಿಂದ ಪ್ರಾಣನಾದಿವ್ಯಾಪಾರಗಳನ್ನು ಮಾಡುವವರು. ಮುಖ್ಯಪ್ರಾಣನ ಸಾಮ್ಯವು ಬರಬೇಕೆಂದೂ ಹೇಳಲಾಗುವುದಿಲ್ಲ. ದಾಸರಿಗಿಂತಲೂ ಪ್ರಾಣಾದಿ ಐದು ಸ್ವರೂಪಗಳಿಗೆ ಅಧಿಕ ವ್ಯಕ್ತ ಸದ್ಗುಣಗಳು ಇದ್ದುದರಿಂದ ಆಧಿಕ್ಯವು ಕೂಡುವುದು. ಅಂತೂ ಪ್ರಾಣಾದಿಗಳಿಗೆ ದ್ವಿರೂಪತ್ವವಿದ್ದುದರಿಂದ ದಾಸತ್ವ ಸ್ವರೂಪತ್ವ ರೂಪ ವಿಶೇಷಗಳೆರಡೂ ಕೂಡುವುದರಿಂದ ಶ್ರುತಿಗೆ ಪ್ರಾಮಾಣ್ಯವು ಕೂಡುವ ಪ್ರಯುಕ್ತ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವು.) ॥ ೮ ॥

೯ನೇ ಅಣ್ವಧಿಕರಣದಲ್ಲಿ ಪ್ರಾಣ ಏವಾಥಸ್ತಾತ್ ಅಣುರ್ನೈತತ್ಸೃಜ್ಯತೇ ಇದು ಮೊದಲಾದ ಶ್ರುತಿಗಳ ವಿಪ್ರತಿಪತ್ತಿಯಿಂದ ಮುಖ್ಯಪ್ರಾಣನು ವ್ಯಾಪ್ತನೋ ಅಲ್ಲವೋ ಎಂದು ಸಂದೇಹವು ಬಂದರೆ ವ್ಯಾಪ್ತನೇ ಎಂದು ಪೂರ್ವಪಕ್ಷವು. ಅದರಲ್ಲಿ ದೃಷ್ಟಾಂತಯುಕ್ತಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಿದ್ಧಾಂತ ಪರವಾಗಿ ವಿವರಿಸುತ್ತಾರೆ.

ಮೂ ॥ (೧) ನಚಾಣುತ್ವೇ ಪ್ರಾಣಸ್ಯ 'ಮಹಾನ್ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಂ' ಇತಿ ದೃಷ್ಟ್ಯಾಯುಕ್ತಿಃ॥(೨) ಅಣುರ್ವೈ ಮುಖ್ಯಪ್ರಾಣೋ ಯಃಉತ್ಕ್ರಾಮತಿ ನಾಡೀಭಿರಿತಿ ದೃಷ್ಟ್ಯಾಯುಕ್ತೇರನಣುತ್ವೇ ಪ್ರಾಣಸ್ಯ ॥೯॥

ಅ ॥ (೧) ಮುಖ್ಯಪ್ರಾಣನು ಅಣುವೆಂದಾದರೆ ಯಾವ ಮುಖ್ಯಪ್ರಾಣನಿಂದ ಚೇತನ ಅಚೇತನಾತ್ಮಕ ಸರ್ವಜಗತ್ತು ವ್ಯಾಪ್ತವಾಗಿಯದೋ, ಅಂತಹ ಮುಖ್ಯಪ್ರಾಣನು ವ್ಯಾಪ್ತನೇ, 'ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ । ಬಲಿಷ್ಠನಾದ ಯಾವ ಮುಖ್ಯಪ್ರಾಣನು ಸರ್ವಲೋಕಗಳನ್ನು ಧರಿಸಿರುತ್ತಾನೋ, ಇದು ಮೊದಲಾದ ಪ್ರಮಾಣಗಳಿಂದ ನಿಶ್ಚಿತವಾದ ಸಕಲ ಜಗದ್ವ್ಯಾಪಕತ್ವವು ಕೂಡದೆ ಹೋಗಬೇಕಾಗುವುದು. (ಅಂತೂ ದೃಷ್ಟವಾದ ಸಕಲ ಪ್ರಮಾಣಗಳಿಂದ ನಿಶ್ಚಿತವಾದ ಜಗದ್ವ್ಯಾಪಕತ್ವವು ಕೂಡದಿರುವುದರಿಂದ ಮುಖ್ಯಪ್ರಾಣನು ವ್ಯಾಪ್ತನೆಂದು ಸಿದ್ಧಿಸುವ ಪ್ರಯುಕ್ತ ಅಣುವೆಂದು ಹೇಳತಕ್ಕ ಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿಸಮನ್ವಯದಿಂದ ಶ್ರೀ ವಿಷ್ಣುವಿಗ ಜಗತ್ಕಾರಣತ್ವವು ಕೂಡುವುದಿಲ್ಲ) ಎಂಬ ಪೂರ್ವಪಕ್ಷವು ಯುಕ್ತವಲ್ಲ.(ಏಕೆಂದರೆ) ಪ್ರಾಣನು ಅಣುವಲ್ಲ ವ್ಯಾಪ್ತನೇ ಎಂದುಹೇಳಿದರೆ ಯಾವಮುಖ್ಯಪ್ರಾಣನು ನಾಡಿಗಳಿಂದ ಉತ್ಕ್ರಾಂತನಾಗುತ್ತಾನೋಅಂತಹಮುಖ್ಯಪ್ರಾಣನು ಅಣುವೇ, ಎಂಬ ಪ್ರಮಾಣ ದೃಷ್ಟವಾದಅಣುತ್ವವು ಕೂಡದೆಹೋಗುವುದು (ದೇಹದಿಂದ ಹೊರಗಿರುವ ಮುಖ್ಯ ವಾಯು ರೂಪದಿಂದ ಮುಖ್ಯಪ್ರಾಣನು ವ್ಯಾಪ್ತನು. ದೇಹದೊಳಗೆ ಇರುವ ರೂಪದಿಂದ ಅಣುವು. ಈ ರೀತಿಯಾಗಿ ರೂಪ ವಿಶೇಷಗಳಿಂದ ಮಹತ್ತ್ವವನ್ನೂ ಅಣುತ್ವವನ್ನೂ ಅಂಗೀಕರಿಸುವುದರಿಂದ ಶ್ರುತಿ ವಿರೋಧವಿಲ್ಲರುವ ಪ್ರಯುಕ್ತ ಶ್ರುತಿಸಮನ್ವಯದಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವು.) ॥೯॥

೧೦ನೇ ಜ್ಯೋತಿರಧಿಕರಣದಲ್ಲಿ 'ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ । ಯಸ್ಮಾತ್ತದ್ವಶಗಾ ಏತೇ ದೃಶ್ಯಂತೇ ಸರ್ವದೇಹಿಷು ॥' 'ಬ್ರಹ್ಮಣೋ ವಾ ಏತಾನಿ ಕರಣಾನಿ ಚಕ್ಷುಃ ಶ್ರೋತ್ರಂ ಮನೋ ವಾಗಿತಿ'ಎಂಬ ಶ್ರುತಿಗಳವಿಪ್ರತಿಪತ್ತಿಯಿಂದಇಂದ್ರಿಯಗಳುಜೀವನಿಗೆ ಕರಣಗಳೋ ಬ್ರಹ್ಮನಿಗೆ ಕರಣಗಳೋ, ಎಂದು ಸಂದೇಹವು ಬಂದರೆ ಜೀವನಿಗೆ ಕರಣಗಳೆಂದು ಪೂರ್ವಪಕ್ಷವು. ಅದರಲ್ಲಿ ದೃಷ್ಟ್ಯಾಯುಕ್ತಿಃ ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ (೧) ನ ಚೇಂದ್ರಿಯಾಣಾಂ ಜೀವಾಕರಣತ್ವೇ ದೃಷ್ಟ್ಯಾಯುಕ್ತಿಃ (೨) ಕ್ವಚಿದತತ್ವಶತ್ವಸ್ಯಾಪಿ ದೃಷ್ಟತ್ವಾತ್ । (೩). 'ಯಶ್ಚಕ್ಷುಷಿ ತಿಷ್ಠನ್' ಇತ್ಯಾದಿ ದೃಷ್ಟ್ಯಾಯುಕ್ತೇರೀಶಾಧೀನತ್ವಾಂಗೀಕಾರೇಲೌಕಿಕದೃಷ್ಟೇಸ್ತ್ವೀಶೇನೈವ ಜೀವಾನುಸಾರಿತ್ವಕ್ಲೃಪ್ತ್ಯೋಪಪತ್ತೇಃ ॥ ೧೦ ॥

ಅ ॥ (೧) ಇಂದ್ರಿಯಗಳು ಜೀವರಿಂದ ಪ್ರಯೋಜ್ಯಗಳಲ್ಲವೆಂದಂಗೀಕರಿಸಿದರೆ (ದೇವದತ್ತನಿಗೆ ಕುಠಾರದಂತೆ) ಜೀವರ ಅಧೀನಗಳೆಂದು ಅನುಭವದಿಂದ ದೃಷ್ಟವಾದುದು ಕೂಡದೇ ಹೋಗುವುದು. (ಅಂತೂ ಜೀವಕರಣತ್ವವಿಲ್ಲವಾದರೆ ದೃಷ್ಟವಾದುದು ಕೂಡದಿರುವುದರಿಂದ ಬ್ರಹ್ಮ ಪ್ರಯೋಜ್ಯಗಳೆಂದುಹೇಳಲಾಗದಿರುವುದರಿಂದ ಬ್ರಹ್ಮಕರಣತ್ವ ಶ್ರುತಿಯು ಅಪ್ರಮಾಣವೇ. ಆದಕಾರಣ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ) ಎಂಬ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ದೃಷ್ಟ್ಯಾಯುಕ್ತಿಃ ಎಂಬುವುದನ್ನೇ ಪೂರ್ವಪಕ್ಷ ನಿರಾಸಕವಾಗಿ ವಿವರಿಸುತ್ತಾರೆ.) (ಘ್ರಾಣದಿಂದ ಅನಾಘ್ರೇಯವಾದುದನ್ನು ಮೂಸುವುದರಿಂದಲೂ, ಕಚ್ಚಬಾರದೆಂದು ಇರುವ ವಸ್ತುವನ್ನು ಕಚ್ಚುವುವರಿಂದಲೂ) ಕೆಲವು ವಿಷಯವಿಶೇಷಗಳಲ್ಲಿ ಕಾಲ ವಿಶೇಷಗಳಲ್ಲಿ ಇಂದ್ರಿಯಗಳು ಜೀವರ ಅಧೀನಗಳಲ್ಲವೆಂದೂ ಅನುಭವ ಸಿದ್ಧವಾದಪ್ರಯುಕ್ತ ಜೀವ ಪ್ರಯೋಜ್ಯಗಳಲ್ಲ. (ಜೀವಪ್ರಯೋಜ್ಯಗಳೆಂದಾದರೆ ಸರ್ವತ್ರ ಜೀವರ ಅಧೀನಗಳೇ ಆಗಿರಬೇಕಿತ್ತು.)

(ಕರಣಗಳು ಶ್ರೀಹರಿಯ ಅಧೀನಗಳಲ್ಲವೆಂದಾದರೆ) ಯಾವನು ಚಕ್ಷುಸ್ಸಿನಲ್ಲಿ ಇರುತ್ತಾನೋ (ವಾಗಿಂದ್ರಿಯ ದಲ್ಲಿರುತ್ತಾನೋ) ಇದು ಮೊದಲಾದ ಶ್ರುತಿಗಳಿಂದ ಪ್ರಮಿತವಾದುದು ಶ್ರೀ ಈಶ್ವರ ಪ್ರಯೋಜ್ಯಗಳೆಂದಂಗೀಕರಿಸದಿದ್ದರೆ ಕೂಡದೆ ಹೋಗಬೇಕಾಗುವುದು. ಲೌಕಿಕರಿಗೆ ಕ್ವಚಿತ್ ಇಂದ್ರಿಯಗಳು ಜೀವರ ಅಧೀನಗಳೆಂದು ಕಾಣುವುದು (ಪಿಶಾಚಾವಿಷ್ಟಚೇತನರು ದೊಡ್ಡ ಭಾರವನ್ನು ಹೊರುವಂತೆ)ಜೀವಾನುಸಾರಿಗಳಾಗಲಿ, ಎಂದು ಶ್ರೀಹರಿಯ ಇಚ್ಛೆಯಿಂದುಪಪನ್ನವಾಗುತ್ತದೆ. (ತಥಾ ಚ ಇಂದ್ರಿಯಗಳು ನಿಯಮೇನ ಜೀವರ ಅಧೀನಗಳಲ್ಲ. ಇದಮಹಂ ಚಕ್ಷುಷಾ ಪಶ್ಯಾಮಿ ಎಂದು ಇಚ್ಛೆಯಿದ್ದರೂ ಕ್ವಚಿತ್ ಕಾಣುವುದಿಲ್ಲ. ಕ್ವಚಿತ್ ಕಾಣುವುದು ಶ್ರೀಹರಿಯ ಅನುಗ್ರಹದಿಂದ) (ಅಂತೂ ದೃಷ್ಟವಾದುದೂ ಕೂಡದಿರುವುದರಿಂದ ಬ್ರಹ್ಮಕರಣತ್ವವನ್ನೇ ಅಂಗೀಕರಿಸಬೇಕು. ಆದಕಾರಣ ಶ್ರುತಿಸಮನ್ವಯದಿಂದ ಜಗತ್ಕಾರಣತ್ವವು ಯುಕ್ತವೇ ॥ ೧೦ ॥

೧೧ನೇ ತ ಇಂದ್ರಿಯಾಧಿಕರಣದಲ್ಲಿ "ಅಥೇಂದ್ರಿಯಾಣಿ ಪ್ರಾಣಾ ವಾ ಇಂದ್ರಿಯಾಣಿ ಪ್ರಾಣಾ ಹೀದಂ ದ್ರವಂತಿ" "ದ್ವಾದಶೈವೇಂದ್ರಿಯಾಣ್ಯಾಹುರ್ಮನೋಬುದ್ಧೀ ತು ದ್ವಾದಶೇ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ೧೩ ಪ್ರಾಣಗಳಿಗೂ ಇಂದ್ರಿಯತ್ವ ವಿದೆಯೋ, ೧೨ ಪ್ರಾಣಗಳಿಗೇನೇ ಇಂದ್ರಿಯತ್ವವೋ, ಎಂದು ಸಂದೇಹವು ಬಂದರೆ ೧೩ ಪ್ರಾಣಗಳೂ ಇಂದ್ರಿಯಗಳೆನಿಸುತ್ತವೆ, ಎಂದು ಪೂರ್ವಪಕ್ಷವು. ಮುಖ್ಯ ಪ್ರಾಣನನ್ನು ಬಿಟ್ಟು ೧೨ ಪ್ರಾಣಗಳೇ ಇಂದ್ರಿಯಗಳೆನಿಸುತ್ತವೆ, ಎಂದು ಸಿದ್ಧಾಂತವು. ಅದರಲ್ಲಿ ಸಮಾನತ್ವಂ= (ಈಶಸಾಮ್ಯವು) ಎಂಬ ನ್ಯಾಯವನ್ನು ಪೂರ್ವಪಕ್ಷ ಸಿದ್ಧಾಂತ ಸಂಬಂಧಿಯಾಗಿ ವಿವರಿಸುತ್ತಾರೆ.

**ಮೂ ॥ ನ ಚೇಶವಶತ್ವಸಾಮ್ಯಾನ್ಮುಖ್ಯಪ್ರಾಣಸ್ಯಾಪ್ಯನ್ಯಸಾಮ್ಯಂ ॥ (೨) ಯದಸ್ಮಿನ್ನಿದಂ ಸರ್ವಮಧ್ಯಾಧ್ಯೋರ್ಣೀತ್ । ಪ್ರಾಣಸ್ಯೈತದ್ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಂ । ಇತ್ಯಾದಿ ಶ್ರುತೇರೀಶಸಾಮ್ಯಸ್ಯಾಪಿ ಭಾವಾತ್ । (೩) ಪ್ರಾಣಸ್ಯೈತದ್ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ । ಇತಿ ಶ್ರುತೇಃ ಮಧ್ಯಮತ್ವೋಪಪತ್ತೇಃ ॥ ೧೧ ॥**

ಅ ॥ (ಪ್ರಾಣಾ ಹೀದಂ ದ್ರವಂತಿ' ಎಂದು ಇದಂದ್ರವಣಾಖ್ಯ ಯುಕ್ತಿಯುಕ್ತವಾದ ಪೌಷ್ಯಾಯಣ ಶ್ರುತಿಯಿಂದಲೂ ಪ್ರಾಣಪದವಾಚ್ಯಗಳಾದ ೧೨ ಇಂದ್ರಿಯ, ಮುಖ್ಯಪ್ರಾಣ ಇವರಿಗೆ ಇದಂದ್ರವಣವು (ವಿಷಯಗಳನ್ನು ಕುರಿತು ಹೋಗುವಿಕೆ) ಸಮಾನವಾಗಿರುವುದರಿಂದಲೂ, ಸಾಮಾನ್ಯ ಶ್ರುತಿಯಲ್ಲಿ ಉಕ್ತವಾಗಿದೆ ಎಂಬುದು ಸಮಾನವಾಗಿರುವುದರಿಂದಲೂ ೧೩ ಪ್ರಾಣಗಳಿಗೂ ಶ್ರೀಹರಿಯ ಅಧೀನತ್ವವು ಸಮಾನವಾಗಿರುವುದರಿಂದಲೂ ಮುಖ್ಯಪ್ರಾಣನಿಗೂ (ಇಂದ್ರಿಯತ್ವಾದಿಗಳಿಂದ) ಚಕ್ಷುರಾದೀಂದ್ರಿಯಗಳಿಂದ ಸಾಮ್ಯವು. (ಅಂತೂ ಮುಖ್ಯಪ್ರಾಣನಿಗೂ ಚಕ್ಷುರಾದೀಂದ್ರಿಯಗಳಿಂದ ಸಾಮ್ಯವಿದ್ದುದರಿಂದ ಇಂದ್ರಿಯತ್ವವಿದ್ದ ಪ್ರಯುಕ್ತ ೧೩ ಎಂದು ಹೇಳತಕ್ಕ ಶ್ರುತಿಯಿಂದ ವಿರೋಧವಿದ್ದ ಪ್ರಯುಕ್ತ, ೧೨ ಪ್ರಾಣಗಳು ಎಂದು ಹೇಳುವ ಶ್ರುತಿಯು ಅಪ್ರಮಾಣವಾದ ಕಾರಣ ಶ್ರುತಿ ಸಮನ್ವಯದಿಂದ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ.) ಎಂಬ ಪೂರ್ವ ಪಕ್ಷವು ಯುಕ್ತವಲ್ಲ. (೨) (ಏಕೆಂದರೆ) ಜಗತ್ತಿನಲ್ಲಿ ಪ್ರಸಿದ್ಧವಾದುದೆಲ್ಲವೂ ಈ ಮುಖ್ಯ ಪ್ರಾಣನಲ್ಲಿಯೇ ಆಶ್ರಿತವಾಗಿದೆ. ಸ್ವರ್ಗಲೋಕದಲ್ಲಿದ್ದುದು ಎಲ್ಲವೂ ಪ್ರಾಣನ ಅಧೀನದಲ್ಲಿಯೇ ಇದೆ, ಇದು ಮೊದಲಾದ ಶ್ರುತ್ಯಾದಿಪ್ರಮಾಣಗಳಿಂದ ಪ್ರಾಣನಿಗೆ ಸ್ವರ್ಗಲೋಕದಲ್ಲಿದ್ದ ಸಕಲಪದಾರ್ಥ ನಿಯಾಮಕತ್ವರೂಪವಾದ ಧರ್ಮದಿಂದ ಈಶ್ವರಸಾಮ್ಯವೂ ಇದೆ. (೩) (ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಂ। ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥ ಎಂಬ ಶ್ರುತಿಯಿಂದ ಪ್ರಾಣನು ೧೨ ಇಂದ್ರಿಯಗಳಿಗೆ ನಿಯಾಮಕನಾಗಿರುವುದರಿಂದ ಈಶ್ವರ

ಸಾಮ್ಯವಿದ್ದುದರಿಂದ ಪ್ರಾಣನಿಗೆ ಇಂದ್ರಿಯತ್ವವಿಲ್ಲ. ಮತ್ತೆ) ಸರ್ವ ಜಗತ್ತು ಮುಖ್ಯಪ್ರಾಣನ ಅಧೀನದಲ್ಲಿದೆ ಮುಖ್ಯಪ್ರಾಣನು ಪರಮಾತ್ಮನ ಅಧೀನದಲ್ಲಿರುತ್ತಾನೆ, ಎಂಬ ಶ್ರುತಿಯಿಂದ (ಶ್ರೀ ಹರಿಗಿಂತ ಅವರನು. ಇತರರಿಂದ ಎಲ್ಲರಿಂದಲೂ ಶ್ರೇಷ್ಠನು, ಹೀಗೆ) ಮಧ್ಯಮತ್ವವು ಕೂಡುತ್ತದೆ. (ಏವಂಚ ತಾನು ಶ್ರೀ ಹರಿಯಿಂದ ನಿಯಮ್ಯನಾದರೂ ಇತರ ನಿಯಾಮಕತ್ವ ರೂಪವಾದ ಕಿಂಚಿತ್ ಈಶ್ವರ ಸಾಮ್ಯವೂ ಇದ್ದುದರಿಂದ ಮುಖ್ಯಪ್ರಾಣನಿಗೆ ಸರ್ವ ಜಗತ್ಕರ್ತನಾದ ಈಶ್ವರನಿಂದ ಕಾರಯಿತೃತ್ವವಿದ್ದುದರಿಂದ ಶ್ರೀಹರಿಯ ಸಾಮ್ಯವಿದೆ. ಆದ ಕಾರಣ ಮುಖ್ಯಪ್ರಾಣನಿಗೆ ಇಂದ್ರಿಯತ್ವವಿಲ್ಲದಿರುವುದರಿಂದ ೧೨ ಪ್ರಾಣಗಳು ಎಂದು ಹೇಳುವ ಶ್ರುತಿಯು ಪ್ರಮಾಣವಾದ ಪ್ರಯುಕ್ತ ಶ್ರುತಿ ಸಮನ್ವಯದಿಂದ ಈಶ್ವರನಿಗೆ ಜಗತ್ಕರ್ತೃತ್ವವು ಯುಕ್ತವು. ॥ ೧೧ ॥

೧೨ನೇ ಸಂಜ್ಞಾಧಿಕರಣದಲ್ಲಿ 'ವಿರಿಂಚೋವಾ ಇದಂ ವಿರೇಚಯತಿ' 'ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ಧ್ಯೇತೇ ನಾಮರೂಪೇ ವ್ಯಾಕ್ರಿಯೇತೇ' ಎನ್ನುವ ಶ್ರುತಿಗಳ ವಿಪ್ರತಿಪತ್ತಿಯಿಂದ ವಿರಿಂಚನು ಶರೀರಾದಿಗಳನ್ನು ಸೃಷ್ಟಿಸಿದ್ದೋ ಪರಬ್ರಹ್ಮನೋ, ಎಂದು ಸಂದೇಹವು ಬಂದರೆ ಚತುರ್ಮುಖನು ಸೃಷ್ಟಿಸಿದ್ದೆಂದು ಪೂರ್ವಪಕ್ಷವು. ಪರಬ್ರಹ್ಮನೇ ಸೃಷ್ಟಿಸಿದ್ದು ಎಂದು ಸಿದ್ಧಾಂತವು. ಅದರಲ್ಲಿ ಕರ್ತೃಶಕ್ತೇಃ=(ಶ್ರೀ ಹರಿಗೇನೇ ಕರ್ತೃತ್ವ ಶಕ್ತಿಯು) ಎಂಬ ಪೂರ್ವಪಕ್ಷಸಿದ್ಧಾಂತಯುಕ್ತಿಯನ್ನು ವಿವರಿಸುತ್ತಾರೆ.

ಮೂ (೧) ನ ಚ ವಿರಿಂಚಸ್ಯಾಪಿ ಕರ್ತೃತ್ವಶಕ್ತೇಃ ಸ ಏವ ಶರೀರಾದಿ ಪ್ರಷ್ಟಾ, (೨) 'ತ್ರಿವೃತ್ಕ್ರಿಯಾ ಯತೋ ವಿಷ್ಣೋಃ ರೂಪಂ ಚ ತದಪೇಕ್ಷಯಾ । ರೂಪಾಪೇಕ್ಷಂ ತಥಾ ನಾಮ ವ್ಯವಹಾರಸ್ತದಾತ್ಮಕಃ । ಅತೋ ರೂಪಸ್ಯ ನಾಮ್ನಶ್ಚ ವ್ಯವಹಾರಸ್ಯ ಚೈಕರಾಟ್ । ಹರಿರೇವ ಯತಃ ಕರ್ತಾ ಪಿತ್ಯಾತೋ ಭಗವಾನ್ಪ್ರಭುಃ ಇತ್ಯಾದೇಸ್ತಸ್ಯೈವ ಕರ್ತೃತ್ವ ಶಕ್ತೇಃ ವಿರಿಂಚಸ್ಯ ತದ್ದ್ವಾರತಯೈವೋಪಪತ್ತೇಃ ॥ ೧೨ ॥

ಅ ॥ (೧) ಚತುರ್ಮುಖನಿಗೂ ನಾಮರೂಪಾತ್ಮಕ ದೇಹಾದಿಗಳನ್ನು ಸೃಷ್ಟಿಮಾಡತಕ್ಕ ಶಕ್ತಿಯಿದ್ದ ಪ್ರಯುಕ್ತ ಚತುರ್ಮುಖನೇ ಸರ್ವಸ್ವತಂತ್ರನಾಗಿ ದೇಹಾದಿಗಳನ್ನು ಸೃಷ್ಟಿಮಾಡಿದವನು. ಪರಬ್ರಹ್ಮನು ಮಾಡತಕ್ಕ ಸೃಷ್ಟಿಗೆ ದ್ವಾರಭೂತನಾಗಿಲ್ಲ. (ಅಂತೂ ಚತುರ್ಮುಖನಿಗೂ ಕರ್ತೃತ್ವಶಕ್ತಿಯಿದ್ದ ಪ್ರಯುಕ್ತ 'ವಿರಿಂಚೋ ವಾ ಇದಂ ವಿರೇಚಯತಿ' ಎನ್ನುವ ಪ್ರಬಲ ಶ್ರುತಿವಿರೋಧದಿಂದ 'ಅಥಕಸ್ಮಾದುಚ್ಯತೇ ಪರಮ ಇತಿ' ಎನ್ನುವ ಶ್ರುತಿಯು ಅಪ್ರಮಾಣವಾದ ಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ) ಎಂಬುವ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ) ಯಾವ ವಿಷ್ಣುವಿನಿಂದಲೇ ತ್ರಿವೃತ್ಕರಣವೋ (ಪೃಥಿವ್ಯಪ್ತೇಜಸ್ಸುಗಳನ್ನು ಕೂಡಿಸಿಯೇ ಸಕಲ ಪದಾರ್ಥಗಳನ್ನು ಸೃಷ್ಟಿಸಿದ್ದೋ, ಅದನ್ನಪೇಕ್ಷಿಸಿಯೇ ರೂಪದ ಸೃಷ್ಟಿಯೋ, ರೂಪವನ್ನಪೇಕ್ಷಿಸಿ ನಾಮಸೃಷ್ಟಿಯೋ, ನಾಮರೂಪಾತ್ಮಕವಾದುದು ವ್ಯವಹಾರವೋ, ಆದಕಾರಣ ರೂಪಗಳಿಗೂ ನಾಮಗಳಿಗೂ ವ್ಯವಹಾರಕ್ಕೂ ಸರ್ವಸ್ವತಂತ್ರನಾದವನು ಶ್ರೀಹರಿಯೊಬ್ಬನೇ. ಯಾವ ಕಾರಣದಿಂದ ಸರ್ವಸಮರ್ಥನಾದ ಭಗವಂತನೇ ಸರ್ವಕರ್ತನೋ ಆದಕಾರಣ ಪಿತನೆನ್ನಿಸುತ್ತಾನೆ, ಇದು ಮೊದಲಾದ ಶ್ರುತಿಗಳದ್ದೆಶೆಯಿಂದ ಆ ವಿಷ್ಣುವಿಗೇನೇ ಮುಖ್ಯತಃ ಸೃಷ್ಟಿಸತಕ್ಕ ಶಕ್ತಿಯಿರುವುದು. ಚತುರ್ಮುಖನೂ ಕರ್ತನೆಂದು ಹೇಳಿದ್ದು ದ್ವಾರ ಅವಾಂತರ ಕಾರಣತ್ವ ಮಾತ್ರದಿಂದಲೇ (ಆದಕಾರಣ ವಿಷ್ಣುವಿಗೇನೇ ಜಗತ್ಕಾರಣತ್ವವು ಯುಕ್ತವು.) ॥ ೧೨ ॥

೧೩ನೇ ಮಾಂಸಾಧಿಕರಣದಲ್ಲಿ 'ಅದ್ಭ್ಯೋ ಹೀದಮುತ್ಪದ್ಯತೇ ಆಪೋ ವಾ ಇದಂ ಸರ್ವಂ' 'ಪೃಥಿವೀ ಶರೀರಂ' 'ಸೋಽಗ್ನೇರ್ದೇವಯೋನ್ಯಾಃ ಆಹುತಿಭ್ಯೋ ಹಿರಣ್ಯಶರೀರಃ' 'ಇಮಾಸ್ತಿಸ್ರೋ ದೇವತಾಃ' ಎಂಬ ಶ್ರುತಿಗಳ ವಿಪ್ರತಿಪತ್ತಿಯಿಂದ ದೇಹವು ಜಲೀಯವೋ, ಪಾರ್ಥಿವವೋ, ತೈಜಸವೋ, ಪೃಥಿವ್ಯಪ್ತೇಜಸ್ಸುಗಳ ಸ್ವರೂಪವೋ ಎಂದು ಸಂದೇಹವು ಬಂದರೆ, ಜಲೀಯವೇ ಪಾರ್ಥಿವವೇ, ತೈಜಸವೇ ಎಂದಾಗಲೀ ಪೂರ್ವಪಕ್ಷವು, ಭೂತತ್ರಯಾತ್ಮಕವೇ ಎಂದು ಸಿದ್ಧಾಂತವು. ಅದರಲ್ಲಿ ಮಿಮಿಶ್ರತಾ (ಪರಸ್ಪರ ಮಿಶ್ರೀಭಾವವು) ಎನ್ನುವ ಪೂರ್ವಪಕ್ಷ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ಮಿಶ್ರಿತತ್ವಾದ್ಭೂತಾನಾಂ ಮಿಶ್ರತಾಯಾಮವಿಶೇಷಃ । (೨) 'ಅನ್ನಮಶಿತಂ ತ್ರೇಧಾ ವಿಧೀಯತೇ' ಇತ್ಯಾದಿನಾ ಮಿಶ್ರತಾಯಾಮಪಿ ವಿಶೇಷೋಕ್ತೇಃ (೩) 'ಸರ್ವಂ ಚ ಭೌತಿಕಂ ಮಿಶ್ರಂ ಮಿಶ್ರತ್ವೇಽಪಿ ವಿಶೇಷಿತಾ । ಭೌಮಂ ಮಾಂಸಮಸೃಗ್ವಾರಿ ತೇಜೋ ಮಜ್ಜಾ ವಿಶೇಷತಃ ॥ ಇತ್ಯಾದೇಶ್ಚ ॥ ೧೩ ॥

ಅ॥ (೧) ಶರೀರಗಳಲ್ಲಿರತಕ್ಕ ಪೃಥಿವೀ ಜಲ ತೇಜೋರೂಪಗಳಾದ ಭೂತಗಳು ಪರಸ್ಪರ ಮಿಶ್ರಗಳಾಗಿವೆ, ಎಂದಂಗೀಕರಿಸಿದರೆ ಮಿಶ್ರತ್ವವಿದ್ದ ಪ್ರಯುಕ್ತವೇ 'ಅಪಶ್ಶರೀರಂ' ಇತ್ಯಾದಿ ಶರೀರವು ಜಲೀಯವು ಇತ್ಯಾದಿಗಳಿಂದ ವಿಶೇಷೋಕ್ತಿಯು ಬಾರದೆ ಹೋಗಬೇಕಾಗುವುದು. (ಅಂತೂ ಭೂತಗಳು ಎಂಬುವಲ್ಲಿ ವಿಶೇಷೋಕ್ತಿಯು ಕೂಡದಿರುವುದರಿಂದ ಅದನ್ನು ಪ್ರತಿಪಾದಿಸತಕ್ಕ ಶ್ರುತಿಯು ಅಪ್ರಮಾಣವೇ. ಆದ ಕಾರಣ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ) ಎಂಬ ಪೂರ್ವ ಪಕ್ಷವು ಯುಕ್ತವಲ್ಲ (ಏಕೆಂದರೆ) ಉಂಡ ಅನ್ನವು ಮೂರು ಪ್ರಕಾರ ವಿಭಜಿಸಲ್ಪಡುತ್ತದೆ, ಇತ್ಯಾದಿ ಪ್ರಮಾಣಗಳಿಂದ ಮಿಶ್ರಗಳಾಗಿವೆ ಎಂಬುವಲ್ಲಿಯೂ ವಿಶೇಷೋಕ್ತಿಯು ಇದೆ. (ಭೂತಗಳು ಮಿಶ್ರಗಳಾಗಿವೆ ಎಂಬುವಲ್ಲಿ ಇದು ವಿಶೇಷೋಕ್ತಿಯು ಆಗುವುದು. ಹೇಗೆ? ಎಂದರೆ) ಪಾಂಚಭೌತಿಕವಾದ ಎಲ್ಲಾವಸ್ತುವೂ ಮಿಶ್ರವಾಗಿಯೇ ಇದೆ. ಮಿಶ್ರವಾಗಿದ್ದಾಗ್ಯೂ ವಿಶೇಷವಿದೆ. ಮಾಂಸವು ಪಾರ್ಥಿವವು. ರಕ್ತವು ಜಲೀಯವು. ಮಜ್ಜೆಯು ತೈಜಸವು. ಹೀಗೆ ವಿಶೇಷವನ್ನು ತಿಳಿದುಕೊಳ್ಳಬೇಕು. ಮತ್ತು ಪಾರ್ಥಿವಾನಾಂ ಶರೀರಾಣಾಮಪರ್ಧೇನ ಪೃಥಿವೀ ಸ್ಮೃತಾ । ಇದು ಮೊದಲಾದ ವಿಶೇಷೋಕ್ತಿರೂಪಪ್ರಮಾಣವಿದೆ. (ಏವಂಚ ಶರೀರವು ಮಿಶ್ರವಾಗಿರುವುದರಿಂದ ಪಾಂಚಭೌತಿಕವಾದಾಗ್ಯೂ ಅದರ ಭಾಗಗಳು ಜಾಸ್ತಿ ಕಡಿಮೆಗಳಿದ್ದುದರಿಂದ ವಿಶೇಷ ವ್ಯವಹಾರವು ಕೂಡುತ್ತದೆ. ಆದಕಾರಣ ಶ್ರುತಿಗೆ ಪ್ರಾಮಾಣ್ಯವು ಕೂಡುವುದರಿಂದ ಶ್ರೀವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ.) ॥ ೧೩ ॥

ಇತಿ ಶ್ರೀಮನ್ನ್ಯಾಯ ವಿವರಣೇ ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ ।
ನ್ಯಾಯ ವಿವರಣದಲ್ಲಿ ೨ನೇ ಅಧ್ಯಾಯದಲ್ಲಿ ೪ನೇ ಪಾದವು ಸಮಾಪ್ತವಾಯ್ತು.-
ದುರಂತದುರಿತಧ್ವಾಂತವಿಪಾಟನಪಟೀಯಸೇ ।
ಬಾದರಾಯಣಸಂಜ್ಞಾಯ ಪರಸ್ಮೈಬ್ರಹ್ಮಣೇ ನಮಃ ।
ಯದ್ವ್ಯಾಖ್ಯಾ ಸರ್ವಗೀರ್ವಾಣೈರಚಿಂತ್ಯಾಽತ್ಯದ್ಭುತಾಽಮಲಾ ।
ನಿಜಪ್ರತಿಭಯೋದ್ಭೂತಾ ತಂ ಸರ್ವಜ್ಞಗುರುಂ ಭಜೇ ॥
ತಂತ್ರಿನಾರಾಯಣಾಖ್ಯೇನ ಮಧ್ವೇಶಚರಣಾರ್ಪಿತಃ ।
ಗ್ರಂಥಃ ಟೀಕಾನುಸಾರೇಣ ಗ್ರಥಿತೋ ಜಯತಾದ್ಭುವಿ ॥
೨ನೇ ಅಧ್ಯಾಯವು ಸಮಾಪ್ತವಾಯ್ತು.

|| ಶ್ರೀರಸ್ತು ||

# ಮೂರನೇ ಅಧ್ಯಾಯವು

## ೧ನೇ ಪಾದವು

**ವೈರಾಗ್ಯಭಕ್ತಿಶ್ರವಣಮನನಧ್ಯಾನಯೋಗತಃ ।**
**ಸದ್ಭಿರ್ಜ್ಞೇಯಂ ಭಜೇ ಮಧ್ವವಲ್ಲಭಂ ಕಮಲಾಪತಿಂ ॥**

ವೈರಾಗ್ಯಸಾಧ್ಯವಾದ ಉಪಾಸನೆಗೆ ಸಾಧನವಾದ ಭಕ್ತಿಯು ಹುಟ್ಟುವುದಕ್ಕಾಗಿ ಭಗವತ್ಪ್ರೀತಿಗೆಸಾಧನವಾದ ವಿಚಾರಪರವಾದ ೩ನೇ ಅಧ್ಯಾಯದಲ್ಲಿ ಮೋಕ್ಷ ಸಾಧನಗಳಲ್ಲಿ ಪ್ರಾಥಮಿಕವಾದ ವೈರಾಗ್ಯವನ್ನು ಪ್ರತಿಪಾದಿಸುವುದಕ್ಕಾಗಿ ೧ನೇ ಪಾದವು ಪ್ರವೃತ್ತವಾಗಿದೆ.

೧ನೇ ಪಾದದ ಅಧಿಕರಣ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿದುದನ್ನು ವಿಸ್ತರಿಸಿ ನಿರೂಪಿಸುತ್ತಾರೆ.

(1) ಸ್ವಾಭಾವಿಕಾ (2) ನ್ಯಥಾ ನಾಮ (3) ಸಹಾಭಾವಾ (4) ನ್ಯಥೋಕ್ತಯಃ। (5) (6) ಅವಿಶೇಷ (7) ವಿಶೇಷೌಚ (8) (9) (10) ಸಹಭಾವೋ (11) ವಿಮಿಶ್ರತಾ ॥ (12) ವಿರುದ್ಧೋಕ್ತಿಃ (13) (14) (15) (16) (17) (18)ಸಹಸ್ಥಾನಂ(19)ವೈಯರ್ಥ್ಯಂ (20) ಚಾನ್ಯಥಾ ಗತಿಃ। ಯುಕ್ತಯಃ ಪೂರ್ವಪಕ್ಷಸ್ಯ. (1) ಗುಣಾಧಿಕ್ಯಾ (2) ರ್ಥತೋ ಭವೌ। (3) ಉಪಪತ್ತಿ: (4) ದ್ವಿರೂಪತ್ವ (5) ಮಾಧಿಕ್ಯ (6) ಮನುರೂಪತಾ। (7) (8) (9) (10) ಯೋಗ್ಯತಾ (11) ಬಲವತ್ತ್ವಂ ಚ (12) ವಿಭಾಗಃ (13) (14) (15) (16) (17) (18) ಕಾರಣಾಭವಃ। (19) ಕ್ಲಪ್ತಿ (20) ರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಿಕಾಃ ॥ ಎಂದು

೧ನೇ ತದಂತರಾಧಿಕರಣದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ ಎನ್ನುವ ಸೂತ್ರದಲ್ಲಿರತಕ್ಕ ಅಥ ಶಬ್ದದಿಂದ ವೈರಾಗ್ಯಾದಿಗಳು ಮೋಕ್ಷ ಸಾಧನಗಳೆಂದು ಹೇಳಿದುದರಿಂದ ವೈರಾಗ್ಯಾದಿಗಳು ಇದ್ದರೇನೇ ಮುಕ್ತಿಯು, ಇಲ್ಲದಿದ್ದರೆ ಮುಕ್ತಿಯಿಲ್ಲ, ಎಂಬ ಅನ್ವಯವ್ಯತಿರೇಕಗಳಿಂದ ಮೋಕ್ಷವನ್ನು ಇಚ್ಛಿಸುವವನು ವೈರಾಗ್ಯಾದಿಗಳನ್ನು ಸಂಪಾದಿಸಬೇಕೋ ಬೇಡವೋ, ಎಂದು ಸಂದೇಹವು ಬಂದರೆ ವೈರಾಗ್ಯಾದಿಗಳನ್ನು ಸಂಪಾದಿಸಬೇಕಾಗಿಲ್ಲ, ಎಂದು ಪೂರ್ವಪಕ್ಷವು. ಅದರಲ್ಲಿ ಸ್ವಾಭಾವಿಕ (ಸ್ವಾಭಾವಿಕ ಮರಣವು) ಎನ್ನುವ ಪೂರ್ವಪಕ್ಷ ಯುಕ್ತಿಯನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ॥ ಓಂ ॥ (೧) ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ । ಇತಿ ವಚನಾತ್ ಸ್ವಾಭಾವಿಕಮರಣಮೇವ ಮುಕ್ತಿರಿತಿ ನ ಮಂತವ್ಯಂ ॥ (೨) ಮುಕ್ತಿಸಾಧನತ್ವೇನ ಜ್ಞಾನಾದಿಗುಣಾಧಿಕ್ಯೋಪದೇಶಾನ್ಮರಣೇ ಭೂತವಿಯೋಗಸ್ಯೈವಾಭಾವಾತ್ ॥ (೩) ಭೂತಯುಕ್ತಃ ಪರಂ ಲೋಕಮಿಮಂ ಲೋಕಂ ಚ ಗಚ್ಛತೀತ್ಯಾದಿ ವಚನಾಚ್ಚ ॥ ೧ ॥

ಅ || (೧) ಪಂಚಭೂತಗಳ ಸಂಬಂಧವೇ ಸಂಸಾರವು. ಅವುಗಳ ಬಿಡುವಿಕೆಯೇ ಮುಕ್ತಿಯು, ಎಂಬ ಪ್ರಮಾಣದಿಂದ 'ಜಾತಸ್ಯ ಹಿ ಧ್ರುವೋ ಮೃತ್ಯುಃ' ಇತ್ಯಾದಿ ಪ್ರಮಾಣ ಪ್ರಕಾರ ಸ್ವಾಭಾವಿಕ ಮರಣವೇ ಮುಕ್ತಿಯು. (ಅದಕ್ಕಾಗಿ ಪ್ರಯತ್ನ ಮಾಡಬೇಕಾಗಿಲ್ಲ.) (ಅಂತಹ ಮರಣದಲ್ಲಿಯೂ ಸರ್ವಾತ್ಮನಾ ಭೂತವಿಯೋಗವಾಗುತ್ತದೆ, ಎಂದು ಪೂರ್ವಪಕ್ಷಿಯ ಅಭಿಪ್ರಾಯವು) (ಅಂತೂ ಭೂತವಿಯೋಗ ರೂಪ ಮರಣವೇ ಮೋಕ್ಷವಾದ ಕಾರಣ ಮರಣವು ಸರ್ವರಿಗೂ ಸ್ವಾಭಾವಿಕವೇ ಆಗಿರುವುದರಿಂದ ವೈರಾಗ್ಯದ ಅಪೇಕ್ಷೆಯಿಲ್ಲ. ಆದಕಾರಣ ಮೋಕ್ಷಕ್ಕಾಗಿ ವೈರಾಗ್ಯಾದಿ ಸಾಧನಗಳನ್ನು ಪ್ರತಿಪಾದಿಸತಕ್ಕ ಜಿಜ್ಞಾಸಾ ಸೂತ್ರದಲ್ಲಿದ್ದ ಅಥ ಶಬ್ದಾರ್ಥವು ಕೂಡಲಾರದು.) ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ— ಗುಣಾಧಿಕ್ಯಂ = (ಮುಕ್ತಿಗಾಗಿ ಅಪರೋಕ್ಷಜ್ಞಾನಾದಿ ರೂಪ ಗುಣಾದಿಕ್ಯೋಪದೇಶವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.)ಮೋಕ್ಷಕ್ಕೆ ಸಾಧನವಾಗಿ ಅಪರೋಕ್ಷಜ್ಞಾನಾದಿಗುಣಗಳನ್ನು ಪದೇಶಮಾಡಿರುವುದರಿಂದ ಮರಣದಲ್ಲಿ ಸಂಪೂರ್ಣವಾಗಿ ಭೂತಗಳ ವಿಯೋಗವೇ ಆಗುವುದಿಲ್ಲ. (ಮತ್ತು 'ತಮೇವಂ ವಿದ್ವಾನ್' ಎನ್ನುವ ಶ್ರುತಿಯಿಂದ ಜ್ಞಾನಾಖ್ಯ ಗುಣವೇ ಮೋಕ್ಷ ಸಾಧನಗಳಲ್ಲಿಯೂ ಶ್ರೇಷ್ಠವಾಗಿರುವುದರಿಂದ ಜ್ಞಾನವಿಲ್ಲದೆ ಮರಣ ಮಾತ್ರದಿಂದ ಮೋಕ್ಷವಾಗಲಾರದು) (೩) ಸರ್ವಾತ್ಮನಾ ಪಂಚಭೂತಗಳಿಂದ ಕೂಡಿದವನಾಗಿಯೇ ಪರಲೋಕಕ್ಕೂ ಹೋಗುತ್ತಾನೆ—ಈ ಲೋಕಕ್ಕೂ ಬರುತ್ತಾನೆ, ಇತ್ಯಾದಿ ಪ್ರಮಾಣಗಳಿಂದ ಕೇವಲ ಮರಣದಲ್ಲಿ ಸರ್ವಾತ್ಮನಾ ಭೂತವಿಯೋಗವೇ ಇಲ್ಲ. (ಮರಣದಲ್ಲಿಯೇ ಸರ್ವಾತ್ಮನಾ ಭೂತವಿಯೋಗ ಹೇಳಿದರೆ ಮೋಕ್ಷಕ್ಕಾಗಿ ಅಪರೋಕ್ಷ ಜ್ಞಾನಾದಿ ಗುಣಗಳನ್ನು ಹೇಳಿದ್ದು ಕೂಡದೆ ಹೋಗುವುದು ಆದಕಾರಣ ಮರಣಕಾಲದಲ್ಲಿ ಸಂಪೂರ್ಣ ಭೂತವಿಯೋಗವೇ ಇಲ್ಲದಿರುವುದರಿಂದ ಮೋಕ್ಷಕ್ಕಾಗಿ ಅಪರೋಕ್ಷಜ್ಞಾನಾದಿಗಳು ಅವಶ್ಯಕವೆಂದು ಹೇಳಿದಕ್ಕಾಯುಕ್ತ ಸ್ವಾಭಾವಿಕಮರಣವು ಮುಕ್ತಿಯಾಗದ ಕಾರಣ ಮುಮುಕ್ಷುವು ಜ್ಞಾನಕ್ಕಾಗಿ ವೈರಾಗ್ಯಾದಿಗಳನ್ನು ಅವಶ್ಯವಾಗಿ ಸಂಪಾದಿಸಬೇಕು. ಆದಕಾರಣ ಜಿಜ್ಞಾಸಾಸೂತ್ರವು ಯುಕ್ತವೇ || ೧ ||

೨ನೇ ತ್ರ್ಯಾತ್ಮಕತ್ವಾಧಿಕರಣದಲ್ಲಿ 'ಭೂತಪರಿಷ್ವಕ್ತೋ ರಂಹತಿ' ಎನ್ನುವ ಸಾಮಾನ್ಯ ವಚನವು ಉಭಯಥಾಪಿ ಕೂಡುವ ಪ್ರಯುಕ್ತ ಜೀವನಿಗೆ ಮರಣವಾಗುವಾಗ ಸಮಸ್ತಭೂತಗಳೂ ಜೀವನೊಂದಿಗೆ ಹೋಗುತ್ತವೋ, ಇಲ್ಲವೋ, ಎಂದು ಸಂದೇಹವು ಬಂದರೆ ಸಮಸ್ತ ಭೂತಗಳು ಜೀವನೊಟ್ಟಿಗೆ ಹೋಗುವುದಿಲ್ಲವೆಂದು ಪೂರ್ವಪಕ್ಷವು. ಅದರಲ್ಲಿ ಅನ್ಯಥಾನಾಮ= (ಸಾಮಾನ್ಯ ನಾಮಕ್ಕಿಂತ ವಿಶೇಷ ನಾಮವು) ಎನ್ನುವ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ ||(೧)ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತ್ಯತ್ರ ಭೂತಾನೀತಿ ಸಾಮಾನ್ಯನಾಮಾನುಕ್ತ್ವಾಽಽಪ ಇತಿ ವಿಶೇಷನಾಮಕಥನಾದಪಾಮೇವ ಸಹಗತಿರಿತಿ ನ ವಾಚ್ಯಂ || (೨) ತ್ರ್ಯಾತ್ಮಕತ್ವಾದಪಾಮರ್ಥತಃ ಸರ್ವಭೂತಾನಾಂ ಗತಿಪ್ರಾಪ್ತೇಃ || ೨ ||

ಅ || (೧)ಜೀವರು ಜನನಕ್ಕೆಬರುವಾಗ ಪಂಚಾಹುತಿಗಳ ಮಧ್ಯದಲ್ಲಿ ಸ್ತ್ರೀಯಲ್ಲಿ ರೇತೋರೂಪಆಹುತಿಯನ್ನು ಕೊಡುವಾಗ ಜಲದಿಂದ ಉಪಲಕ್ಷಿತನಾದ ಜೀವನು ಪುರುಷನೆಂದು ಹೆಸರುಳ್ಳವನಾಗುತ್ತಾನೆ, ಎನ್ನುವಲ್ಲಿ ಭೂತಾನಿ ಎಂದು ಸಾಮಾನ್ಯ ನಾಮವನ್ನು ಹೇಳದೆ ಆಪಃ ಎಂದು ವಿಶೇಷ ನಾಮವನ್ನು ಹೇಳಿದುದರಿಂದ ಜಲರೂಪ ಭೂತವೇ ಜೀವನೊಟ್ಟಿಗೆ ಹೋಗುವುದು. (ಸಮಸ್ತ ಭೂತಗಳು ಜೀವನೊಂದಿಗೆ ಹೋಗುವುದಿಲ್ಲ.) (ಅಂತೂ ಶ್ರುತಿಯಲ್ಲಿ ಆಪಃ ಎಂದು ಅನ್ಯಥಾ ನಾಮ (ಸಾಮಾನ್ಯನಾಮಕ್ಕಿಂತ ವಿಶೇಷ ನಾಮ

ವನ್ನು ಹೇಳಿದುದರಿಂದ ಜೀವನಿಗೆ ಸರ್ವಭೂತಗಳ ಸಂಬಂಧವಿಲ್ಲದಿರುವುದರಿಂದ ಜಲರೂಪವಾದ ಒಂದು ಭೂತವು ಶರೀರಾರಂಭಕವಾಗಲಾರದು. ಆದಕಾರಣ ಜೀವನಿಗೆ ಮರಣವಾಗುವ ಕಾಲದಲ್ಲಿಯೇ ಮೋಕ್ಷವು ಸಿದ್ಧಿಸುವ ಪ್ರಯುಕ್ತ ವೈರಾಗ್ಯಾದಿಗಳು ವ್ಯರ್ಥವೇ,) ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) ಏಕೆಂದರೆ ಅರ್ಥತೋಭವಃ=(ಸಮಸ್ತ ಭೂತಗಳಿಗೂ ಅರ್ಥಾತ್ ಪ್ರಾಪ್ತಿಯು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಜಲವು ಭೂತತ್ರಯ ಸ್ವರೂಪವಾಗಿರುವುದರಿಂದ ಅರ್ಥಾತ್ ಸಮಸ್ತ ಭೂತಗಳೂ ಜೀವನ ಒಟ್ಟಿಗೆ ಹೋಗುತ್ತವೆಂದು ಸಿದ್ಧವಾಗುತ್ತದೆ. (ಅಂತೂ ಸಮಸ್ತ ಭೂತಗಳಿಗೂ ಜೀವನೊಂದಿಗೆ ಗಮನವು ಅರ್ಥಾತ್ ಪ್ರಾಪ್ತವಾಗುವುದರಿಂದ ಕೇವಲ ಮರಣವೇ ಮುಕ್ತಿಯಾಗದಿರುವುದರಿಂದ ವೈರಾಗ್ಯಾದಿಗಳನ್ನು ಅವಶ್ಯವಾಗಿ ಸಂಪಾದಿಸಲೇಬೇಕು) ॥ ೨ ॥

೩ನೇ ಪ್ರಾಣಗತ್ಯಧಿಕರಣದಲ್ಲಿ ಸಾಧಕಬಾಧಕ ಪ್ರಮಾಣವಿಲ್ಲದಿರುವುದರಿಂದ ಭೂತಗಳಿಗೆ ಜೀವರಿಂದ ಕೂಡಿ ಗಮನ ಗಮನಾಭಾವಗಳು ಕೂಡುವುದರಿಂದ ಮರಣಕಾಲದಲ್ಲಿ ಭೂತಗಳು ಜೀವರಿಂದ ಕೂಡಿ ಹೋಗುತ್ತವೋ ಇಲ್ಲವೋ ಎಂದು ಸಂಶಯವು ಬಂದರೆ ಹೋಗುವುದಿಲ್ಲ ಎಂದು ಪೂರ್ವಪಕ್ಷವು. ಅದರಲ್ಲಿ ಸಹಾಭಾವಃ=(ಜೀವರಿಂದ ಕೂಡಿ ಗಮನೋಕ್ತಿಯಿಲ್ಲದಿರುವುದು) ಎನ್ನುವ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ಭೂತಾನಿ ಗಚ್ಛಂತೀತಿ ಸಹೈವಾನುಕ್ತೇಸ್ತದಭಾವಃ । (೨) ಪ್ರಾಣಗತೇರುಪಪತ್ತಿತ ಉಕ್ತತ್ವಾತ್[3] ॥ ೩ ॥

ಅ ॥ (೧) ಪಂಚಭೂತಗಳು ಜೀವರಿಂದ ಕೂಡಿಕೊಂಡೇ ಹೋಗಿಯೇ ಹೋಗುತ್ತವೆ, ಎಂದು ಹೇಳದಿರುವುದರಿಂದ ಭೂತಗಳಿಗೆ ಜೀವರಿಂದ ಕೂಡಿಕೊಂಡು ಗಮನವಿಲ್ಲ. (ಏವಂಚ ಭೂತಗಳು ಜೀವರಿಂದ ಕೂಡಿ ಹೋಗುತ್ತವೆಂದು ಹೇಳದಿರುವುದರಿಂದ ಭೂತಗಳಿಗೆ ಜೀವರಿಂದ ಕೂಡಿ ಗಮನವಿಲ್ಲ) ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಉಪಪತ್ತಿಃ= (ಪ್ರಾಣಗತಿರೂಪವಾದ ಉಪಪತ್ತಿಯು) ಎಂದು ಹೇಳಿದ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಾಣಗತಿರೂಪವಾದ ಉಪಪತ್ತಿಯ ದೆಶೆಯಿಂದ ಜೀವರಿಂದ ಕೂಡಿ ಭೂತಗಳ ಗತಿಯು ಸ್ವಭಾವತಃ ಸಿದ್ಧವಾಗಿದೆ. (ಹೇಗೆಂದರೆ—'ಯತ್ರ ವಾವ ಭೂತಾನಿ ತತ್ರ ಕರಣಾನಿ । ಎನ್ನುವ ಶ್ರುತಿಯ ದೆಶೆಯಿಂದ ಭೂತಗಳಿಗೆ ಇಂದ್ರಿಯಗಳಿಂದ ವ್ಯಾಪ್ತಿಯಿದೆ. (ತಥಾ ಚ ಭೂತಗಳಿಂದ ವ್ಯಾಪ್ತಗಳಾದ ಇಂದ್ರಿಯಗಳಿಗೆ ಜೀವನೊಂದಿಗೆ ಗಮನವಿದ್ದ ಪ್ರಯುಕ್ತ ಭೂತಗಳಿಗೆ ಗಮನವೂ ಯುಕ್ತಿಯಿಂದ ಉಕ್ತವೇ ಆಯ್ತು. ವ್ಯಾಪ್ತಗಳಾದ ೨ ವಸ್ತುಗಳಲ್ಲಿ ಒಂದು ಹೋಗುವಾಗ ಇನ್ನೊಂದು ಹೋಗುವುದಿಲ್ಲವೆಂಬುವುದು ಕೂಡುವುದಿಲ್ಲ. ಆದಕಾರಣ ಸಮವ್ಯಾಪಕವಾದ ಪ್ರಾಣಗತಿಯನ್ನು ಹೇಳಿದುದರಿಂದ ತದ್ವ್ಯಾಪ್ಯಗಳಾದ ಭೂತಗಳಿಗೂ ಜೀವನಿಂದೊಡಗೂಡಿ ಗಮನವಿದೆ. ಏವಂಚ ಭೂತಾನಿ ಜೀವೇನ ಸಹ ಗಮನವಂತಿ ತತ್ಸಹಗಂತೃಪ್ರಾಣಾವಿನಾಭೂತತ್ವಾತ್ ಯದ್ಯೇನ ಸಹಗಂತ್ರಾಽವಿನಾಭೂತಂ ತತ್ತೇನ ಸಹ ಗಚ್ಛತಿ ಯಥಾ ರಾಜ್ಞಾ ಸಹ ಗಂತೃಮಾತ್ಯಾವಿನಾಭೂತಭೃತ್ಯಃ, ಭೂತಗಳು ಜೀವರಿಂದೊಡಗೂಡಿ ಗಮನವುಳ್ಳವುಗಳು, ಭೂತಗಳೊಂದಿಗೆ ಇರುವ ಇಂದ್ರಿಯಗಳಿಂದ ವ್ಯಾಪ್ತಗಳಾದ ಪ್ರಯುಕ್ತ, ಯಾವುದು ಯಾವುದರಿಂದ ಕೂಡಿ ವ್ಯಾಪ್ತವಾಗಿದೆಯೋ ಅದು ಅದರಿಂದ ಕೂಡಿಕೊಂಡು ಹೋಗುತ್ತದೆ. ರಾಜನಿಂದ ಕೂಡಿಕೊಂಡು ಹೋಗತಕ್ಕ ಮಂತ್ರಿಯಿಂದ ವ್ಯಾಪ್ತನಾದಭೃತ್ಯನಂತೆ, ಏವಂಚ ಈ ಯುಕ್ತಿಯ ದೆಶೆಯಿಂದ ಭೂತಗಳ ಗತಿಯು ಸಿದ್ಧಿಸುವ ಪ್ರಯುಕ್ತ ಹಿಂದೆ ಹೇಳಿದ್ದು ಯುಕ್ತವು) ॥ ೩ ॥

೪ನೇ ಅಗ್ನ್ಯಧಿಕರಣದಲ್ಲಿ ನಿರ್ಣಾಯಕ ಪ್ರಮಾಣವಿಲ್ಲದಿರುವುದರಿಂದ ಮರಣಕಾಲದಲ್ಲಿ ಇಂದ್ರಿಯಗಳು ಜೀವನಿಂದ ಕೂಡಿ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಅದ

ಕಲ್ಲಿ ಅನ್ಯಥೋಕ್ತೇ:= ಜೀವರಿಂದ ಕೂಡಿಕೊಂಡು ಗತ್ಯುಕ್ತಿಗಿಂತ ವ್ಯತ್ಯಾಸವಾಗಿ ವಾಗಾದಿಗಳಿಗೆ ಅಗ್ನ್ಯಾದಿಗಳಲ್ಲಿ ಗಮನೋಕ್ತಿಯು ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚಾಗ್ನಿಂ ವಾಗಪ್ಯೇತೀತ್ಯಾದ್ಯನ್ಯಥೋಕ್ತೇಃ ಪ್ರಾಣಾನಾಂ ಚಾಸಹಗತಿಃ ॥**
**(೨) ದ್ವಿರೂಪತ್ವಾತ್ಪ್ರಾಣಾನಾಂ ॥ ೪ ॥**

ಅ ॥ (೧) ಅಗ್ನಿಂ ವಾಗಪ್ಯೇತಿ, ವಾತಂ ಪ್ರಾಣಶ್ಚಕ್ಷುರಾದಿತ್ಯಂ ಮನಶ್ಚಂದ್ರಮುಸಂ ದಿಶಃ ಶ್ರೋತ್ರಂ ಇತ್ಯಾದಿ ಶ್ರುತಿಗಳಲ್ಲಿ ವಾಗಾದೀಂದ್ರಿಯಗಳಿಗೆ ಜೀವರಿಂದೊಡಗೂಡಿ ಗಮನ ಹೇಳದೆ ಅಗ್ನ್ಯಾದಿಗಳನ್ನು ಹೊಂದುತ್ತಾರೆಂದು ಹೇಳಿದ ಕಾರಣ ಇಂದ್ರಿಯಗಳಿಗೂ ಇಂದ್ರಿಯಗಳಿಂದ ವ್ಯಾಪ್ತಗಳಾದ ಭೂತಗಳಿಗೂ ಜೀವರಿಂದೊಡಗೂಡಿ ಗಮನವಿಲ್ಲ.(ಆದಕಾರಣ ಮರಣವೇ ಮೋಕ್ಷವು.ವೈರಾಗ್ಯಾದಿಗಳು ವ್ಯರ್ಥವೇ) ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ದ್ವಿರೂಪತ್ವಂ=(ಇಂದ್ರಿಯಗಳಿಗೆ ಎರಡು ರೂಪಗಳಿರುವಿಕೆಯು) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಇಂದ್ರಿಯಗಳಿಗೆ ಎರಡು ರೂಪಗಳಿವೆ. (ಅಂದರೆ ಪುರುಷಸ್ಯ ವ್ಯತೌ ಬ್ರಹ್ಮನ್ ಪ್ರಾಣಾ ಭಾಗಶ ಏವತು ।ಅಧಿದೈವಂ ಪ್ರಾಪ್ನುವಂತಿ ಭಾಗಶೋಽನುವ್ರಜಂತಿ ತಂ' ಎನ್ನುವ ಪ್ರಮಾಣ ಪ್ರಕಾರ ಇಂದ್ರಿಯಗಳು ಒಂದು ರೂಪದಿಂದ ಅಗ್ನ್ಯಾದಿ ದೇವತೆಗಳನ್ನು ಹೊಂದುತ್ತಾರೆ. ಇನ್ನೊಂದು ರೂಪದಿಂದ ಜೀವನೊಂದಿಗೆ ಇರುತ್ತಾರೆ. ಅಂತೂ ಇಂದ್ರಿಯಗಳಿಗೆ ೨ ರೂಪಗಳಿದ್ದ ಕಾರಣ ಒಂದು ರೂಪದಿಂದ ಜೀವನೊಂದಿಗೆ ಗಮನವಿದ್ದ ಪ್ರಯುಕ್ತ ಇಂದ್ರಿಯಗಳಿಂದ ವ್ಯಾಪ್ತಗಳಾದ ಭೂತಗಳಿಗೂ ಜೀವರಿಂದ ಸಹಗಮನವಿದೆ. ಆದುದರಿಂದ ವೈರಾಗ್ಯಾದಿಗಳಿಗೆ ವೈಯರ್ಥ್ಯವಿಲ್ಲ.) ॥ ೪ ॥

ಇನೇ ಪ್ರಥಮೇ ಶ್ರವಣಾಧಿಕರಣದಲ್ಲಿ ಮರಣಕಾಲದಲ್ಲಿ ಜೀವರಿಂದೊಡಗೂಡಿ ಗಮನವುಳ್ಳ ಇಂದ್ರಿಯಗಳೂ ಸಹಗಮನವಿಲ್ಲದಿರುವ ಅನೇಕ ವಸ್ತುಗಳೂ ದೃಷ್ಟವಾಗಿರುವುದರಿಂದ ಭೂತಗಳು ಜೀವರಿಂದೊಡಗೂಡಿ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಅದರಲ್ಲಿ **ಅವಿಶೇಷಃ=** (ವಿಶೇಷೋಕ್ತಿಯಿಲ್ಲದಿರುವಿಕೆ) ಎನ್ನುವಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ಪ್ರಥಮತೋ ಭೂತಾನಿ ಜುಹ್ವತೀತಿ ವಿಶೇಷಾನುಕ್ತೇರ್ಭೂತಾನಾಮ ಸಹಗತಿಃ । (೨) ಭೂತಾನಿ ಜುಹ್ವತೀತ್ಯುಪಕ್ರಮಾದಪಿ 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತ್ಯುಪಸಂಹಾರಸ್ಯಾಧಿಕ್ಯಾತ್ ತದನುಸಾರೇಣೋಪಕ್ರಮೋಕ್ತಶ್ರದ್ಧಾಶಬ್ದಸ್ಯಾಪಿ ತಾ ಏವಾರ್ಥ ಇತ್ಯಾಪತ್ತೇಃ । (೩) ಉಪಕ್ರಮವಿರೋಧೇನೋಪಸಂಹಾರಾನುಪಪತ್ತೇಃ । ಉಪಕ್ರಮಪ್ರಾಮಾಣ್ಯಾರ್ಥಮೇವೋಪಸಂಹಾರಾನುಸಾರಿತ್ವಮಂಗೀಕಾರ್ಯಂ । ವ್ಯಾಖ್ಯಾನಸ್ಯ ಪಶ್ಚಾತ್ತನತ್ವನಿಯಮಾತ್ । ಉಪಕ್ರಮಾನುಸಾರಿತ್ವನಿಯಮೇಽಪ್ಯುಪಸಂಹಾರಸ್ಯೋಪಸಂಹಾರೇಣೈವೋಪಕ್ರಮಾರ್ಥೋ ಜ್ಞಾಯತೇ ॥ ೫ ॥**

ಅ ॥ (೧) ಮರಣಕಾಲದಲ್ಲಿ ಭೂತಗಳಿಗೆ ಜೀವನೊಂದಿಗೆ ಗಮನವಿದ್ದರೆ 'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' ಎನ್ನುವ ಉಪಕ್ರಮ ವಾಕ್ಯದಲ್ಲಿ ದ್ಯು, ಪರ್ಜನ್ಯ,ಧರಾ, ಪುಂ, ಸ್ತ್ರೀ, ಎಂಬ ೫ ಅಗ್ನಿಗಳ ಮಧ್ಯದಲ್ಲಿ ದ್ಯು ಎನ್ನುವ ಪ್ರಥಮಾಗ್ನಿಯಲ್ಲಿ ಶ್ರದ್ಧೆಯಿಂದ ಯಜ್ಞಮಾಡಿದ ಉತ್ಕ್ರಾಂತನಾದ

ಪುರುಷನಿಗೆ 'ಶ್ರದ್ಧಾಂ ಜುಹ್ವತಿ' ಎಂದು ಶ್ರದ್ಧಾ ಸಮೇತ ಹೋಮವು ಶ್ರುತವಾದ ಹಾಗೆ ಉಪಕ್ರಮದಲ್ಲಿ ಪ್ರಥಮಾಗ್ನಿಯಲ್ಲಿ 'ಭೂತಾನಿ ಜುಹ್ವತಿ' ಎಂದು ವಿಶೇಷೋಕ್ತಿಯು ಇಲ್ಲದಿರುವುದರಿಂದ ಭೂತಗಳಿಗೆ ಜೀವನೊಂದಿಗೆ ಸಹಗಮನವಿಲ್ಲ. ಆದಕಾರಣ ಮರಣವೇ ಮೋಕ್ಷವಾದಪ್ರಯುಕ್ತ ವೈರಾಗ್ಯಾದಿಗಳು ವ್ಯರ್ಥವು, ಎಂದರೆ—ಹಾಗೆ ಹೇಳಕೂಡದು. (ಏಕೆಂದರೆ ಆಧಿಕ್ಯಂ (ಆಪಃ ಪುರುಷವಚಸೋ ಭವಂತಿ ಎಂಬ ಉಪಸಂಹಾರದ ವಾಕ್ಯಕ್ಕೆ ಅಧಿಕ್ಯವು) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಶ್ರದ್ಧಾಂ ಜುಹ್ವತಿ' ಎಂಬ ಉಪಕ್ರಮ ವಾಕ್ಯಕ್ಕಿಂತಲೂ ಇತಿ ತು ಪಂಚಮ್ಯಾಮಾಹುತಾವಾಪಃ ಪುರುವಚಸೋ ಭವಂತಿ' ಸ್ತ್ರೀ ಎನ್ನುವ ಐನೇ ಅಗ್ನಿಯಲ್ಲಿ ರೇತಸ್ಸನ್ನು ಹೋಮಿಸಿದರೆ ಜಲಗಳಿಂದುಪಲಕ್ಷಿತನಾದ ಜೀವನು ಪುರುಷನೆಂದು ಹೆಸರುಳ್ಳವನಾಗುತ್ತಾನೆ, ಎನ್ನುವ ಉಪಸಂಹಾರವಾಕ್ಯವು ಪ್ರಬಲವಾಗಿರುವುದರಿಂದ ಅದನ್ನು ಅನುಸರಿಸಿ ಉಪಕ್ರಮದಲ್ಲಿ ಹೇಳಿದ ಶ್ರದ್ಧಾಶಬ್ದಕ್ಕೆ ಅಜಹಲ್ಲಕ್ಷಣಯಾ ಶ್ರದ್ಧೆಯಿಂದಲೂ ಜಲದಿಂದಲೂ ವಿಶಿಷ್ಟನಾದ ಜೀವನು ಎಂಬ ಅರ್ಥವು ವಿವಕ್ಷಿತವು. (2) ಉಪಸಂಹಾರ ವಾಕ್ಯವನ್ನನುಸರಿಸಿ ಉಪಕ್ರಮವಾಕ್ಯಕ್ಕೆ ಅರ್ಥವನ್ನು ಕಲ್ಪಿಸಿದರೇನೇ ಉಪಕ್ರಮವಾಕ್ಯಕ್ಕಿಂತಲೂ ಶ್ರೇಷ್ಠವಾದ ಉಪಸಂಹಾರ ವಾಕ್ಯವು ಯುಕ್ತವಾಗುವುದು. ಇಲ್ಲವಾದರೆ ಕೂಡದೆ ಹೋಗುವುದು. ಅಥವಾ ಉಪಕ್ರಮವಾಕ್ಯವು ದುರ್ಬಲವು. ಅದರ ವಿರೋಧವು ಬರುವುದರಿಂದ ಪ್ರಬಲವಾದ ಉಪಸಂಹಾರ ವಾಕ್ಯಕ್ಕೆ ಅರ್ಥಾಂತರವನ್ನು ಕಲ್ಪಿಸುವುದು ಅಯುಕ್ತವು. (ಉಪಸಂಹಾರ ವಾಕ್ಯವು ಉಪಕ್ರಮ ವಾಕ್ಯಕ್ಕೆ ವ್ಯಾಖ್ಯಾನ ರೂಪವಾಗಿರುವುದರಿಂದ ಪ್ರಬಲವಾದ ಕಾರಣ) ಉಪಕ್ರಮವಾಕ್ಯಕ್ಕೆ ಪ್ರಾಮಾಣ್ಯವು ಕೂಡುವುದಕ್ಕಾಗಿಯೇ ಉಪಸಂಹಾರವಾಕ್ಯದ ಅರ್ಥದಂತೆ ಉಪಕ್ರಮವಾಕ್ಯಕ್ಕೂ ಅರ್ಥವನ್ನ ಅವಶ್ಯವಾಗಿ ಅಂಗೀಕರಿಸಬೇಕು. (ಉಪಕ್ರಮ ವಾಕ್ಯವೇ ವ್ಯಾಖ್ಯಾನರೂಪವಾಗಲಿ, ಎಂದು ಕಲ್ಪಿಸ ಕೂಡದು.) ಯಾವುದು ವ್ಯಾಖ್ಯಾನವೋ ಅದು ಪಶ್ಚಾತ್ತನವೇ. (ಮೇಲಿನದ್ದೇ) ಎಂದು ವ್ಯಾಪ್ತಿಯು. ಆದಕಾರಣ ಪರಿಶೇಷಾತ್ ಪಶ್ಚಾತ್ತನವಾದ ಉಪಸಂಹಾರ ವಾಕ್ಯವೇ ವ್ಯಾಖ್ಯಾನ ರೂಪವೆಂದು ಕಲ್ಪಿಸಬೇಕು) (ಉಪಕ್ರಮ (ಪ್ರಕರಣದ ಆದಿಭಾಗ) ವಾಕ್ಯವೇ ಉಪಸಂಹಾರ ವಾಕ್ಯಕ್ಕಿಂತ ಪ್ರಬಲವೆಂದು ಅಂಗೀಕರಿಸಬೇಕು. ಏಕೆಂದರೆ ಉಪಕ್ರಮ ವಾಕ್ಯವಿಲ್ಲವಾದರೆ ಉಪಸಂಹಾರ (ಪ್ರಕರಣದ ಅಂತಿಮ ಭಾಗ)ಸ್ವರೂಪನಿಷ್ಪತ್ತಿಯೇ ಆಗದಿರುವುದರಿಂದ ಉಪಸಂಹಾರವು ಉಪಜೀವಕವು. 'ಯೇನ ವಿನಾ ಯಸ್ಯಾನುತ್ಥಾನಂ' ತತ್ತಸ್ಯೋಪಜೀವ್ಯಂ । ಉಪಕ್ರಮ ವಾಕ್ಯವು ಉಪಜೀವ್ಯವು. ಉಪಕ್ರಮವಿಲ್ಲದಿದ್ದಲ್ಲಿ ಅದಕ್ಕೆ ವ್ಯಾಖ್ಯಾನ ರೂಪವಾದ ಉಪಸಂಹಾರವೇ ಕೂಡಲಿಕ್ಕಿಲ್ಲವಷ್ಟೇ. ಮೂಲಗ್ರಂಥವಿಲ್ಲದಿದ್ದರೆ ವ್ಯಾಖ್ಯಾನಕ್ಕೆ ಪ್ರಸಕ್ತಿಯೇ ಇಲ್ಲ ಎಂದರೆ) ಉಪಸಂಹಾರವಾಕ್ಯವು ಉಪಕ್ರಮವನ್ನಪೇಕ್ಷಿಸಿಯೇ ಇದೆ, ಎಂದು ನಿಯಮವಿದ್ದರೂ (ಅಂದರೆ ಉಪಕ್ರಮ ವಾಕ್ಯವಿಲ್ಲದೆ ಉಪಸಂಹಾರ ವಾಕ್ಯಕ್ಕೆ) ಪ್ರವೃತ್ತಿಯಿಲ್ಲದಿದ್ದರೂ ಪ್ರವೃತ್ತವಾದ ಉಪಸಂಹಾರ ವಾಕ್ಯದ ಅರ್ಥವನ್ನು ನೋಡಿಕೊಂಡು ಉಪಕ್ರಮವಾಕ್ಯಕ್ಕೆ ಅರ್ಥವನ್ನು ಮಾಡಬೇಕು. ವ್ಯಾಖ್ಯಾನವನ್ನು ನೋಡಿಕೊಂಡೇ ವ್ಯಾಖ್ಯೇಯವಾದ ಮೂಲಕ್ಕೆ ಅರ್ಥಮಾಡಬೇಕೆಂಬುವುದು ಸರ್ವಜನರಿಗೂ ಸಿದ್ಧವಾದ ವಿಷಯವು) ಅಂತೂ ಉಪಕ್ರಮವಾಕ್ಯದ ಅಪೇಕ್ಷೆಯು ಆವಶ್ಯಕವೆಂದು ನಿಯಮವಿದ್ದರೂ ಅರ್ಥ ವಿಚಾರ ಸಮಯದಲ್ಲಿ ಉಪಸಂಹಾರ ವಾಕ್ಯವನ್ನನುಸರಿಸಿಯೇ ಉಪಕ್ರಮವಾಕ್ಯದ ಅರ್ಥವನ್ನು ತಿಳಿಯಬೇಕು. (ಆದಕಾರಣ ಉಪಕ್ರಮ ವಾಕ್ಯಕಿಂತ ಉಪಸಂಹಾರವಾಕ್ಯವು ಪ್ರಬಲವಾದ ಕಾರಣ ಅದನ್ನನುಸರಿಸಿ ಉಪಕ್ರಮವಾಕ್ಯದಲ್ಲಿಯೂ ಜೀವರೊಂದಿಗೆ ಭೂತಗಳಿಗೆ ಗತಿಯು ಸಿದ್ಧಿಸುವ ಪ್ರಯುಕ್ತ ವೈರಾಗ್ಯವು ವ್ಯರ್ಥವಲ್ಲ.) ॥ ೫ ॥

೬ನೇ ಅಶ್ರುತತ್ವಾಧಿಕರಣದಲ್ಲಿ ಮರಣಕಾಲದಲ್ಲಿ ಭೂತಗಳು ಜೀವರಿಂದ ಕೂಡಿಕೊಂಡು ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ ಹೋಗುವುದಿಲ್ಲ ಎಂದು ಪೂರ್ವಪಕ್ಷವು. ಅದರಲ್ಲಿ ಅವಿಶೇಷಃ ಎನ್ನುವ ನ್ಯಾಯವನ್ನೇ ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಾರೆ.

ಮೂ || (೧) ನ ಚ ವಿಶೇಷಾಶ್ರವಣನಿಯಮ ಏವ ಬಲವಾನ್ || (೨) ಸ್ಥಾನಾಂತರಶ್ರವಣಸ್ಯಾಪ್ಯೇತದನುರೂಪತ್ವಾತ್ | (೩) ಆರ್ಥಿಕ ಶ್ರವಣಮಪ್ಯನುಕ್ತಿಂ ಬಾಧತ ಏವ| ಕಿಮುತ ಸ್ಥಾನಾಂತರಗತಂ ಸ್ಪಷ್ಟಶ್ರವಣಮಿತಿ ಕೈಮುತ್ಯಾರ್ಥಮೇವೇಷ್ಟಾದಿಕಾರಿಣಾಂ ಪ್ರತೀತೇರಿತಿ ಪರಿಹಾರಾಂತರಮುಕ್ತಂ || ೬ ||

ಅ || (೧) ಯತ್ರಾಸ್ಯ ಪುರುಷಸ್ಯ ಮೃತಸ್ಯ ವಾಗಗ್ನಿಮಪ್ಯೇತಿ ಎಂದು ವಾಗಾದೀಂದ್ರಿಯಗಳು ಅಗ್ನ್ಯಾದಿದೇವತೆಗಳನ್ನು ಹೊಂದುತ್ತವೆ ಎಂದು ಹೇಳತಕ್ಕ ಪ್ರತ್ಯಕ್ಷ ಶ್ರುತಿಯಂತೆ ಭೂತಗಳು ಜೀವರಿಂದ ಕೂಡಿಕೊಂಡು ಹೋಗುತ್ತವೆ ಎಂದು ಹೇಳತಕ್ಕ ಪ್ರತ್ಯಕ್ಷ ಶ್ರುತಿಯು ಇಲ್ಲದಿರುವುದರಿಂದ ವಿಶೇಷಾಶ್ರವಣ ನಿಯಮವೇ (ಪ್ರತ್ಯಕ್ಷ ಶ್ರುತಿಯು ಇಲ್ಲದಿರುವುದೇ) ಬಲವು. (ಏವಂಚ ವಿಶೇಷಾಶ್ರವಣರೂಪವಾದ ಅವಿಶೇಷ ದೆಶೆಯಿಂದ ಭೂತಗಳಿಗೆ ಜೀವರೊಂದಿಗೆ ಗಮನವಿಲ್ಲ. ಆದುದರಿಂದ ವೈರಾಗ್ಯಾದಿಗಳು ವ್ಯರ್ಥಗಳೇ.) ಎಂಬ ಪೂರ್ವಪಕ್ಷವು ಯುಕ್ತವಲ್ಲ, (೨) (ಏಕೆಂದರೆ ಅನುರೂಪತಾ=(ಸ್ಥಾನಾಂತರದಲ್ಲಿ ಜೀವರಿಂದ ಕೂಡಿಕೊಂಡು ಭೂತಗಳ ಗತಿಶ್ರವಣಕ್ಕೂ ಆರ್ಥಿಕ ಶ್ರವಣಾನುಕೂಲತ್ವವು) ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತೈರೇವ ಗಚ್ಛತಿ, | ಇತ್ಯಾದಿ ಕೌಂಠರವ್ಯ ಶ್ರುತಿಯಲ್ಲಿ ಸ್ಪಷ್ಟವಾಗಿ ಭೂತಗಳಿಂದ ಕೂಡಿಕೊಂಡೇ ಜೀವನು ಹೋಗುತ್ತಾನೆಂದು ಭೂತಗಳಿಗೆ ಸಹಗಮನವು ಶ್ರುತವಾದ ಪ್ರಯುಕ್ತ ಸ್ಥಾನಾಂತರದಲ್ಲಿ ಶ್ರುತವಾದದ್ದು ಸಮಾಖ್ಯಾರೂಪವಾಗಿ ಈ ಅರ್ಥವನ್ನು ನಿರ್ಣಯಿಸಿಕೊಡುವುದರಿಂದ ಅನುಕೂಲವಾಗಿದೆ. (೩) ಆರ್ಥಿಕ ಶ್ರವಣವೂ (ಭೂತಗಳಿಂದ ವ್ಯಾಪ್ತಗಳಾದ ಇಂದ್ರಿಯಗಳು ಒಟ್ಟಿಗೆ ಹೋದಾಗ ಭೂತಗಳ ಸಹಗಮನವೂ) ಕೂಡ ಹೇಳಿದಂತೆ ಆಯಿತು. ಆದಕಾರಣ ಹೇಳಲಿಲ್ಲವೆಂಬ ಶಂಕೆಯು ನಿರಸ್ತವಾಯ್ತು. ವಿಶೇಷ ಶ್ರವಣದಂತೆಯೇ ಅನುಕ್ತಿಯನ್ನು ನಿಶ್ಚಯವಾಗಿಯೂ ಬಾಧಿಸುತ್ತದೆ. ಹೀಗೆ ಇರುವಾಗ ಸ್ಥಾನಾಂತರದಲ್ಲಿ ಸ್ಪಷ್ಟವಾಗಿ ಹೇಳಿದ್ದು ಇರುವಾಗ ಸಹ ಗಮನವು ಸುತರಾಂ ಸಿದ್ಧ, ಎಂದು ಕೈಮುತ್ಯವನ್ನು ತೋರಿಸುವುದಕ್ಕಾಗಿ ಕೌಂಠರವ್ಯ ಶ್ರುತಿಯಲ್ಲಿ ಇಷ್ಟಾದಿಕಾರಿಣಾಂ ಪ್ರತೀತೇಃ ಎಂದು ಸೂತ್ರಕಾರರು ಪರಿಹಾರಾಂತರವನ್ನು ಹೇಳಿರುತ್ತಾರೆ. (ಇಷ್ಟಾದಿಕಾರಿಣಾಂ ಎಂದು ಹೇಳಿದ್ದು ಆಚಾರ್ಯರಿಗೆ ಕರ್ಮಕಾಂಡದಲ್ಲಿಯೂ ನೈಪುಣ್ಯ ಎದೆ ಎಂದು ತೋರಿಸುವುದಕ್ಕಾಗಿಯೇ. ಹೀಗೆ ಅನುರೂಪತ್ವವೇ ಭೂತಗಳಿಗೆ ಸಹಗಮನವಿದೆ ಎಂಬ ಸಿದ್ಧಾಂತವನ್ನು ಸ್ಥಾಪಿಸುತ್ತದೆ. ಆದಕಾರಣ ವೈರಾಗ್ಯಾದಿಗಳಿಗೆ ವೈಯರ್ಥ್ಯವಿಲ್ಲ. || ೬ ||

೭ನೇಭಾಕ್ತಾಧಿಕರಣದಲ್ಲಿ ಫಲಕ್ಕಾಗಿ ಅವಶ್ಯವಾಗಿ ಅನುಷ್ಠೇಯ ಅನನುಷ್ಠೇಯ ಸಾಧನಗಳು ಕಂಡುದರಿಂದ ಮೋಕ್ಷೇಚ್ಛುವು ವೈರಾಗ್ಯ ಸಾಧನವನ್ನು ಅವಶ್ಯವಾಗಿ ಮಾಡಬೇಕೋ ಬೇಡವೋ, ಎಂದು ಸಂದೇಹವು ಬಂದರೆ ಅವಶ್ಯವಾಗಿ ಮಾಡಬೇಕಾಗಿಲ್ಲ, ಎಂದು ಪೂರ್ವಪಕ್ಷವು. ಅದರಲ್ಲಿ ವಿಶೇಷ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || ನ ಚಾಪಾಮ ಸೋಮಮಮೃತಾ ಅಭೂಮೇತಿ ವಿಶೇಷತ ಏವ ಮೋಕ್ಷಫಲಸ್ಯಾಪ್ಯುಕ್ತೇಃ ಕರ್ಮೈವ ತತ್ಸಾಧನಮಿತಿ ಮಂತವ್ಯಂ || (೨) 'ನಾನ್ಯಃ ಪಂಥಾ ಅಯನಾಯ ವಿದ್ಯತೇ' (೩) 'ಸ ಯ ಆತ್ಮಾನಮೇವ ಲೋಕಮುಪಾಸ್ತೇ' (೪) ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯ ಇತ್ಯಾದಿ ಶ್ರುತಿಬಲಾದಮೃತ ಶಬ್ದಸ್ಯ ಯಥಾಯೋಗ್ಯಮೇವಾರ್ಥಕಲ್ಪನೋಪಪತ್ತೇಃ || ೭ ||

ಅ ॥ (೧) ಅಪಾಮ ಸೋಮಂ ಎಂಬ ಶ್ರುತಿಯಲ್ಲಿ ಅಮೃತಾಃ=ಮುಕ್ತರು, ಅಭೂಮ=ಆದೆವು ಎಂದು ಕರ್ಮದಿಂದ ವಿಶೇಷಾಕಾರವಾಗಿಯೇ ಮೋಕ್ಷರೂಪಫಲವನ್ನು ಹೇಳಿದರಿಂದ ಸ್ವರ್ಗಾದಿಗಳಂತೆಯೆ, ಮೋಕ್ಷಕ್ಕೂ ಕೂಡ ಜ್ಞಾನವಿಲ್ಲದೇನೇ ಕರ್ಮವೇ ಸಾಧನವು ಎನ್ನುವ ವಿಶೇಷವೇ ಪೂರ್ವಪಕ್ಷವನ್ನು ಹೊಂದಿಸಿ ಕೊಡುತ್ತದೆ. ಏವಂಚ 'ಅಪಾಮ ಸೋಮಂ' ಎಂಬ ವಚನ ವಿಶೇಷದಿಂದ ಕರ್ಮವೇ ಮೋಕ್ಷಕ್ಕೆ ಸಾಧನವು. ವೈರಾಗ್ಯಾದಿಗಳು ವ್ಯರ್ಥವೇ, ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಯೋಗ್ಯತಾ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (1) ಮುಕ್ತಿಗೆ ಜ್ಞಾನಾತಿರಿಕ್ತವಾದ ಮಾರ್ಗವಿಲ್ಲ. (ಅಂದರೆ ಇದರಿಂದ ಸರ್ವಾತ್ಮನಾ ಕರ್ಮದಿಂದ ಸಾಕ್ಷಾತ್ತಾಗಿ ಸಂಸಾರ ನಿವೃತ್ತಿಯಾಗುವುದಿಲ್ಲ.) (ಅಮೃತ ಶಬ್ದಕ್ಕೆ ಆನಂದಾಭಿವ್ಯಕ್ತಿ ರೂಪಮುಕ್ತಿಯೆಂಬ ಅರ್ಥದಲ್ಲಿ ಶ್ರುತಿಯನ್ನು ಹೇಳುತ್ತಾರೆ.) (2) ಯಾವಾತನು ಶ್ರೀಪರಮಾತ್ಮನನ್ನೇ ಸರ್ವಾಶ್ರಯನನ್ನಾಗಿ ಉಪಾಸನೆ ಮಾಡುತ್ತಾನೋ ಆತನು(ಆನಂದಾವಿರ್ಭಾವ ರೂಪ ಮುಕ್ತಿಯನ್ನೇ ಹೊಂದುತ್ತಾನೆ) (೪)(ಸ್ವರ್ಗ ಎನ್ನುವುದು ಗೌಣಮೋಕ್ಷವೆನ್ನುವಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ.) ಇಂದ್ರ ಮನು ಆದಿತ್ಯರು ಇರುವ ಪರ್ಯಂತ (ಬಹು ಕಾಲದಲ್ಲಿ ಸ್ವರ್ಗರೂಪ ಅಮುಖ್ಯಮುಕ್ತಿಯಲ್ಲಿರುತ್ತಾನೆ.) ಆದಿಪದದಿಂದ 'ಕರ್ಮಣಾ ಜ್ಞಾನಮಾತನೋತಿ'=ಪರಂಪರಯಾ ಮೋಕ್ಷಕ್ಕೆ ಸಾಧನವಾದ ಜ್ಞಾನಕ್ಕೆ ಸಾಧನವಾದುದು ಕರ್ಮವು, ಇವು ಮೊದಲಾದ ಶ್ರುತಿಗಳ ಬಲದಿಂದ ಅಮೃತ ಶಬ್ದಕ್ಕೆ ಯಥಾಯೋಗ್ಯವಾಗಿಯೇ ಅರ್ಥವನ್ನು ಕಲ್ಪಿಸಬೇಕು. (ಅಂದರೆ ಸೋಮಯಾಗ ಮೊದಲಾದ ಕಾಮ್ಯ ಕರ್ಮದಿಂದುಂಟಾಗ ತಕ್ಕ ಅಮೃತತ್ವವೆಂದರೆ-ಬಹುಕಾಲದಲ್ಲಿ ಸ್ವರ್ಗದಲ್ಲಿ ಸುಖವನ್ನನುಭವಿಸಿ ಕೊಂಡಿರುವಿಕೆ. ಜ್ಞಾನೇಚ್ಛುವಾದ ಪುರುಷನು ಮಾಡತಕ್ಕ ಕರ್ಮದಿಂದುಂಟಾಗತಕ್ಕದ್ದು ಜ್ಞಾನದ್ವಾರಾ ಪರಂಪರೇಯಿಂದ ಮುಖ್ಯಾಮೃತತ್ವವು. ಜ್ಞಾನಿಯು ಮಾಡಿದ ಕರ್ಮದಿಂದುಂಟಾಗತಕ್ಕದ್ದು ಮುಕ್ತಿಗೆ ಸಾಧನವಾಗಿ ಭಗವಜ್ಜ್ಞಾನದಿಂದುಂಟಾಗತಕ್ಕ ಮೋಕ್ಷದಲ್ಲಿ ಆನಂದಾಭಿವೃದ್ಧಿರೂಪ ಅತಿಶಯರೂಪ ಅಮೃತತ್ವವು. ಹೀಗೆ ಯಥಾಯೋಗ್ಯವಾಗಿಯೇ ಅಮೃತ ಶಬ್ದಕ್ಕೆ ಅರ್ಥವನ್ನು ಕಲ್ಪಿಸಿಕೊಳ್ಳಬೇಕು ಸರ್ವಾತ್ಮನಾ ಕರ್ಮದಿಂದ ಸಾಕ್ಷಾತ್ ಸಂಸಾರನಿವೃತ್ತಿಯಾಗುವುದಿಲ್ಲ. ಆದುದರಿಂದ ವೈರಾಗ್ಯಾದಿಗಳನ್ನು ಸಂಪಾದಿಸದೆ ಮೋಕ್ಷವು ಸಿದ್ಧಿಸದಿರುವುದರಿಂದ ವೈರಾಗ್ಯಾದಿಗಳು ವ್ಯರ್ಥವಲ್ಲ ॥ ೭ ॥

ಅನೇ ಕೃತಾತ್ಯಯಾಧಿಕರಣದಲ್ಲಿ ಮೋಕ್ಷೇಚ್ಛುವು ವೈರಾಗ್ಯಾದಿಗಳನ್ನು ಮಾಡಬೇಕೋ, ಬೇಡವೋ ಎಂದು ಸಂದೇಹವು ಬಂದರೆ-ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷವು. ಅದರಲ್ಲಿ ಸಹಭಾವಃ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚಾನುಶಯಸ್ಯಾಪಿ ಸಹಭಾವಾತ್ಸ್ವರ್ಗ ಏವ ಫಲದತ್ವಂ॥ (೨)ಭುಕ್ತಶೇಷಾನುಶಯವಾನಿತ್ಯಾದಿ ವಚನಬಲಾದ್ಯಥಾಯೋಗ್ಯಮೇವ ಫಲದಾನೋಪಪತ್ತೇಃ ॥ ೮ ॥**

ಅ ॥ (೧) ಭುಕ್ತವಾದ ಕರ್ಮದ ಶೇಷಭೂತವಾದ ಕರ್ಮವು ಸ್ವರ್ಗಕ್ಕೆ ಹೋಗತಕ್ಕ ಜೀವನೊಂದಿಗೆ ಇರುವ ಪ್ರಯುಕ್ತ ಆ ಕರ್ಮವು ಸ್ವರ್ಗದಲ್ಲಿಯೇ ಫಲವನ್ನು ಕೊಡುತ್ತದೆ. (ಅಲ್ಲಿ ಕರ್ಮಾಂತರವನ್ನು ಮಾಡುವುದಿಲ್ಲ. ಕರ್ಮವಿಲ್ಲದಿದ್ದ ಮೇಲೆ ತನ್ಮೂಲಕ ಸಂಸಾರವು ತನ್ನಷ್ಟಕ್ಕೇನೇ ನಾಶವಾಗುವುದು. ಅಂತೂ ಸ್ವರ್ಗದಲ್ಲಿ ಸಕಲಕರ್ಮಗಳನ್ನು ಭೋಗಿಸಿದ ಮೇಲೆ ಕರ್ಮಕ್ಷಯರೂಪ ಮೋಕ್ಷವು ತನ್ನಷ್ಟಕ್ಕೇನೇ ಆಗುತ್ತದೆ. ಆದಕಾರಣ ಮೋಕ್ಷವನ್ನಿಚ್ಛಿಸುವವನು ವೈರಾಗ್ಯಾದಿಗಳನ್ನು ಮಾಡಬೇಕಾಗಿಲ್ಲ, ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಯೋಗ್ಯತಾ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಸ್ವರ್ಗದಿಂದ ಬರುವಾಗ ಕರ್ಮದ ಶೇಷವುಳ್ಳವನಾಗಿಯೇ ಬರುತ್ತಾನೆ, 'ಯತಃ ಶೇಷೇ

ಕೇದುಂ ಲೋಕಂ' ಇದು ಮೊದಲಾದ ಪ್ರಮಾಣಗಳ ದೆಶೆಯಿಂದ ಯಥಾಯೋಗ್ಯವಾಗಿಯೇ ಕರ್ಮವು ಫಲವನ್ನು ಕೊಡುತ್ತದೆ. ಕೆಲವು ಕರ್ಮವು ಒಟ್ಟಿಗೆ ಇದ್ದರೂ ಸಮಸ್ತಕರ್ಮಗಳು ನಾಶವಾಗುವುದಿಲ್ಲ. ವೈರಾಗ್ಯಾದಿಗಳು ಅವಶ್ಯಕವೇ ॥ ೮ ॥

೯ನೇ ಯಥೇತಾಧಿಕರಣದಲ್ಲಿ ಲೋಕದಲ್ಲಿ ಹೋದ ಮಾರ್ಗದಿಂದಲೂ ಮಾರ್ಗಾಂತರದಿಂದಲೂ ಬರುವಿಕೆಯು ಕಂಡಿರುವುದರಿಂದ ಭೂಲೋಕದಿಂದ ಸ್ವರ್ಗಕ್ಕೆ ಹೋದವನು ಹೋದ ಮಾರ್ಗದಿಂದಲೇ ಬರುತ್ತಾನೋ, ಬೇರೆ ಮಾರ್ಗದಿಂದಲೋ, ಎಂದು ಸಂದೇಹವು ಬಂದರೆ ಹೋದ ಮಾರ್ಗದಿಂದಲೇ ಎಂದು ಪೂರ್ವಪಕ್ಷವು. ಅದರಲ್ಲಿ ಸಹಭಾವಃ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ನ ಚ ಮಾರ್ಗಸ್ಯ ಸಹಭಾವಾದ್ಯಥಾಗತಮೇವಾಗಮನಮಿತಿ ನಿಯಮಃ(೨) ವಚನಬಲಾದ್ಯಥಾಯೋಗ್ಯಮೇವಾಗಮನೋಪಪತ್ತೇಃ ॥ ೯ ॥

ಅ ॥ (೧) ಅಲ್ಲಿಂದ ಬರುವ ಸಮಯದಲ್ಲಿಯೂ ಕರ್ಮಶೇಷವು ಒಟ್ಟಿಗೆ ಇದ್ದ ಪ್ರಯುಕ್ತವೂ ಹೋದ ಮಾರ್ಗದ ಅನುಭವ ಸಂಸ್ಕಾರವು ಇದ್ದ ಪ್ರಯುಕ್ತವೂ, ತಿಳಿದ ಮಾರ್ಗವನ್ನು ಬಿಟ್ಟು ತಿಳಿಯದಿರುವ ಮಾರ್ಗದಿಂದ ಬರಲಿಕ್ಕೆ ಪ್ರಯೋಜನವಿಲ್ಲದಿರುವುದರಿಂದಲೂ, ಹೋದ ಮಾರ್ಗವು ಮನಸ್ಸಿನಲ್ಲಿಯೇ ಇದ್ದ ಪ್ರಯುಕ್ತವೂ ಯಾವ ಮಾರ್ಗದಿಂದ ಹೋಗಿರುತ್ತಾನೋ ಅದೇ ಮಾರ್ಗದಿಂದ ಬರುತ್ತಾನೆ, ಎಂದು ನಿಯಮವು. (ಹೀಗೆ ಇಟ್ಟುಕೊಂಡರೆ ಸ್ವರ್ಗಫಲಕ್ಕೂ ಅತಿಕ್ಲೇಶ ಸಂಬಂಧವಿಲ್ಲದಿರುವುದರಿಂದ ವೈರಾಗ್ಯಾದಿಗಳು ವ್ಯರ್ಥವೇ ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ-ಯೋಗ್ಯತಾ ಎನ್ನುವ ಸಿದ್ಧಾಂತ ನ್ಯಾಯವನ್ನೇ ವಿವರಿಸುತ್ತಾರೆ.) ಧೂಮಾದಭ್ರಂ ಅಭ್ರಾದಾಕಾಶಂ ಆಕಾಶಾಚ್ಚಂದ್ರಲೋಕಂ, ಎನ್ನುವ ಶ್ರುತಿಯಿಂದ ಚಂದ್ರಲೋಕ ದೆಶೆಯಿಂದ ಆಕಾಶಕ್ಕೂ, ಹೀಗೆ ಹೋದ ಮಾರ್ಗದಿಂದಲೂ 'ಯಥೇತಮಾಕಾಶಮಾಕಾಶಾದ್ವಾಯುಂ, ಎನ್ನುವ ಶ್ರುತಿಯಿಂದ ಮಾರ್ಗಾಂತರದಿಂದಲೂ ಆಗಮನವು ಹೇಳಿರುತ್ತದೆ. ಮತ್ತು ಬರಲಿಕ್ಕೆ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಮಾರ್ಗದ ಸ್ಮರಣೆಯು ಆಗಮನಕ್ಕೆ ಉಪಯುಕ್ತವಾಗದಿರುವುದರಿಂದ ಶ್ರುತಿಯಲ್ಲಿ ಹೇಳಿದ ಪ್ರಕಾರ ಯೋಗ್ಯವಾದ ಮಾರ್ಗವನ್ನು ಅತಿಕ್ರಮಿಸದೇನೇ ಆಗಮನವು ಉಪಪನ್ನವಾಗುತ್ತದೆ. ಅಂದರೆ ಹೋದ ಮಾರ್ಗದಿಂದಲೇ ಬರುವುದೆಂದು ನಿಯಮವಿಲ್ಲ. ಮಾರ್ಗಾಂತರದಿಂದಲೂ ಬರುತ್ತಾನೆ. ಏವಂಚ ೨ ಮಾರ್ಗಗಳೂ ಯೋಗ್ಯವಾಗಿರುವುದರಿಂದ ಸ್ವರ್ಗದಿಂದ ಬರಲಿಕ್ಕೆ ಬಹು ಕ್ಲೇಶವಿರುವುದರಿಂದ ವೈರಾಗ್ಯಾದಿಗಳು ವ್ಯರ್ಥಗಳಲ್ಲ. ಅವಶ್ಯಕವೇ ॥ ೯ ॥

೧೦ನೇ ಚರಣಾಧಿಕರಣದಲ್ಲಿ ಗಮನ ಆಗಮನಗಳಿಗೆ ೨ ನಿಮಿತ್ತಗಳೂ ಒಟ್ಟಿಗೆ ಇರುವುದು ಕಂಡದ್ದರಿಂದ ಯಜ್ಞಾದಿಗಳು ಗಮನಾಗಮನಗಳಿಗೆ ಸಾಧನವೋ ಅಲ್ಲವೋ, ಎಂದು ಸಂದೇಹವು ಬಂದರೆ ಅಹುದೆಂದು ಪೂರ್ವಪಕ್ಷವು. ಅದರಲ್ಲಿಯೂ ಸಹಭಾವಃಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ॥(೧)ನ ಚೇಷ್ಟಾಪೂರ್ತೇ ದತ್ತಮಿತ್ಯುಪಾಸತೇ ಇತ್ಯುಪಶಬ್ದೇನೇಷ್ಟಾದಿಭಿರಾಚಾರಸ್ಯ ಸಹಪಾಠಾಚ್ಚರಣಫಲಂ ಪುನರಾವೃತ್ತಿಂ ಕರಣಫಲತ್ವೇನ ಭ್ರೂಮೋದ್ವದಂತೀತಿ ವಾಚ್ಯಂ। (೨) ನಾನ್ಯಃಪಂಥಾ ಇತ್ಯಾದಿ ವಚನಾದೇವೋಭಯೋರಪಿ ಚರಣಶಬ್ದೇನೈವೋಕ್ತೇಯೋಗ್ಯತ್ವಾತ್ ॥ ೧೦ ॥

ಅ ॥ (೧) (ಗಮನಾಗಮನಗಳು ಯಜ್ಞಾದಿ ಕರ್ಮಗಳ ಫಲವಲ್ಲ. ಮತ್ತೆ ರಮಣೀಯಚರಣಾಃ ಕಪೂಯಚರಣಾಃ ಇದು ಮೊದಲಾದ ಶ್ರುತಿಗಳ ದೆಶೆಯಿಂದ ಚರಣ (ಆಚಾರ) ಫಲವೇ. ಕರ್ಮಕ್ಕೂ

ಆಚಾರಕ್ಕೂ ಭೇದವಿಲ್ಲವೆನ್ನಕೂಡದು. 'ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ ಕರ್ಮಗಳಿಗೆ ಅಂಗವಾಗಿ ಶುದ್ಧಿಯನ್ನು ಕೊಡತಕ್ಕದ್ದು ಆಚಾರವೆನಿಸಿಕೊಳ್ಳುತ್ತದೆ. ಹಾಗಾದರೆ) 'ಅಥ ಯ ಇಮೇ ಗ್ರಾಮಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ'ಯಾರುಯಾಗ ತಟಾಕಾದಿ ನಿರ್ಮಾಣ ದಾನಾದಿಗಳನ್ನು ಮಾಡುತ್ತಾರೋ,ಅವರು ಧೂಮ ಲೋಕವನ್ನು ಹೊಂದುತ್ತಾರೆಂದು ಉಪಕ್ರಮಿಸಿ 'ತಸ್ಮಿನ್ ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರಾವರ್ತಂತೇ' ಅಲ್ಲಿ ಕೆಲವು ಕಾಲವಿದ್ದು ತಿರುಗಿ ಅದೇ ಮಾರ್ಗದಿಂದ ಹಿಂದೆ ಬರುತ್ತಾರೆ ಎಂಬ ಶ್ರುತಿಯಿಂದ ಗಮನಾಗಮನವು ಯಜ್ಞಾದಿಗಳ ಫಲವು ಎಂದು ತೋರುವುದರಿಂದ ಚರಣದ ಫಲವೆಂದದ್ದೂ ಅಯುಕ್ತವು, ಎಂದರೆ ಚರಣದ ಫಲವಾದ ಪುನರಾವೃತ್ತಿಯನ್ನೂ ಗಮನವನ್ನೂ ಕೂಡ ಯಜ್ಞಾದಿ ಕರ್ಮದ ಫಲವೆಂದು ಭ್ರಮೆಯಿಂದ ಹೇಳುತ್ತದೆ. ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ಎಂಬಲ್ಲಿದ್ದ ಉಪಶಬ್ದವು ಸಮೀಪದಲ್ಲಿರತಕ್ಕ ವಸ್ತುವನ್ನು ಹೇಳತಕ್ಕುದಾದುದರಿಂದ ಆಚಾರವು ಯಜ್ಞಾದಿಗಳ ಸಮೀಪದಲ್ಲಿರತಕ್ಕುದು. ಆದುದರಿಂದ ಉಪಾಸತೇ ಎಂಬುವಲ್ಲಿದ್ದ ಉಪಶಬ್ದದಿಂದ ಯಜ್ಞಾದಿಗಳಿಂದ ಆಚಾರಕ್ಕೂ ಸ್ವರ್ಗದಿಂದ ಗಮನಾಗಮನ ಗಳಿಗೂ ಸಹೋಕ್ತಿಯೇ ಭ್ರಾಂತಿ ನಿಮಿತ್ತವು. ಏವಂಚ ಇಷ್ಟಾದಿಪದಗಳಿಂದ ಹೇಳಲ್ಪಟ್ಟ ಯಾಗಾದಿ ರೂಪ ಚರಣಕ್ಕೆ ಸಹಪಾಠವಿದ್ದ ಪ್ರಯುಕ್ತ ಚರಣ ಫಲವೇ ಗಮನಾಗಮನವು. ಯಾಗಾದಿ ಕರ್ಮಗಳ ಫಲವೆಂಬುವ ಜ್ಞಾನವು ಭ್ರಾಂತಿಯಾದ ಪ್ರಯುಕ್ತ ಯಜ್ಞಾದಿಗಳು ಗಮನಾಗಮನಗಳ ಸಾಧನವಲ್ಲ. ಮತ್ತೆ ಪುನರಾವೃತ್ತಿಯಿಲ್ಲದಿರುವ ಮೋಕ್ಷಕ್ಕೆ ಸಾಧನವು. ಆದಕಾರಣ ಅದಕ್ಕಾಗಿ ವೈರಾಗ್ಯಾದಿಗಳನ್ನು ಸಂಪಾದಿಸ ಬೇಕಾಗಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) ಏಕೆಂದರೆ ಯೋಗ್ಯತಾ ಎನ್ನುವ ಸಿದ್ಧಾಂತನ್ಯಾಯ ವನ್ನು ವಿವರಿಸುತ್ತಾರೆ. ರಮಣೀಯಚರಣಾಃ ಎನ್ನುವ ಶ್ರುತ್ಯನ್ಯಥಾನುಪಪತ್ತಿಯಿಂದ ಗಮನಾಗಮನವು ಯಜ್ಞಾದಿಗಳ ಫಲವು ಎಂಬ ಪ್ರತೀತಿಯು ಭ್ರಾಂತಿಯೆಂದು ಕಲ್ಪಿಸಕೂಡದು. (೩) (ಏಕೆಂದರೆ ಯೋಗ್ಯತಾ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ, (ನಾನ್ಯಃ ಪಂಥಾಃ ಇತ್ಯಾದಿ ನಿರವಕಾಶ ಶ್ರುತಿಯು ಜ್ಞಾನ ಹೊರತು ಸಕಲ ಕರ್ಮ ಮಾರ್ಗಗಳು ಮೋಕ್ಷಕ್ಕೆ ಕಾರಣಗಳಲ್ಲ, ಎಂದು ಹೇಳುವುದರಿಂದ ಆಚಾರವು ಪುನರಾವೃತ್ತಿಗೆ ಕಾರಣವು, ಯಜ್ಞಾದಿ ಕರ್ಮಗಳಾದರೂ ಪುನರಾವೃತ್ತಿಯಿಲ್ಲದಿರುವ ಮೋಕ್ಷಕ್ಕೆ ಕಾರಣವು ಎನ್ನುವುದು ನಿಷಿದ್ಧವಾಗಿದೆ. ಏವಂಚ) ನಾನ್ಯಃ ಪಂಥಾಃ ಇತ್ಯಾದಿ ನಿರವಕಾಶ ಶ್ರುತಿ, 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ' 'ಅಥ ಯೋ ಯಜ್ಞೇನ ದಾನೇನ' ತದ್ಯ ಇಹ ರಮ ಣೀಯಚರಣಾಃ' ಇತ್ಯಾದಿ ಶ್ರುತಿ, 'ತ್ರೈವಿದ್ಯಾ ಮಾಂ ಸೋಮಪಾಃ' ಇತ್ಯಾದಿ ಸ್ಮೃತಿ, ಇದು ಮೊದಲಾದ ಪ್ರಮಾಣಗಳಿಂದಲೇ ಯಜ್ಞಾದಿಕರ್ಮ, ಆಚಾರ, ಈ ಎರಡನ್ನೂ ಚರಣ ಶಬ್ದದಿಂದಲೇ ಅಜಹಲ್ಲಕ್ಷಣೆಯಿಂದಲೂ ಮುಖ್ಯವೃತ್ತಿಯಿಂದಲೂ ಪ್ರತಿಪಾದಿಸುವುದು ಯೋಗ್ಯವಾಗಿದೆ. (ವಾಕ್ಯ ಭೇದ ವನ್ನು ಕಲ್ಪಿಸುವುದು ಯುಕ್ತವಲ್ಲ. ಶ್ರುತಿ ನಿಷಿದ್ಧ ಕರ್ಮಕ್ಕೆ ಜ್ಞಾನ ಸಾಮ್ಯವು ಕೂಡುವುದಿಲ್ಲ. ಆದ ಕಾರಣ ಕರ್ಮಕ್ಕೆ ಪುನರಾವೃತ್ತಿಯುಳ್ಳ ಸ್ವರ್ಗಾದಿ ಫಲವು. ಜ್ಞಾನಕ್ಕೆ ಮೋಕ್ಷವು ಫಲವು. ಆದಕಾರಣ ಯೋಗ್ಯತಾ ಭೇದದಿಂದಲೇ ಗಮನಾಗಮನವು ಕರ್ಮ ಫಲವು ಎಂದೇ ತಿಳಿಯುತ್ತದೆ. ತ್ರೈವಿದ್ಯಾ ಮಾಂ ಇತ್ಯಾದಿ ಸ್ಮೃತಿಗಳಿಂದ ಕರ್ಮಗಳಿಗೆ ಸ್ವರ್ಗಾದಿ ಫಲವು ದೃಷ್ಟವಾಗಿದೆ. 'ಅಥ ಯೋ ಯಜ್ಞೇನ ಇತ್ಯಾದಿ ಸಮಾಖ್ಯೆಯೂ ಇದೆ. ಆದಕಾರಣ ಚರಣ ಶ್ರುತಿಯನ್ನು ಉಭಯ ಪರವೆಂದು ವ್ಯಾಖ್ಯಾನ ಮಾಡಿದ್ದು ಯುಕ್ತವು. ಅಂತೂ ಗಮನಾಗಮನಗಳು ಕರ್ಮಫಲವಾಗಿರುವುದರಿಂದ ಕ್ಲೇಶ ಸಾಧನವಾದ ಕರ್ಮದಲ್ಲಿಯೂ ಕರ್ಮಸಾಧ್ಯವಾದ ಸ್ವರ್ಗದಲ್ಲಿಯೂ ವೈರಾಗ್ಯವನ್ನು ಹೊಂದಬೇಕು. ‖ ೧೦ ‖

೧೧ನೇ ಅನಿಷ್ಟಾಧಿಕರಣದಲ್ಲಿ ಯಜ್ಞಾದಿವಿಶೇಷೋಕ್ತಿ,ಅಜ್ಞಾನಿತ್ವಗಳಿಂದ ಗಮನಾಗಮನವು ಯಾಗಾದಿ ಗಳನ್ನು ಮಾಡುವವರಿಗೆ ಮಾತ್ರವೋ, ಎಲ್ಲಾ ಅಜ್ಞಾನಿಗಳಿಗೂ ಇದೆಯೋ ಎಂದು ಸಂದೇಹವು ಬಂದರೆ

ಯಾಗಾದಿಗಳನ್ನು ಮಾಡುವವರಿಗೆ ಮಾತ್ರ ಎಂದು ಪೂರ್ವಪಕ್ಷವು. ಆದರಲ್ಲಿ ವಿಮಿಶ್ರತಾ ಎಂಬ ಪೂರ್ವ ಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ || (೧) ನ ಚ ಭಯಫಲಕಾಮಾದಿಮಿಶ್ರಬುದ್ಧಿತ್ವಾದಿಷ್ಟಾದಿಕಾರಿಣಾಂ ಸಂಸಾರಃ ಅನಿಷ್ಟಾದಿಕಾರಿಣಾಂ ತದಭಾವಾನ್ಮುಕ್ತಿರಿತಿ ವಾಚ್ಯಂ || (೨) ತೇಷಾಂ ಪ್ರಬಲ ದೋಷ ಶ್ರುತೇಃ || ೧೧ ||

ಅ || (೧) ಯಾಗಾದಿಗಳನ್ನು ಮಾಡುವವರಿಗೆ ಪ್ರತ್ಯವಾಯಭಯ, ಫಲದಲ್ಲಿ ಇಚ್ಛೆ, ವಿಧಿ, ಪ್ರತಿಷೇಧ, ಸಂಸಾರಬಂಧ ಇವುಗಳಿಂದ ಮಿಶ್ರವಾದ ಬುದ್ಧಿಯಿರುವ ಕಾರಣ ಸಂಸಾರವು, ಯಾಗಾದಿಗಳನ್ನು ಮಾಡದಿರುವ ಅಜ್ಞಾನಿಗಳಿಗೆ ಹಿಂದೆ ಹೇಳಿದ ಮಿಶ್ರಬುದ್ಧಿಯಿಲ್ಲದಿರುವ ಪ್ರಯುಕ್ತ ಮುಕ್ತಿಯು. (ಅಂದರೆ ಸ್ವರ್ಗಮುಕ್ತಿಗಳಿಂದ ಬೇರೆಯಾದ ಫಲಾಂತರವಿಲ್ಲ) (ಏವಂಚ ಯಾಗಾದಿಗಳನ್ನು ಮಾಡುವವರಿಗೇನೇ ಗಮನಾಗಮನವೆಂಬ ನಿಯಮವಿಲ್ಲ ) (೨) (ಏಕೆಂದರೆ ಬಲವತ್ತ್ವಂ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಅಜ್ಞಾನಿಗಳಿಗೆಲ್ಲರಿಗೂ 'ತದ್ಯ ಇಹ ಶುಭಕೃತೋ ಯೇಚಾಶುಭಕೃತಸ್ತೇ ಶುಭಮೋ ವಾನುಭೂಯಾವರ್ತಂತೇ' ಇದು ಮೊದಲಾದ ಶ್ರುತಿಗಳ ದೆಸೆಯಿಂದ ಪ್ರಬಲವಾದ ದುಃಖಾದಿಗಳು ಇದ್ದುದರಿಂದಲೂ ಪ್ರಬಲವಾದ ನರಕಾದ್ಯನರ್ಥಗಳು ಇದ್ದುದರಿಂದಲೂ ಮುಕ್ತಿಯಿಲ್ಲ. ಅಂತೂ ಅಜ್ಞರಿಗೆಲ್ಲರಿಗೂ ಗಮನಾಗಮನಾದಿದುಃಖಗಳು ಇವೆ. || ೧೧ ||

೧೨ನೇ ಅಪಿಸಪ್ತಾಧಿಕರಣದಲ್ಲಿ ನರಕವು ನಿತ್ಯದಲ್ಲಿಯೂ ದುಃಖವನ್ನು ಕೊಡುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ ನರಕದಿಂದ ಪುನರಾವೃತ್ತಿಯು ಇದ್ದೇ ಇದೆ ಎಂದು ಪೂರ್ವ ಪಕ್ಷವು. ಅದರಲ್ಲಿ ವಿರುದ್ಧೋಕ್ತಿಃ ಎಂಬ ಪೂರ್ವ ಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ || (೧) ನ ಚ ನರಕಭೋಗಸ್ಯಾನಿತ್ಯತ್ವಕಥನಾನ್ನಿತ್ಯನರಕೋಕ್ತಿರ್ವಿರುದ್ಧಾ | (೨) ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ | ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು | ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತಾವಿತಿ ವಿಭಾಗಾತ್ || ೧೨ ||

ಅ || (೧) ಯಾವದಿಂದ್ರಾಶ್ಚತುರ್ದಶ| ಚಕಾರ ನರಕಂ ಶೂನ್ಯಂ ಇತ್ಯಾದಿಗಳಲ್ಲಿ ನರಕಭೋಗವು ಅನಿತ್ಯವೆಂದು ಹೇಳಿದುದರಿಂದ 'ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ| ನರಕಕ್ಕೆ ನಿತ್ಯತ್ವವನ್ನು ಹೇಳಿದ್ದು ವಿರುದ್ಧವು. (ಏವಂಚ ನರಕವು ಅನಿತ್ಯವೆಂದು ಪ್ರಮಿತವಾಗೋಣ ನಿತ್ಯವೆಂದದ್ದೂ ವಿರುದ್ಧವಾದ ಪ್ರಯುಕ್ತ ಭಗವದ್ದ್ವೇಷಿಗಳಿಗೂ ಅನಿತ್ಯ ನರಕವೆಂದೇ ಸಿದ್ಧವಾಗುವ ಪ್ರಯುಕ್ತ ಭಗವಂತನ ದ್ವೇಷಾದಿಗಳಲ್ಲಿ ಅತಿಶಯವಾಗಿ ವೈರಾಗ್ಯಾದಿಗಳನ್ನು ಸಂಪಾದಿಸಬೇಕಾಗಿಲ್ಲ, ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ—ವಿಭಾಗಃ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀಪಾಕ, ಎಂಬುವುದು ಐದು ಅನಿತ್ಯ ನರಕಗಳು. ತಾಮಿಸ್ರ,ಅಂಧತಾಮಿಸ್ರ ಎಂಬುವುದು ಎರಡು ನಿತ್ಯನರಕಗಳು, ಹೀಗೆ ನರಕಗಳನ್ನು ನಿತ್ಯ, ಅನಿತ್ಯಗಳೆಂದು ವಿಭಾಗಮಾಡಿ ಹೇಳಿರುವುದರಿಂದ ನರಕವು ನಿತ್ಯವೆಂದದ್ದೂ ವಿರುದ್ಧವಲ್ಲ. (ಅಂತೂ ವಿಷಯಭೇದವಿದ್ದ ಪ್ರಯುಕ್ತ ನಿತ್ಯ ಅನಿತ್ಯ ಎಂದು ಹೇಳುವ ಎರಡು ಶ್ರುತಿಗಳಿಗೂ ವಿರೋಧವಿಲ್ಲ.) || ೧೨ ||

೧೩ನೇ ಶತ್ರಾಪ್ರ್ಯಧಿಕರಣದಲ್ಲಿ ದುಃಖವಿರುವ, ಮತ್ತು ದುಃಖವಿಲ್ಲದಿರುವ ಜಾಗ್ರದಾದಿ ೩ ಅವಸ್ಥೆಗಳನ್ನು ಕಂಡುದರಿಂದ ನರಕದಲ್ಲಿ ದುಃಖವಿದೆಯೋ, ಇಲ್ಲವೋ ಎಂದು ಸಂಶಯವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಅದರಲ್ಲಿ ಸಹಸ್ಥಾನಂ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ॥ (೧) ನ ಚ ಸಹಸ್ಥಾನಾದೀಶಸ್ಯಾಪಿ ನರಕದುಃಖಪ್ರಾಪ್ತಿಃ ॥ (೨) ಸ್ವಾತಂತ್ರ್ಯಾತ್ಕಾರಣಾಭಾವಾತ್ ॥ ೧೩ ॥**

ಅ ॥ (೧) ಸರ್ವಂ ನಿಯಮಯತಿ' ಎಂಬ ಶ್ರುತಿಯ ಬಲದಿಂದ ನರಕದಲ್ಲಿಯೂ ನಾರಕಿಜನರನ್ನು ನಿಯಮಿಸುವುದಕ್ಕಾಗಿ ಶ್ರೀ ಹರಿಯೂ ಅಲ್ಲಿ ಅವಶ್ಯವಾಗಿ ಇರಬೇಕಾಗಿರುವುದರಿಂದ ಶ್ರೀಹರಿಗೂ ನರಕ ದುಃಖವು ಪ್ರಾಪ್ತವಾಗಬೇಕಾಗುವುದು. (ಏವಂಚ ನರಕದಲ್ಲಿ ದುಃಖವಿದ್ದರೆ ಶ್ರೀ ಹರಿಯೂ ದುಃಖಿಗಳೊಡನೆ ಇದ್ದುದರಿಂದ ದುಃಖಿಯಾಗಬೇಕಾಗುವನು. ಆದಕಾರಣ ನರಕವು ನಿರ್ದುಃಖವೇ ಆಗಿದೆ, ಎಂದರೆ ಹಾಗೆ ಹೇಳ ಕೂಡದು. (೨) (ಏಕೆಂದರೆ ಕಾರಣಾಭಾವಃ ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಅಸ್ವತಂತ್ರನಾದವನಿಗೆ ಅನಪೇಕ್ಷಿತಗಳಾದ ಅಜ್ಞಾನ ಮೊದಲಾದ ದುಃಖಕಾರಣಗಳು ಕೂಡುವವು.) ಶ್ರೀ ಹರಿಗೆ ಸರ್ವಸ್ವಾತಂತ್ರ್ಯವಿದೆ, ಮತ್ತು ಸರ್ವಜ್ಞನಾದುದರಿಂದ ಅಜ್ಞಾನ ಮೊದಲಾದ ದುಃಖ ಕಾರಣಗಳೂ ಇಲ್ಲ. ಮತ್ತು ನರಕ ಸಾಧನವಾದ ಪಾಪರೂಪ ಕಾರಣವೂ ಇಲ್ಲ. (ಏವಂಚ ದುಃಖಕಾರಣವಿಲ್ಲದಿರುವುದರಿಂದ ಶ್ರೀ ಹರಿಯು ನರಕದಲ್ಲಿ ದುಃಖಿಗಳೊಡನೆ ಇದ್ದರೂ ದುಃಖಪ್ರಾಪ್ತಿಯಾಗುವುದಿಲ್ಲ.) ॥ ೧೩ ॥

೧೪ನೇ ವಿದ್ಯಾಧಿಕರಣದಲ್ಲಿ ಲೌಕಿಕ ಮಾರ್ಗದಲ್ಲಿ ಸ್ವಾತಂತ್ರ್ಯವು ಕಂಡದೆ. ಅಲೌಕಿಕವಾಗಿರುವುದರಿಂದ ಪಿತೃಯಾನ ದೇವಯಾನಗಳನ್ನು ಪ್ರಾಣಿಗಳು ಸ್ವತಂತ್ರವಾಗಿ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ ಆ ಮಾರ್ಗಗಳನ್ನು ಸ್ವತಂತ್ರವಾಗಿ ಹೋಗುತ್ತವೆ, ಎಂದು ಪೂರ್ವಪಕ್ಷವು. ಅದರಲ್ಲಿ ಸಹಸ್ಥಾನಂ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧)ನ ಚ ಸಾಧನೇನ ಸಹ ಶ್ರುತೇಸ್ತತ್ಫಲೇಽಪಿ ಜೀವಸ್ಯ ಸ್ವಾತಂತ್ರ್ಯಂ ॥(೨)ಅವಿಹಿತತ್ವೇನ ಕಾರಣಾಭಾವಾತ್ ॥ (೩) ಅಥೈಕಯೋಃ ಪಥೋರಿತ್ಯಸ್ಯ ಚ ಸಾಧನಾರ್ಥತ್ವಾತ್ ॥ ೧೪ ॥**

ಅ ॥ (೧)('ತದ್ಯ ಇತ್ಥಂ ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ' 'ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ' 'ಅಥೈತಯೋಃ ಪಥೋರೇಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ' ಇತ್ಯಾದಿ ಶ್ರುತಿಗಳಲ್ಲಿ) ವಿದ್ಯಾ, ಯಾಗ ಮೊದಲಾದ ಸಾಧನಗಳಿಂದ ಕೂಡಿ ಅರ್ಚಿರಾದಿ ಧೂಮಾದಿ ಭಾವರೂಪವಾದ ಫಲವೂ ಶ್ರುತವಾಗಿರುವುದರಿಂದ ಸಾಧನದಲ್ಲಿದ್ದಂತೆಯೇ ಫಲದಲ್ಲಿಯೂ ಜೀವರಿಗೆ ಸ್ವಾತಂತ್ರ್ಯವನ್ನಂಗೀಕರಿಸಬೇಕು. (ಗತಿರೂಪ ಸಾಧನದಲ್ಲಿ ಸ್ವಾತಂತ್ರ್ಯವಿಲ್ಲವಾದರೆ ಗಚ್ಛಂತಿ ನ ಗಚ್ಛಂತಿ ಚ ಎಂದು ಪ್ರಯೋಗವು ಇಲ್ಲದಿರುವುದರಿಂದ ಸರ್ವಥಾ ಸ್ವಾತಂತ್ರ್ಯವಿಲ್ಲದಿದ್ದರೂ ಭಗವದಧೀನ ಸ್ವಾತಂತ್ರ್ಯವು ವಿದ್ಯಾಕರ್ಮ ರೂಪ ಸಾಧನದಲ್ಲಿ ಅಂಗೀಕರಿಸುವಂತೆ ಗತಿಯಲ್ಲಿಯೂ ಫಲದಲ್ಲಿಯೂ ಸ್ವಾತಂತ್ರ್ಯವು ಬರಲಿ. ತಥಾ ಚ ಫಲಕ್ಕಾಗಿ ವೈರಾಗ್ಯಾದಿಗಳನ್ನು ಹೊಂದಬೇಕಾಗಿಲ್ಲ.) ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಕಾರಣಾಭಾವಃ

ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ವೈರಾಗ್ಯಾದಿ ಸಾಧನಗಳಲ್ಲಿ 'ಬ್ರಾಹ್ಮಣೋ ನಿರ್ವೇದ ಮಾಯಾತ್'' ಸ್ವಾತ್ಮಾನ ಮುಪಾಸೀತ ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'ಎಂದುವಿಧಿ ಯಿದ್ದ ಪ್ರಯುಕ್ತ ಅಂತಹ ವಿಧ್ಯಾದಿ ಶಾಸ್ತ್ರಗಳಿಗೆ ವೈಯರ್ಥ್ಯ ಬಾರದಿರುವುದಕ್ಕಾಗಿ ಕಿಂಚಿತ್ಸ್ವಾತಂತ್ರ್ಯವನ್ನು ಶ್ರೀಹರಿಯು ಕೊಡುತ್ತಾನೆಂದು ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಎನ್ನುವ ಸೂತ್ರದಲ್ಲಿ ಹೇಳಿದೆ. ಗಮನದ ಲ್ಲಿಯೂ ಫಲದಲ್ಲಿಯೂ ಕಿಂಚಿತ್ಸ್ವಾತಂತ್ರ್ಯವೂ ಶಾಸ್ತ್ರದಲ್ಲಿ ಎಲ್ಲಿಯೂ ವಿಧಿಸದಿರುವ ಪ್ರಯುಕ್ತ ಕಾರಣವೇ ಇಲ್ಲದಿರುವುದರಿಂದ ಸಾಧನದಲ್ಲಿದ್ದಂತೆ ಎನ್ನುವುದು ಯುಕ್ತವಲ್ಲ. ಅಥೈತಯೋಃ ಪಥೋಃ ಎಂಬ ಶ್ರುತಿ ಯಲ್ಲಿ ನೈಕತರೇಣ ಗಚ್ಛಂತಿ ಎನ್ನುವುದು ದೇವಯಾನ ಪಿತೃಯಾನ ಎಂಬ ೨ ಮಾರ್ಗಗಳಿಗೆ ಸಾಧನ ವಾಗಿ ವಿದ್ಯಾಕರ್ಮರೂಪಸಾಧನವೇ ಹೇಳಲ್ಪಡುತ್ತದೆ. (ಏವಂಚ ಶಾಸ್ತ್ರದಲ್ಲಿ ವಿಹಿತತ್ವರೂಪವಾದ ಕಾರಣವಿಲ್ಲದಿರುವ ಪ್ರಯುಕ್ತ ಜೀವನಿಗೆ ಫಲವಿಷಯದಲ್ಲಿ ಸ್ವಾತಂತ್ರ್ಯವಿಲ್ಲದಿರುವುದರಿಂದ ಅದಕ್ಕಾಗಿ ವೈರಾ ಗ್ಯಾದಿ ಸಾಧನಗಳನ್ನು ಸಂಪಾದಿಸಲೇ ಬೇಕು ‖ ೧೪ ‖

೧೫ನೇ ನ ತೃತೀಯಾಧಿಕರಣದಲ್ಲಿ ಲೋಕದಲ್ಲಿ ದುಃಖವುಳ್ಳವನಿಗೆ ಸುಖವು ದೃಷ್ಟವಾಗಿರುವ ಪ್ರಯುಕ್ತ ಅಂಧಂತಮಸ್ಸು ಅಲೌಕಿಕವಾಗಿರುವುದರಿಂದ ಅಲ್ಲಿಯೂ ಸುಖವಿದೆಯೋ ಇಲ್ಲವೋ ಎಂದು ಸಂದೇಹವು ಬಂದರೆ ಸುಖವಿದೆ ಎಂದು ಪೂರ್ವಪಕ್ಷವು. ಇಲ್ಲಿಯೂ ಸಹಸ್ಥಾನಂ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.)

**ಸೂ ‖ (೧) ನ ಚ ದುಃಖಸಹಾವಸ್ಥಾಯಿತ್ವಾದಂಧೇತಮಸ್ಯಪಿ ಸುಖಂ ‖(೨) ಈಶಸ್ಯಾಪ್ರಿಯ ತ್ವೇನೈವ ಕಾರಣಾಭಾವಾತ್ ‖ ೧೫ ‖**

ಅ ‖ (೧) ಯತ್ರ ದುಃಖಂ ಸುಖಂ ತತ್ರ ಎನ್ನುವ ನಿಗಮದಿಂದ ದುಃಖವು ಸುಖದ ಒಟ್ಟಿಗೆ ಇದ್ದ ಪ್ರಯುಕ್ತ (ವ್ಯಾಪ್ತವಾದ ಪ್ರಯುಕ್ತ) ತಮಸ್ಸನ್ನು ಹೊಂದಿದವರಿಗೆ ಅಂಧಂತಮಸ್ಸಿನಲ್ಲಿಯೂ ಸುಖವಿದೆ. (ಆದಕಾರಣ ತಮಸ್ಸಾಧನಗಳಾದ ಭಗವದ್ದ್ವೇಷಾದಿಗಳಲ್ಲಿ ಅತಿಶಯವಾಗಿ ವೈರಾಗ್ಯವನ್ನು ಹೊಂದ ಬೇಕಾಗಿಲ್ಲ.) ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ ಕಾರಣಾಭಾವಃ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (ಅಂಧಂತಮಸ್ಸನ್ನು ಹೊಂದಿದವರು) ಶ್ರೀಹರಿಗೆ 'ಅತ್ಯಪ್ರಿಯೋ ಸುಖ ಮಹಿ' ಎನ್ನುವ ಸ್ಮೃತಿಸಿದ್ಧವಾದಕಾರಣ ಅಪ್ರಿಯರಾಗಿರುವುದರಿಂದಲೇ (ಅತ್ಯಂತದ್ವೇಷಿಗಳಾದುದ ರಿಂದಲೇ) ಅವರಿಗೆ ಸುಖವಿರಲಿ, ಎಂದು ಈಶ್ವರೇಚ್ಛಾರೂಪ ಕಾರಣವಿಲ್ಲದಿರುವುದರಿಂದಲೇ (ಸುಖಲೇ ಶವೂ ಇಲ್ಲ.) (1) ವಿಪ್ರತಿಪನ್ನಾಃ ನ ಸುಖವಂತಃ ತಥಾತ್ವೇನೇಶ್ವರಾನಿಷ್ಟತ್ವಾತ್ ಯದ್ಯಥಾ ಈಶ್ವರಾ ನಿಷ್ಟಂ ತತ್ತಥಾ ನ ಭವತಿ ಯಥಾ ಶಶೋ ವಿಷಾಣಿತ್ವೇನ = ವಿವಾದವಿಷಯರಾದ ಅಂಧಂತಮ ಸ್ಸಿನಲ್ಲಿರುವವರು ಸುಖವುಳ್ಳವರಲ್ಲ, ಸುಖವುಳ್ಳವರಾಗಲಿ ಎಂದು ಈಶ್ವರನ ಇಚ್ಛೆಗೆ ವಿಷಯರಾಗದಿರುವುದ ರಿಂದ ಯಾವುದು ಹೇಗೆ ಶ್ರೀಹರಿಗೆ ಇಷ್ಟವಲ್ಲವೋ ಅದು ಹಾಗೆ ಆಗುವುದಿಲ್ಲ. ಉದಾ:—ಮೊಲವು ಕೋಡು ಉಳ್ಳದ್ದಾಗಲಿ ಎಂದು ಶ್ರೀಹರಿಗೆ ಇಷ್ಟವಾಗದಿರುವುದರಿಂದ ಮೊಲಕ್ಕೆ ಕೋಡು ಇಲ್ಲ. (ಶ್ರೀಹರಿಗೆ ಇಂತಹ ವಿವಿಧಜಗತ್ತನ್ನು ಸೃಷ್ಟಿಸುವ ಶಕ್ತಿಯಿರುವಾಗ ಶಶದಲ್ಲಿಯೂ ಶೃಂಗಬೇಕೆಂದು ಇಚ್ಛೆಯು ಇರುತ್ತಿದ್ದರೆ ಗವಾದಿಗಳಲ್ಲಿದ್ದಂತೆಯೇ ಸೃಷ್ಟಿಸುತ್ತಿದ್ದನು. ಅಂತಹ ಇಚ್ಛೆಯಿಲ್ಲದ ಕಾರಣವೇ ಶಶದಲ್ಲಿ ಶೃಂಗವನ್ನು ಸೃಷ್ಟಿಸಲಿಲ್ಲ.) (೩) ನೈತೇ ಸುಖಿತ್ವೇನೇಶ್ವರೇಷ್ಟಾಃ ತದಪ್ರಿಯತ್ವಾತ್ ಯೋ ಯಸ್ಯಾಪ್ರಿಯಃ ಸಃಸುಖಿತ್ವೇನ ನ ತದಿಷ್ಟಃ ಯಥಾ ರಾಜವಿರೋಧೀ ರಾಜ್ಞಃ= ತಮಸ್ಸಿನಲ್ಲಿದ್ದವರು ಸುಖಿಗಳಾಗಲಿ ಎಂದು ಶ್ರೀಹರಿಗೆ ಇಷ್ಟರಲ್ಲ, ಶ್ರೀಹರಿಗೆ ಅಪ್ರಿಯರಾದುದರಿಂದ, ಯಾರು ಯಾರಿಗೆ ಅಪ್ರಿಯರೋ, ಅವರು

21

ಸುಖಿಗಳಾಗಲಿ ಎಂದು ಶ್ರೀಹರಿಗೆ ಇಷ್ಟವಲ್ಲ ಉಪಾ:-ರಾಜ ವಿರೋಧಿಯು ಸುಖವುಳ್ಳವನಾಗಲಿ ಎಂದು ರಾಜನಿಗೆ ಇಷ್ಟವಲ್ಲ.. ಏವಂಚ ಶ್ರೀಹರಿಯ ಇಚ್ಛಾರೂಪ ಕಾರಣವಿಲ್ಲದಿರುವುದರಿಂದ ಅಂಧಂತಮಸ್ಸನ್ನು ಹೊಂದಿದವರಿಗೆ ಸುಖ ಲೇಶವೂ ಇಲ್ಲ. ॥ ೧೫ ॥

೧೬ನೇ ತತ್ಸ್ವಭಾವ್ಯಾಧಿಕರಣದಲ್ಲಿ 'ಧೂಮೋ ಭೂತ್ವಾ' ಎಂಬಲ್ಲಿ ಭವನವೆಂದರೆ—ಯಜ್ಞಾದಿ ಕರ್ಮ ಮಾಡಿದವರಿಗೆ ಧೂಮಾದಿ ದೇವತೆಗಳಿಂದ ಐಕ್ಯವೋ, ಅಥವಾ ಆ ದೇವತೆಗಳ ಪದಪ್ರಾಪ್ತಿಯೋ, ಅಥವಾ ತತ್ಸ್ವಭಾವ ಪ್ರಾಪ್ತಿಯೋ, ಎಂದು ಸಂದೇಹವು ಬಂದರೆ -ಅವರಿಂದ ಐಕ್ಯವು, ಅಥವಾ ಅವರ ಪದಪ್ರಾಪ್ತಿಯು, ಎಂದು ಪೂರ್ವಪಕ್ಷವು. ಇಲ್ಲಿಯೂ ಸಹಸ್ಥಾನಂ ಎನ್ನುವ ನ್ಯಾಯವನ್ನೇ ವಿವರಿಸುತ್ತಾರೆ.

ಮೂ ॥ (೧) ನ ಚ ಧೂಮಾದಿದೇವತಾಸಹಾವಸ್ಥಾನಾತ್ಕರ್ಮಿಣೋಽಪಿ ತತ್ಪದಪ್ರಾಪ್ತಿಃ ॥
(೨) ತನ್ನಿಮಿತ್ತವಿದ್ಯಾಖ್ಯಕಾರಣಾಭಾವಾತ್ ॥ ೧೬ ॥

ಅ ॥ (೧) 'ಧೂಮೋ ಭೂತ್ವಾಽಭ್ರಂ ಭವತಿ, ಅಭ್ರೋ ಭೂತ್ವಾ ಮೇಘೋ ಭವತಿ' ಎನ್ನುವ ಶ್ರುತಿಯಿಂದ ಯಜ್ಞಾದಿಕರ್ಮಮಾಡಿದರೂ ಧೂಮಾದಿದೇವತೆಗಳಿಂದೊಡಗೂಡಿ ಇರುವ ಪ್ರಯುಕ್ತ ಕಲ್ಪ ಸಮಾಪ್ತಿಪರ್ಯಂತ ಪರಮ ಸುಖ ಸಾಧನವಾದ ಧೂಮಾದಿದೇವತೆಗಳ ಪದಪ್ರಾಪ್ತಿಯು ಕೂಡುತ್ತದೆ. ಆದಕಾರಣ ಅಂತಹ ಸುಖಸಾಧನವಾದ ಯಜ್ಞಾದಿ ಕರ್ಮದಲ್ಲಿ ವೈರಾಗ್ಯವನ್ನು ಹೊಂದ ಬಾರದು, ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ—ಕಾರಣಾಭಾವಃ ಎನ್ನುವ ನ್ಯಾಯವನ್ನೇ ವಿವರಿಸುತ್ತಾರೆ.) ಆ ಧೂಮಾದಿ ದೇವತೆಗಳ ಪದವಿ ಬರಲಿಕ್ಕೆ ನಿಮಿತ್ತ ಕಾರಣವಾದ ಅಪರೋಕ್ಷ ಜ್ಞಾನ ಅಧಿಕಾರ ಮೊದಲಾದ ಕಾರಣಗಳು ಇಲ್ಲದಿರುವುದರಿಂದ ಕರ್ಮಿಗಳಿಗೆ ಧೂಮಾದಿ ದೇವತೆಗಳ ವಿದ್ಯಾಸಾಧ್ಯ ವಾದ ಪದವಿಯು ಸಿಗುವುದಿಲ್ಲ. (ಮತ್ತೆ ಅವರವರ ಪದವಿಯು ಕರ್ಮಗಳಿಂದ ಹೊಂದಲ್ಪಡುವುದಾದರೆ ಏಕ ಕಾಲದಲ್ಲಿ ಅನೇಕ ಕರ್ಮಿಗಳು ಮಿಲಿತರಾದಾಗ ಅನೇಕ ಮಂದಿಗೆ ಏಕ ಕಾಲದಲ್ಲಿ ಅನೇಕ ಪದಪ್ರಾಪ್ತಿಯು ಆಗಬೇಕಾಗುವುದು. ಇದು ಯುಕ್ತವಲ್ಲ. ಮತ್ತೆ ಧೂಮೋ ಭೂತ್ವಾ ಎನ್ನುವ ಶ್ರುತಿಯಲ್ಲಿತದ್ಭವನವೆಂದರೆ ತದ್ಗತಾ ಗತಿಃ ಇತ್ಯಾದ್ಯುಕ್ತಿ ಪ್ರಕಾರ ಆ ಧೂಮಾದಿದೇವತೆಗಳಿಂದ ಕೂಡಿಕೊಂಡು ಗಮನವು, ಭೋಜನವು ಇದು ಮೊದಲಾದುದು ಆ ದೇವತೆಗಳ ಸ್ವಭಾವ ಪ್ರಾಪ್ತಿಯೇ. ಆದಕಾರಣ ಕರ್ಮವು ಮೋಕ್ಷ ಸಾಧನವಾಗ ದಿರುವುದರಿಂದ ವೈರಾಗ್ಯಾದಿಗಳನ್ನು ಹೊಂದಲೇ ಬೇಕು. ॥ ೧೬ ॥

೧೭ನೇ ನಾತಿಚಿರೇಣಾಧಿಕಣದಲ್ಲಿ ಲೋಕದಲ್ಲಿ ಮೆಲ್ಲಗೆ ಬರುವ ಮಾರ್ಗಸ್ಥರೂ ಶೀಘ್ರವಾಗಿ ಬರುವ ಮಾರ್ಗಸ್ಥರೂ ಹೀಗೆ ಎರಡು ಪ್ರಕಾರ ಕಂಡು ಬರುವುದರಿಂದ ಕರ್ಮಿಗಳು ಸ್ವರ್ಗದಿಂದ ಹೊರಟು ಸಾವ ಕಾಶವಾಗಿ ಗರ್ಭವಾಸವನ್ನು ಹೊಂದುತ್ತಾರೋ, ಬೇಗನೇ ಹೊಂದುತ್ತಾರೋ, ಎಂದು ಸಂದೇಹವು ಬಂದರೆ ಸಾವಕಾಶವಾಗಿ ಎಂದು ಪೂರ್ವಪಕ್ಷವು. ಅದರಲ್ಲಿಯೂ ಸಹಸ್ಥಾನಂ ಎನ್ನುವ ನ್ಯಾಯವನ್ನೇ ವಿವರಿಸುತ್ತಾರೆ.

ಮೂ ॥ (೧) ನ ಚ ತೈಸ್ತೈಸ್ಸಹಾವಸ್ಥಾನಾದತಿಚಿರತ್ವಂ (೨) ವತ್ಸರಾತ್ಪೂರ್ವಮೇವ ತು ಇತಿ ಕ್ಲೃಪ್ತಕಾಲಾದಧಿಕಾವಸ್ಥಾನೇ ಕಾರಣಾಭಾವಾತ್ ॥೧೭ ॥

ಅ ॥ (೧) ('ಆಕಾಶಾದ್ವಾಯುಂ' ಎನ್ನುವ ಶ್ರುತಿಯಲ್ಲಿ ಬಹುಲೋಕ ಪ್ರಾಪ್ತಿಯನ್ನು ಹೇಳಿದು ದರಿಂದ) ಆಯಾವ ಧೂಮಾದಿದೇವತೆಗಳಿಂದ ಕೂಡಿಕೊಂಡು ಆಯಾವ ಲೋಕಗಳಲ್ಲಿ ಇದ್ದ ಪ್ರಯುಕ್ತ ಯಾಗಾದಿಕರ್ಮ ಮಾಡಿದವರಿಗೆ ಆ ಲೋಕಗಳಿಂದ ಈ ಭೂಲೋಕಕ್ಕೆಬರಲಿಕ್ಕೆ ಅತಿಸಾವಕಾಶವಿದೆ.

(ಮತ್ತು ಆ ಲೋಕದಲ್ಲಿಯೇ ಧೂಮಾದಿದೇವತಾಸ್ವಭಾವ ಪ್ರಾಪ್ತಿಯಿಂದ ಮಹಾಸುಖವು ಕೂಡುವಾಗ ಅದನ್ನು ಬಿಟ್ಟು ಇಲ್ಲಿಗೆ ಬರಲಿಕ್ಕೆ ಪ್ರಯೋಜನವಿಲ್ಲದಿರುವುದರಿಂದಲೂ ಕರ್ಮದಲ್ಲಿ ವೈರಾಗ್ಯವನ್ನು ಹೊಂದ ಬೇಕಾಗಿಲ್ಲ,) ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ—ಕಾರಣಾಭಾವಃ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ವತ್ಸರಾತ್ಪೂರ್ವಮೇವತು ಇತ್ಯಾದಿ ಪ್ರಮಾಣಗಳಿಂದ ೧ ಸಂವತ್ಸರ ದೊಳಗೇನೇ ಗರ್ಭವಾಸಾದಿದುಃಖವನ್ನು ಹೊಂದುತ್ತಾನೆ ಎಂದು ಇದ್ದ ಪ್ರಯುಕ್ತ ಕ್ಲೃಪ್ತ ಕಾಲಕ್ಕಿಂತ ಹೆಚ್ಚು ಇರಲಿಕ್ಕೆ ಕಾರಣವಿಲ್ಲ. (ಹಾಗಾದರೆ ಧೂಮಾದಿ ಲೋಕಗಳಲ್ಲಿ ಮಹಾಸುಖಪ್ರಾಪ್ತಿಯು ಇಷ್ಟ ವಾಗುವುದರಿಂದ ಅಲ್ಲಿ ಬಹುಕಾಲ ಇರಲಿಕ್ಕೆ ಅದೇ ಕಾರಣವು ಎನ್ನಕೂಡದು. ಹಾಗಿದ್ದರೆ ಸರ್ವರಿಗೂ ದುಃಖವಿಲ್ಲವೆಂದಾಗಬೇಕಾಗುವುದು. ದುಃಖವಾದರೂ ಪ್ರತ್ಯಕ್ಷ ಸಿದ್ಧವಾಗಿದೆ. ಆದಕಾರಣ ಬಹುಕಾಲ ಆವಾವ ಲೋಕಗಳಲ್ಲಿ ಇರಲಿಕ್ಕೆ ಕಾರಣವಿಲ್ಲದಿರುವುದರಿಂದ (ಕರ್ಮಿಗಳಿಗೆ ಮಹಾಸುಖ ಪ್ರಾಪ್ತಿಯಾಗುವು ದಿಲ್ಲ. ಅಂತೂ ಕರ್ಮದಲ್ಲಿ ವೈರಾಗ್ಯವು ಯುಕ್ತವೇ.) ॥ ೧೭ ॥

೧೮ನೇ ಅನ್ಯಾಧಿಕರಣದಲ್ಲಿ ಲೋಕದಲ್ಲಿ ಗ್ರಾಮಾಂತರಕ್ಕೆ ಗಮನವು ದುಃಖಕ್ಕೆ ಕಾರಣವಾಗಿ ಕಂಡ ದ್ರಿಂದ ಈ ಸ್ವರ್ಗ ಮಾರ್ಗವೂ ಪುರುಷಾರ್ಥವಾದ ಕಾರಣ ಕರ್ಮಿಗಳಿಗೆ ಸ್ವರ್ಗದಿಂದ ಬರಲಿಕ್ಕೆ ದುಃಖ ವುಂಟೋ ಇಲ್ಲವೋ ಎಂದು ಸಂದೇಹವು ಬಂದರೆ ದುಃಖವುಂಟೆಂದು ಪೂರ್ವಪಕ್ಷವು. ಅಲ್ಲಿಯೂ ಸಹಸ್ಥಾನಂ ಎನ್ನುವ ನ್ಯಾಯವನ್ನೇ ವಿವರಿಸುತ್ತಾರೆ.

**ಸೂ ॥ (೧) ನ ಚ ವ್ರೀಹ್ಯಾದಿಜೀವೈಸ್ಸಹಾವಸ್ಥಾನಾದ್ದುಃಖ ಪ್ರಾಪ್ತಿಃ ॥ (೨) ಶಬ್ದವಿಹಿತ ತ್ವೇನ ಪಾಪಾಖ್ಯಕಾರಣಾಭಾವಾತ್ ॥ ೧೮ ॥**

ಅ ॥ (೧) ('ತ ಇಹ ವ್ರೀಹಿಯವಾಃ ಓಷಧಿವನಸ್ಪತಯೋ ಜಾಯಂತೇ' ಇತ್ಯಾದಿ ಶ್ರುತಿ ಗಳಿಂದ ಕರ್ಮಿಗಳಿಗೆ ವ್ರೀಹ್ಯಾದಿ ಭಾವವು ಸ್ಪಷ್ಟವಾಗಿದೆ.) ವ್ರೀಹ್ಯಾದಿ ಜೀವರಿಂದೊಡಗೂಡಿ ಇದ್ದ ಮೇಲೆ ವ್ರೀಹ್ಯಾದಿಗಳ ಛೇದನಾದಿಗಳಿಂದ ದುಃಖವು ನಿಯತವೇ ಆಗಿದೆ. (ದುಃಖಿಯಿಂದೊಡಗೂಡಿ ಇದ್ದರೂ ದುಃಖವು ಬಾರದಿರಲಿಕ್ಕೆ ಶ್ರೀ ಹರಿಯಂತೆ ಸ್ವಾತಂತ್ರ್ಯ ರೂಪ ಕಾರಣವು ಪ್ರಮಿತವಾಗಲಿಲ್ಲ. ಆ ದುಃಖವು ಯಜ್ಞಾದಿಗಳ ಫಲವೇ. ಆಗಮನಾದಿಗಳು ಯಜ್ಞಾದಿಗಳ ಫಲವೆಂದು ಪ್ರಮಿತವೇ ಆಗಿದೆ. ಯಾಗಗಳಲ್ಲಿ ಹಿಂಸೆಯಿದ್ದುದರಿಂದ ಅವರಿಂದ ಪಾಪವೂ ಕೂಡಬಹುದು. ಏವಂಚ ಸುಖ ಸಾಧನವೆಂದು ವೇದಗಳಲ್ಲಿ ಹೇಳಿದ ಕರ್ಮವು ಹೇಗೆ, ದುಃಖಸಾಧನವೋ, ಹಾಗೆಯೇ ವೈರಾಗ್ಯವೂ ದುಃಖಸಾಧನವು. ಆದಕಾರಣ ವೈರಾಗ್ಯವನ್ನು ಹೊಂದಬೇಕಾಗಿಲ್ಲ, ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ—ಕಾರಣಾ ಭಾವಃ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (ಯಾಗಾದಿಗಳಲ್ಲಿ ಹಿಂಸೆಯು ಇದ್ದರೂ ಅದು ಪಾಪಕ್ಕೆ ಕಾರಣವಲ್ಲ. ಶಾಸ್ತ್ರದಲ್ಲಿ ನಿಷಿದ್ಧವಾದ ಹಿಂಸೆಯೇ ಪಾಪಕ್ಕೆ ಕಾರಣವು.) ಯಾಗೀಯ ಹಿಂಸೆಯು 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬುವ ಶ್ರುತಿವಿಹಿತವಾದ ಪ್ರಯುಕ್ತ ವ್ರೀಹ್ಯಾದಿ ಭಾವವು ಪ್ರಾಪ್ತವಾದರೂ ಪಾಪಃಖ್ಯಕಾರಣವಿಲ್ಲದಿರುವುದರಿಂದ ದುಃಖವಿಲ್ಲ. (ಏವಂಚ ಸುಖಕ್ಕೆ ಸಾಧನ ವೆಂದು ಹೇಳಲ್ಪಟ್ಟ ಕರ್ಮವು ದುಃಖಕ್ಕೆ ಸಾಧನವಾಗದಿರುವುದರಿಂದ ಮುಕ್ತಿಗೆ ಸಾಧನವಾದ ವೈರಾಗ್ಯವನ್ನು ಹೊಂದಲೇಬೇಕು.) ॥ ೧೮ ॥

೧೯ನೇ ರೇತಸ್ಸಿಗಧಿಕರಣದಲ್ಲಿ 'ಯೋ ವಾ ರೇತಸ್ಸಿಂಚತಿ ತಮೇವಾನುವಿಶತಿ' ಯಾವನು ರೇತ ಸ್ಸೇಕ ಮಾಡುತ್ತಾನೋ ಅತನನ್ನೇ ಪ್ರವೇಶಿಸುತ್ತಾನೆಂದು ಶ್ರುತಿಯು ಇದೆ, ಆದರೆ ತಂದೆಯನ್ನು ಪ್ರವೇಶಿ ಸುವುದರಲ್ಲಿ ಪ್ರಯೋಜನವು ಕಾಣುವುದಿಲ್ಲ, ಆದಕಾರಣ ಕರ್ಮಿಯು ತಂದೆಯನ್ನು ಪ್ರವೇಶಿಸುತ್ತಾನೋ

ಇಲ್ಲವೋ ಎಂದು ಸಂದೇಹವು ಬಂದರೆ ಪ್ರವೇಶಿಸುವುದಿಲ್ಲ ಎಂದು ಪೂರ್ವಪಕ್ಷವು. ಅದರಲ್ಲಿ ವೈಯರ್ಥ್ಯಂ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

**ಮೂ ॥ (೧) ನ ಚ ವೈಯರ್ಥ್ಯಾತ್ ಪಿತೃಶರೀರಾಗಮನಂ ॥ (೨) ಈಶಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಂ॥ ಇತೀಶಕ್ಲೃಪ್ತೇಶ್ಚ ವಚನಾತ್ ॥ ೧೯ ॥**

ಅ ॥ (೧) ತಂದೆಯ ಶರೀರವನ್ನು ಪ್ರವೇಶಿಸುವುದು ವ್ಯರ್ಥವಾದ ಪ್ರಯುಕ್ತ ಕರ್ಮಿಯು ತಂದೆಯ ಶರೀರವನ್ನು ಹೊಂದುವುದಿಲ್ಲ, ಅಂದರೆ ಸ್ವರ್ಗದಿಂದ ಬರಲಿಕ್ಕೆ ಮಹಾಪ್ರಯಾಸವಿಲ್ಲದಿರುವುದರಿಂದ ಕರ್ಮಾದಿಗಳಲ್ಲಿ ಅತಿ ವೈರಾಗ್ಯವನ್ನು ಹೊಂದಬೇಕಾಗಿಲ್ಲ, ಎನ್ನುವ ಪೂರ್ವಪಕ್ಷವು ಯುಕ್ತವಲ್ಲ. (ಏಕೆಂದರೆ ಕ್ಲೃಪ್ತಿಃ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ)ಶ್ರೀ ಹರಿಯ ನಿಯಮದಿಂದಲೇ ಮೊದಲು ತಂದೆಯನ್ನು ಪ್ರವೇಶಿಸಿ ತದ್ದ್ವಾರಾ ತಾಯಿಯನ್ನು ಪ್ರವೇಶಿಸುತ್ತಾನೆ ಎಂದು ಶ್ರೀ ಹರಿಯ ಸಂಕಲ್ಪವಿದೆ. (ಏವಂಚ ಶರೀರ ಪರಿಣಾಮಕ್ಕಾಗಿ ರೇತಸ್ಸು ಅಪೇಕ್ಷಿತವಾದ ಪ್ರಯುಕ್ತ ಕರ್ಮಿಗಳಿಗೆ ಪಿತೃ ಪ್ರವೇಶವು ಆವಶ್ಯಕವೇ, ಶ್ರೀ ಹರಿಯ ಸಂಕಲ್ಪಾನುಸಾರವೇ ಪಿತೃ ಪ್ರವೇಶವು ಇದ್ದುದರಿಂದ, ಸ್ವರ್ಗದಿಂದ ಬರಲಿಕ್ಕೆ ಮಹಾಪ್ರಯಾಸವಿದ್ದುದರಿಂದ ವೈರಾಗ್ಯವನ್ನು ಸಂಪಾದಿಸಲೇಬೇಕು. ॥ ೧೯ ॥

೨೦ನೇ ಯೋನ್ಯಧಿಕರಣದಲ್ಲಿ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸುವುದು, ಪ್ರವೇಶಿಸದಿರುವುದು ಇವುಗಳಲ್ಲಿ ಅನುಪಪತ್ತಿಯು ಕಾಣದಿರುವುದರಿಂದ ಪಿತೃದ್ವಾರಾ ಮಾತೃ ಯೋನಿಯನ್ನು ಪ್ರವೇಶಿಸಿ ಅನಂತರ ಶರೀರವನ್ನು ಹೊಂದುತ್ತಾನೋ ಇಲ್ಲವೋ, ಎಂದು ಸಂಶಯವು ಬಂದರೆ—ಪಿತೃದ್ವಾರಾ ಮಾತೃ ಯೋನಿಯನ್ನು ಪ್ರವೇಶಿಸಿಯೇ ಶರೀರವನ್ನು ಹೊಂದುವುದೆಂಬ ನಿಯಮವಿಲ್ಲ, ಎಂದು ಪೂರ್ವಪಕ್ಷವು. ಪಿತೃದ್ವಾರಾ ಮಾತೃ ಯೋನಿಯನ್ನು ಪ್ರವೇಶಿಸಿಯೇ ಶರೀರವನ್ನು ಹೊಂದುವುದೆಂದು ಸಿದ್ಧಾಂತವು. ಅದರಲ್ಲಿ ಅನ್ಯಥಾಗತಿಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ತಿರಸ್ಕರಿಸುತ್ತಾರೆ.

**ಮೂ ॥ ನ ಚ ಪಿತುಸ್ಸಕಾಶಾದನ್ಯತೋ ವಾ ಔದರ್ಯಗರ್ಭಸ್ಥಶರೀರಮೇವ ಪ್ರವೇಷ್ಟುಮುಪಪತ್ತೇರ್ಯೋನಿಪ್ರವೇಶಾಭಾವ ಇತಿ ವಾಚ್ಯಂ ॥ (೨) ಯೋನಿದ್ವಾರೇಣ ವೈದೇಹಂ ಪ್ರಾಪ್ನೋತಿ ಪ್ರಾಯಶೋ ನರಃ॥ ಇತಿ ವಚನಾತ್ಸಾಮಾನ್ಯತೋ ಗತ್ಯಂತರಾಭಾವಾತ್ ॥ (೩) ವಿಶೇಷಕಾರಣಾದೇವ ವಿಶೇಷಾಜ್ಜನಿರಿಷ್ಯತೇ । ಸಾಮಾನ್ಯಜನನಂ ಚೈವ ನೃಣಾಂ ಸಾಮಾನ್ಯಹೇತುನೇತಿ ವಚನಾಚ್ಚ ॥ ೨೦ ॥**

ಅ ॥ (೧)(ದೇಹಂ ಗರ್ಭಸ್ಥಿತಂ ವಾತಿ ಎಂಬ ಪ್ರಮಾಣದಿಂದ ಮಾತೃಯೋನಿ ಪ್ರವೇಶವೇ ಇಲ್ಲ. ಅಥವಾ ಮಾತೃಪ್ರವೇಶವಿದ್ದರೂ ಪಿತನ ದ್ವಾರದಿಂದಲೇ ಪ್ರವೇಶಿಸುವುದು ಎಂಬ ನಿಯಮವಿಲ್ಲ. ಮತ್ತೆ) ತಂದೆಯಿಂದಲಾಗಲೀ, ಇತರವಾದ ಅನ್ನಾದಿಗಳಿಂದಾಗಲೀ, ತಾಯಿಯ ಉದರದ ಗರ್ಭದಲ್ಲಿರತಕ್ಕ ಶರೀರವನ್ನು ಪ್ರವೇಶಿಸುವುದು ಯುಕ್ತವಾಗಿರುವುದರಿಂದ ಯೋನಿ ಪ್ರವೇಶವು ಆವಶ್ಯಕವಲ್ಲ, (ಅಂತೂ ಶರೀರವನ್ನು ಹೊಂದಲಿಕ್ಕೆ ಅತಿ ಪ್ರಯಾಸವಿಲ್ಲದಿರುವುದರಿಂದ ವೈರಾಗ್ಯವನ್ನು ಹೊಂದಬೇಕಾಗಿಲ್ಲ.) ಎಂಬ ಪೂರ್ವಪಕ್ಷವು ಯುಕ್ತವಲ್ಲ. (೨) (ಏಕೆಂದರೆ) ಅಥಾಗತಿಃ (ಬೇರೆ ರೀತಿಯಾಗಿ ದೇಹಪ್ರಾಪ್ತಿಯಾಗುವುದಿಲ್ಲ.) ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಾಯಶಃ ಮನುಷ್ಯನು ಮಾತೃ ಯೋನಿ ದ್ವಾರಾ ಶರೀರವನ್ನು ಹೊಂದುತ್ತಾನೆಂಬ ವಚನದಿಂದ ಸಾಮಾನ್ಯವಾಗಿ (ಅಂದರೆ ಅಪವಾದವಿಲ್ಲದಿದ್ದರೆ) ಅನ್ನ

ದ್ವಾರಾದಿರೂಪವಾದ ಪ್ರಕಾರಾಂತದಿಂದ ದೇಹಪ್ರಾಪ್ತಿಯಾಗುವುದಿಲ್ಲ. ಅಥವಾ ಅನ್ನಾದಿದ್ವಾರಾ ಮಾತೃ ಶರೀರಪ್ರಾಪ್ತ್ಯಾದಿರೂಪ ವಿಶೇಷದಿಂದ ಹುಟ್ಟಲಿಕ್ಕೆ ದೇವಾದಿಗಳ ವರಾದಿಗಳು ಬೇಕು. ವರಾದಿಗಳು ಇಲ್ಲದೆ ಆ ರೀತಿಯಾಗಿ ದೇಹಪ್ರಾಪ್ತಿಯಾಗಲಾರದು (೩) (ಹೇಗೆಂದರೆ) ವರಾಧಿರೂಪವಾದ ವಿಶೇಷಕಾರಣದಿಂದಲೇ ವಿಶೇಷತಃ ಜನಿಯು ಇಷ್ಟವಾಗಿದೆ. ಮನುಷ್ಯರಿಗೆ ಸಾಮಾನ್ಯ ಹೇತುವಿನಿಂದ ಸಾಮಾನ್ಯತಃ ಉತ್ಪತ್ತಿಯು. (ಅಂದರೆ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿಯೇ ಉತ್ಪತ್ತಿಯು) ಎಂದು ಪ್ರಮಾಣವು. (ಅಂತೂ ಬೇರೆ ರೀತಿ ಕೂಡದಿರುವುದರಿಂದ ಪಿತೃದ್ವಾರಾ ಮಾತೃಯೋನಿಪ್ರವೇಶದಿಂದ ಮೊದಲು ಅಸಿದ್ಧವಾದ ಶರೀರದ ಪ್ರಾಪ್ತಿಯಾಗುತ್ತದೆ. ಆದಕಾರಣ ಶರೀರ ಪ್ರಾಪ್ತಿಯಾಗಲಿಕ್ಕೆ ಬಹುದುಃಖವಿದ್ದ ಪ್ರಯುಕ್ತ ಅವಶ್ಯವಾಗಿ ವೈರಾಗ್ಯವನ್ನು ಸಂಪಾದಿಸಬೇಕು,) ॥ ೨೦ ॥

ಇತಿ ಶ್ರೀಮದಾನಂದತೀರ್ಥ ಭಗತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯವಿವರಣೇ
ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ।
ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ
ಶ್ರೀಮನ್ನ್ಯಾಯ ವಿವರಣದಲ್ಲಿ ೩ನೇ ಅಧ್ಯಾಯದಲ್ಲಿ ೧ನೇ ಪಾದವು ಸಮಾಪ್ತವಾಯ್ತು

# ೨ನೇ ಪಾದವು

ಅವ || ವೈರಾಗ್ಯದಿಂದ ಸಾಧ್ಯವಾದ ಉಪಾಸನೆಗೆ ಸಾಧನವಾದ ಭಕ್ತಿಯು ಪುರುಷರ ಪ್ರಯತ್ನಕ್ಕೆ ಗೋಚರವಾಗದಿರುವಕಾರಣ ವಿಧೇಯವಾಗಲಾರದು. ಆದಕಾರಣ ಭಕ್ತಿಯು ಹುಟ್ಟುವುದಕ್ಕಾಗಿ ಶ್ರೀ ಭಗವಂತನ ಮಹಿಮೆಯನ್ನು ಪ್ರತಿಪಾದಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುವರು.

ಪಶ್ಚಾದದೃಷ್ಟ್ಯವಿಜ್ಞಾನ ಕಾಲದುಃಖ ಪೃಥಗ್ಭವಾಃ |
ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸತೋಭವಃ ||
ಗುಣಸಾಮ್ಯಮಯೋಗಶ್ಚ ತರ್ಕಬಾಧೋ ವಿಲೋಮತಾ |
ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ ||
ಅಶಕ್ಯಕರ್ತೃತಾಶಕ್ತಿಃ ಸ್ವತೋಽಬೋಧಸ್ತಥೈವ ಚ | (ದೇವಚ)
ಅಮಾನಕ್ಲೃಪ್ತಿಃ ಸನ್ಮಾನ ವ್ಯವಸ್ಥಾಽತ್ಯಲ್ಪತಾ ಭವಃ ||
ವಿಶೇಷ ದೃಷ್ಟಿ ವಾಕ್ಯೇಚ ಪುಂಶಕ್ತಿಃ ಸುನಿದರ್ಶನಂ |
ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯಪ್ರಮಾಃ ||

(೧) ಪಶ್ಚಾದದೃಷ್ಟಿಃ = ಎಚ್ಚತ್ತ ಮೇಲೆ ಸ್ವಪ್ನ ಪದಾರ್ಥವು ತೋರದಿರುವಿಕೆ (೨) ಅವಿಜ್ಞಾನಂ = ಬಾಹ್ಯ ವಸ್ತುಗಳ ಜ್ಞಾನವಿಲ್ಲದಿರುವಿಕೆಯು, (೩) ಕಾಲವು (೪) ದುಃಖವು (೫-೬-೭) ಪೃಥಗ್ಭವಃ = ಪ್ರತ್ಯೇಕವಾಗಿ ಕಾಣದಿರುವಿಕೆ, (೮) ಸ್ಥಾನಭೇದಃ = ದೇವಾದಿಗಳ ಶರೀರಗಳಿಗೆ ಭೇದವು. (೯) ವಿರುದ್ಧತ್ವಂ = ರೂಪಾರೂಪ ವಚನಗಳಿಗೆ ವಿರೋಧವು. (೧೦) ನ್ಯಾಯಸಾಮ್ಯಂ = ಚೇತನತ್ವನ್ಯಾಯದಿಂದ ಶ್ರೀ ಹರಿಗೆ ಸಾಮ್ಯವು, (೧೧) ಸತೋಭವಃ ಇದ್ದುದಕ್ಕೆ ಅಭಿವ್ಯಕ್ತಿಯು. (೧೨) ಗುಣಸಾಮ್ಯಂ = ಮುಕ್ತತ್ವ ಮೊದಲಾದ ಗುಣಗಳಿಂದ ಸಾಮ್ಯವು. (೧೩) ಅಯೋಗಃ = ಸಂಹಾರಾಭಾವದಿಂದ ಬೇರೆಯಾದ ರಕ್ಷಣೆಯು ಕೂಡದಿರುವಿಕೆ. (೧೪) ತರ್ಕಬಾಧಃ = ಅವ್ಯಕ್ತ ಸ್ವಭಾವವುಳ್ಳ ಶ್ರೀಹರಿಗೆ ದರ್ಶನವಾದರೆ ತರ್ಕಬಾಧವು. (೧೫ ೧೬) ವಿಲೋಮತಾ = ವಿರೋಧವು. (೧೭-೧೮-೧೯) ನಾನಾಭಾವಃ = ಅನೇಕ ಪ್ರಕಾರವಿರುವಿಕೆಯು. (೨೦) ಪ್ರಲೋಭಃ ವಂಚನೆಯು = ಇವು ಪೂರ್ವ ಪಕ್ಷದಲ್ಲಿದ್ದ ಯುಕ್ತಿಗಳು. (೧) ಅಶಕ್ಯಕರ್ತೃತಾಶಕ್ತಿಃ = ಅಶಕ್ಯವಾದುದನ್ನು. ಸೃಷ್ಟಿಸತಕ್ಕ ಶಕ್ತಿಯು. (೨) ಸ್ವತೋಽಬೋಧಃ = ಸ್ವತಂತ್ರವಾಗಿ ಪ್ರಬೋಧವಾಗದಿರುವಿಕೆಯು. (೩) ಕಾಲಕ್ಕೆ ಅಚೇತನತ್ವವು. (೪) ಅಮಾನ ಕ್ಲೃಪ್ತಿಃ = ಶ್ರೀಪರಮಾತ್ಮನಲ್ಲಿಯೇ ಸುಪ್ತಿ ಎಂದಂಗೀಕರಿಸದಿದ್ದರೆ ಮಾನಕ್ಲೃಪ್ತ್ಯಕಾರಣವು. (೫) ಸನ್ಮಾನಂ = ಯುಕ್ತಿ ರೂಪ ಸತ್ಪ್ರಮಾಣವು. (೬) ಸನ್ಮಾನಂ = ಶ್ರುತಿರೂಪ ಪ್ರಮಾಣ. (೭) ಸನ್ಮಾನಂ = ಪರಿಶೇಷ ಪ್ರಮಾಣ. (೮) ವ್ಯವಸ್ಥಾ = ಭೇದ ಶ್ರುತಿಯು ಸ್ಥಾನಭೇದ ವಿಷಯಕವೆಂದೇ ವ್ಯವಸ್ಥೆಯು (೯) ವ್ಯವಸ್ಥಾ = ಪ್ರಾಕೃತ ರೂಪವು. ಇಲ್ಲವೆಂದು ಪ್ರತಿಪಾದಿಸುವಿಕೆ ಎಂಬ ವ್ಯವಸ್ಥೆಯು (೧೦) ಅತ್ಯಲ್ಪತಾ = ಜೀವನಿಗೆ ಅಲ್ಪ ಗುಣಗಳಿರುವಿಕೆ. (೧೧) ಭವಃ = ಅನಾದಿತಃ ಸಂಸಾರವಿರುವಿಕೆ. (೧೨) ವಿಶೇಷದೃಷ್ಟಿಃ = ಶ್ರುತಿಗಳಿಂದ ಸಾಧ್ಯ. ಸಾಧನ ತಾರತಮ್ಯ ರೂಪ ವಿಶೇಷಗಳು

ತೋರುವುದು. (೧೩) ವಾಕ್ಯಂ=ವಿಶೇಷ ವಾಕ್ಯವು. (೧೪) ಪುಂಶಕ್ತಿಃ=ವಿಷ್ಣುವಿನ ಶಕ್ತಿಯು (೧೫) ಸುನಿದರ್ಶನಂ=ಕಾಲ ಮೊದಲಾದ ಶೋಭನ ದೃಷ್ಟಾಂತವು. (೧೬) ಅಲೌಕಿಕತ್ವಂ=ಶಬ್ದಗಳಲ್ಲಿ ಅಲೌಕಿಕತ್ವವೆಂದರೆ ವೈದಿಕತ್ವವು ಅರ್ಥಗಳಲ್ಲಿ ಅಪ್ರಾಕೃತತ್ವವು. (೧೭) ಆಧಿಕ್ಯಂ=ಬಿಂಬ ಭೂತನಾದ ಶ್ರೀಹರಿಗೆ ಐಶ್ವರ್ಯ ರೂಪ ಆಧಿಕ್ಯವು.(೧೮) ಆಧಿಕ್ಯಂ=ವಿಷ್ಣುವಿಗೆ ನಿರ್ದೋಷತ್ವಾದ್ಯಾಧಿಕ್ಯವು. (೧೯) ಸ್ವಾತಂತ್ರ್ಯಂ ಶ್ರೀ ಹರಿಗೆ ಸರ್ವಸ್ವಾತಂತ್ರ್ಯವು. (೨೦) ಶ್ರೀಹರಿಗೇನೇ ಫಲವನ್ನು ಕೊಡುವುದರಲ್ಲಿ ಮುಖ್ಯಕರ್ತೃತ್ವವು. ಇವು ಸಿದ್ಧಾಂತ ಯುಕ್ತಿಗಳು. ೧ನೇ ಸಂಧ್ಯಾಧಿಕರಣದಲ್ಲಿ ವಾದಿಗಳ ವಿಪ್ರತಿಪತ್ತಿಯಿಂದ ಸ್ವಪ್ನವು ಶ್ರೀ ಹರಿಯ ಅಧೀನವೋ, ಅಲ್ಲವೋ ಎಂದು ಸಂಶಯವು ಬಂದರೆ ಅಲ್ಲವೆಂದು ಪೂರ್ವಪಕ್ಷವು. ಅಧೀನವೇ ಎಂದು ಸಿದ್ಧಾಂತವು. ಅದರಲ್ಲಿ ಪಶ್ಚಾದದೃಷ್ಟೇಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ಶಿರಸ್ಕರಿಸುತ್ತಾರೆ.

ಮೂ || ಹರಿಃ ಓಂ || (೧) ಪಶ್ಚಾದದೃಷ್ಟೇಃ ಸ್ವಪ್ನವಿಷಯಸ್ಯಾಸತ್ತ್ವಂ ನ ವಾಚ್ಯಂ || (೨) ಅಶಕ್ಯಕರಣ ಶಕ್ತಿಮತ್ತ್ವಾದೀಶ್ವರಸ್ಯ ಸಂಸ್ಕಾರೇಣ ಸೃಷ್ಟ್ವಾ ಪುನಃ ಸಂಸ್ಕಾರ ಮಾತ್ರತಾಮಾಪಾದ್ಯ ತಸ್ಯಾಪಿ ತಿರೋಧಾನೋಪಪತ್ತೇಃ | ಜಾಗ್ರತ್ವಮಾತ್ರಸ್ಯ ಭ್ರಾಂತಿತ್ವಾತ್ || ೧ ||

ಅ || (೧) (ಸ್ವಪ್ನವು ಅರ್ಥಜ್ಞಾನ ಸ್ವರೂಪವು. ಅಂತಹ ಸ್ವಪ್ನದಲ್ಲಿ ತೋರತಕ್ಕ ಗಜಾದಿಗಳು ಸತ್ಯಗಳಾಗದಿರುವುದರಿಂದ ಶ್ರೀಹರಿಯ ಅಧೀನಗಳೆನ್ನುವುದು ಕೂಡಲಾರದು. ಇವುಗಳು ಅನಾದಿನಿತ್ಯಗಳೆಂದೂ ಹೇಳಕೂಡದು. ಏಕೆಂದರೆ-ಸ್ವಪ್ನಾವಸ್ಥೆಗಿಂತ ಮೊದಲೂ ಮೇಲೆಯೂ ತೋರಬೇಕಾಗುವುದು. ಇತರರಿಗೆ ತೋರದಿರುವುದರಿಂದ ಅನ್ಯತ್ರ ಹೋಗಿವೆ ಎಂದೂ ಹೇಳಕೂಡದು. ಸ್ವಾಪ್ನಾಃ ಪದಾರ್ಥಾಃ ನಾನಾದಿನಿತ್ಯಾಃ ಮಧ್ಯಮಪರಿಮಾಣೋಪೇತತಯಾ ದೃಶ್ಯಮಾನತ್ವಾತ್ ಘಟವತ್=ಸ್ವಪ್ನದಲ್ಲಿ ತೋರುವ ಗಜಾದಿಗಳು ಅನಾದಿನಿತ್ಯಗಳಲ್ಲ. ಮಧ್ಯಮಪರಿಮಾಣ ವಿಶಿಷ್ಟವಾಗಿ ತೋರುವುದರಿಂದ ಘಟಾದಿಗಳಂತೆ ಎಂಬ ಅನುಮಾನ ವಿರೋಧವೂ ಬರುತ್ತದೆ. ಇವು ಉತ್ಪತ್ತಿ ವಿನಾಶವುಳ್ಳವುಗಳೂ ಅಲ್ಲ. ಹಾಗಿದ್ದರೂ ಘಟಾದಿಗಳಂತೆಯೇ ಮೊದಲೂ ಮೇಲೆಯೂ ತೋರಬೇಕಾಗುವುದು. ಮಿಂಚು ಮೊದಲಾದವುಗಳಂತೆಯೇ ತತ್ಕಾಲದಲ್ಲಿಯೇ ಹುಟ್ಟುತ್ತವೆ, ವಿನಾಶ ಹೊಂದುತ್ತವೆ ಎಂದರೆ ಆ ವಿಷಯದಲ್ಲಿ ಪ್ರಮಾಣವಿಲ್ಲ. ಅಲ್ಲದೆ ತತ್ಕಾಲದಲ್ಲಿಯೇ ಹುಟ್ಟುತ್ತದೆ ಎಂಬಲ್ಲಿ ಉಪಾದಾನಕಾರಣ ನಿಮಿತ್ತಕಾರಣಗಳನ್ನು ಕಾಣಲಾರೆವು ಮತ್ತು ಅವಿದ್ಯಮಾನಗಳಾದ ಗಜಾದಿಗಳನ್ನೇ ಕಂಡೆನು; ಎಂದು ಉತ್ತರ ಕಾಲದಲ್ಲಿ ಅನುಭವವೂ ಇದೆ. ಮತ್ತು ಅಸತ್ಯಗಳೆನ್ನುವ ವಿಷಯದಲ್ಲಿ 'ಸ್ವಪ್ನಮಾಯಾ ಸರೂಪೇತಿ' 'ಸ್ವಪ್ನಮನೋರಥೋ ಯಥಾ' ಇತ್ಯಾದಿ ಶ್ರುತಿ ಸ್ಮೃತಿಗಳೂ ಇವೆ ಇತ್ಯಾದಿ ಕಾರಣಗಳಿಂದ) ಸ್ವಪ್ನಕಾಲದಲ್ಲಿ ತೋರುವ ಗಜಾದಿಗಳು ಮೊದಲೂ ಮೇಲೆಯೂ ತೋರದಿರುವುದರಿಂದ ಸತ್ಯಗಳಲ್ಲ. (ಪ್ರಪಂಚ ಸ್ವಾಪ್ನ ವಸ್ತುಗಳೂ ಅಸತ್ಯಗಳಾಗಿರುವುದರಿಂದ ಅಸತ್ಯವಾದುದಕ್ಕೆ ಭಗವದಧೀನತ್ವವು ಕೂಡದಿರುವುದರಿಂದ ಶ್ರೀಹರಿಗೆ ಮಹಾಮಹಿಮೆಯು ಇಲ್ಲ ಎಂದು) ಹೇಳಕೂಡದು. (ಏಕೆಂದರೆ ಅಶಕ್ಯಕರ್ತೃತಾಶಕ್ತಿಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (೨) ಸರ್ವೇಶ್ವರನಾದ ಶ್ರೀಹರಿಗೆ ಇತರರಿಗೆ ಅಶಕ್ಯವಾದುದನ್ನು ಸೃಷ್ಟಿಸತಕ್ಕ ಅಪರಿಮಿತ ಶಕ್ತಿಯಿದೆ. ಆದಕಾರಣ ಶ್ರೀಹರಿಯು ಅನಾದಿಯಾಗಾಯ್ತು ಮನಸ್ಸಿನಲ್ಲಿರತಕ್ಕ ಪೂರ್ವಾನುಭವದಿಂದ ಉಪಚಿತಗಳಾದ ಸಂಸ್ಕಾರಗಳನ್ನು ಪಾದಾನಕಾರಣವನ್ನಾಗಿಟ್ಟುಕೊಂಡು ನಿಮಿತ್ತಕಾರಣವಾದ ತನ್ನ ಇಚ್ಛೆಯಿಂದ ಸ್ವಪ್ನಕಾಲದಲ್ಲಿಯೇ ಸ್ವಾಪ್ನಗಜಾದಿಗಳನ್ನು ಸೃಷ್ಟಿಮಾಡಿ ಪುನಃ ಕೇವಲ ಸಂಸ್ಕಾರ ಸ್ವರೂಪತ್ವವನ್ನೇ ಹೊಂದಿಸಿಕೊಟ್ಟು ಜೀವನಿಗೆ ತೋರಿಸುತ್ತಾನೆ. ಹೀಗೆ ಶ್ರೀಹರಿಯು ಸ್ವಾಪ್ನಗಜಾದಿಗಳನ್ನು ಸೃಷ್ಟಿಸಿ

ಸಂಸ್ಕಾರ ಮಾತ್ರತ್ವವನ್ನು ಮಾತ್ರ ಹೊಂದಿಸಿಕೊಡುವುದಲ್ಲ. ಮತ್ತೆ ಅವುಗಳ ಜ್ಞಾನವನ್ನು ಹುಟ್ಟಿಸಿ ಆ ಕಾಲದಲ್ಲಿಯೇ ಆ ಜ್ಞಾನವನ್ನು ಅಡಗಿಸುತ್ತಾನೆ. (ಹಾಗಾದರೆ ಸ್ವಪ್ನವು ಸತ್ಯವಾದರೆ ಅವಿದ್ಯಮಾನಗಳಾದ ಗಜಾದಿಗಳನ್ನು ಕಂಡೆನು ಎಂದು ಉತ್ತರಕಾಲದಲ್ಲಿ ಬರತಕ್ಕ ಅನುಭವವಿರೋಧವು ಎಂದರೆ) ಇದು ಸ್ವಾಪ್ನ ವಸ್ತುವೇ, ಜಾಗ್ರದ್ದೆಶೆಯಲ್ಲಿ ಅನುಭೂತವಾದ ವಸ್ತುವಲ್ಲ, ಎಂದನುಭವವಿದ್ದುದರಿಂದ ಜಾಗ್ರತ್ವ (ಜಾಗ್ರದವಸ್ಥೆಯಲ್ಲಿ ಅನುಭೂತಗಳಾದ ವಸ್ತುಗಳಿಂದ ಅಭೇದ) ಪ್ರತೀತಿಯೇ ಭ್ರಾಂತಿಯು. ಇದು ಆನೆಯಲ್ಲ, ಇತ್ಯಾದಿ ಬಾಧವಿಲ್ಲದಿರುವುದರಿಂದ ಸ್ವಾಪ್ನ ಪದಾರ್ಥಸ್ವರೂಪ ಪ್ರತೀತಿಯು ಭ್ರಾಂತಿಯಲ್ಲ. (ಹೀಗೆ ಸ್ವಾಪ್ನಪದಾರ್ಥಗಳು ಸತ್ಯಗಳಾದರೆ 'ಸ್ವಪ್ನಮಾಯಾ ಸ ರೂಪೇತಿ 'ಸ್ವಪ್ನಮನೋರಥೋ ಯಥಾ' ಇದು ಮೊದಲಾದ ಶ್ರುತಿ ಸ್ಮೃತಿಗಳು ಅಸತ್ಯಗಳೆಂದು ಹೇಗೆ ತಿಳಿಸುವವು. ಎಂದರೆ) ಜಾಗ್ರತ್ವ ಪ್ರತೀತಿಯು ಮಾತ್ರ ಭ್ರಾಂತಿಯಾದುದರಿಂದ ಆ ಶ್ರುತ್ಯಾದಿಗಳು ಜಾಗ್ರತ್ವಪ್ರತೀತಿಗೆ ಮಾತ್ರ ಭ್ರಾಂತಿತ್ವವನ್ನು ಪ್ರತಿಪಾದಿಸುತ್ತವೆ. ಸ್ವಾಪ್ನ ಪದಾರ್ಥ ಸ್ವರೂಪಕ್ಕೆ ಭ್ರಾಂತಿತ್ವವನ್ನು ಹೇಳುವವುಗಳಲ್ಲ. (ಏವಂಚ ಶ್ರೀಹರಿಗೆ ಇತರರಿಗೆ ಸರ್ವಥಾ ಅಶಕ್ಯವಾದುದನ್ನು ಸೃಷ್ಟಿಸಲಿಕ್ಕೆ ಶಕ್ತಿಯಿದ್ದ ಪ್ರಯುಕ್ತ ಸ್ವಾಪ್ನಪದಾರ್ಥಗಳನ್ನು ಶ್ರೀಹರಿಯೇ ಸೃಷ್ಟಿಸಿರುವುದರಿಂದ ಕೇವಲ ಶ್ರೀಹರಿಯ ಅಧೀನಗಳೇ ಆಗಿರುತ್ತವೆ. ಆದುದರಿಂದ ಶ್ರೀಹರಿಗೆ ಮಹಾಮಹಿಮೆಯು ಯುಕ್ತವು) ॥ ೧ ॥

೨ನೇ ಪರಾಭಿಧ್ಯಾನಾಧಿಕರಣದಲ್ಲಿ ಸರ್ವವೂ ಭಗವದಧೀನವೇ ಎಂದು ಹೇಳಿದೆ. ವಿಶೇಷೋಕ್ತಿಯು ಇಲ್ಲ. ಆದಕಾರಣ ಸ್ವಪ್ನತಿರೋಭಾವವು ಶ್ರೀಹರಿಯ ಅಧೀನವೋ, ಅಲ್ಲವೋ, ಎಂದು ಸಂಶಯವು ಬಂದರೆ ಅಲ್ಲವೆಂದು ಪೂರ್ವಪಕ್ಷವು. ಅಧೀನವೇ ಎಂದು ಸಿದ್ಧಾಂತವು. ಅದರಲ್ಲಿ **ಅವಿಜ್ಞಾನಂ** ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ತಿರಸ್ಕರಿಸುತ್ತಾರೆ.

**ಮೂ ॥(೧) ನ ಚಾವಿಜ್ಞಾನಮಾತ್ರೇಣ ಸ್ವಪ್ನಪ್ರತೀತ್ಯಾ ಜ್ಞಾನಶಕ್ತ್ಯೈವ ಸ್ವಪ್ನತಿರೋಧಾನಂ ನೇಶೇನೇತಿ ವಾಚ್ಯಂ (೨) ಬೋಧೇ ಜೀವಸ್ಯಾಸ್ವಾತಂತ್ರ್ಯಾತ್ । (೩) ಜ್ಞಾನಾಜ್ಞಾನಯೋಸ್ತದನ್ಯತ್ವೇ ಜಡತ್ವಾತ್ಕೈಮುತ್ಯೇನಾಸ್ವಾತಂತ್ರ್ಯಾತ್ । ತತ್ಸ್ವರೂಪತ್ವೇ ತೇನೈವ ವ್ಯಾಖ್ಯಾತತ್ವಾತ್। ಉಭಯಾತ್ಮಕತ್ವೇ ದೋಷದ್ವಯಾಪಾತಾತ್। ಅನುಭಯತ್ವೇ ಸ್ವವ್ಯಾಹತೇಃ । (೪) ತಾವನ್ಮಾತ್ರ ನಿಮಿತ್ತತ್ವೇ ಮಾನಾಭಾವಾತ್ । ಸರ್ವಸ್ಯೇಶಹೇತುತ್ವೇ ಮಾನಾಚ್ಚ ॥ ೨ ॥**

ಅ ॥ (೧) ಬಾಹ್ಯ ಪದಾರ್ಥ ಜ್ಞಾನವಿಲ್ಲದಿರುವುದರಿಂದಲೇ ಸ್ವಪ್ನವು ಪ್ರತೀತವಾಗುತ್ತದೆ. ಆದಕಾರಣ ಜ್ಞಾನಶಕ್ತಿಯಿಂದಲೇ ಸ್ವಪ್ನತಿರೋಭಾವವೂ ಕೂಡುತ್ತದೆ. ಶ್ರೀ ಹರಿಯ ಶಕ್ತಿಯಿಂದ ಸ್ವಪ್ನತಿರೋಧಾನವಲ್ಲ. (ಆದಕಾರಣ ಶ್ರೀ ಹರಿಗೆ ಮಹಾಮಾಹಾತ್ಮ್ಯೆಯು ಇಲ್ಲ.) ಎಂದು ಹೇಳಕೂಡದು. (೨) (ಏಕೆಂದರೆ ಸ್ವತೋಽಬೋಧಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ನಿದ್ದೆಯಿಂದ ಎಚ್ಚರಿಕೆಯನ್ನು ಹೊಂದಲಿಕ್ಕೆ ಜೀವನಿಗೆ ಸ್ವಾತಂತ್ರ್ಯವಿಲ್ಲ. (೩) ಸ್ವಪ್ನಕ್ಕೆ ಅಜ್ಞಾನವು ನಿಮಿತ್ತವಾಗಿರುವ ಕಾರಣ ಜ್ಞಾನದಿಂದಲೇ ಸ್ವಪ್ನತಿರೋಧಾವವು ಕೂಡುವುದರಿಂದ ಜೀವನಿಗೆ ಅಸ್ವಾತಂತ್ರ್ಯವನ್ನು ಹೇಳಿದ್ದು ಏಕೆ? ಎಂದರೆ (1) ಜ್ಞಾನಾಜ್ಞಾನಗಳು ಜೀವನಿಂದ ಅಭಿನ್ನಗಳೋ, (2) ಜೀವಸ್ವರೂಪಗಳೋ (3) ಭಿನ್ನಾಭಿನ್ನಗಳೋ, (4) ಭಿನ್ನತ್ವ ಅಭಿನ್ನತ್ವಗಳ ರಾಹಿತ್ಯ ರೂಪ ಅನುಭಯತ್ವವೋ ಎಂಬ ವಿಕಲ್ಪಗಳನ್ನು ಇಟ್ಟುಕೊಂಡು ಕ್ರಮದಿಂದ ಎಲ್ಲವನ್ನೂ ದೂಷಿಸುತ್ತಾರೆ.) (1) ಜ್ಞಾನ ಅಜ್ಞಾನಗಳು ಜೀವನಿಂದ ಭಿನ್ನಗಳೆಂದಾದರೆ ಅವುಗಳು ಜಡಗಳಾಗಿರುವುದರಿಂದ ಸುತರಾಂ ಅಸ್ವತಂತ್ರಗಳು. ಅಂದರೆ ಚೇತನನಾದ

ಜೀವನಿಗೇನೇ ಅಸ್ವಾತಂತ್ರ್ಯವಿದ್ದಮೇಲೆ ಜಡರೂಪಗಳಾದ ಜ್ಞಾನ ಅಜ್ಞಾನಗಳಿಗೆ ಅಸ್ವಾತಂತ್ರ್ಯವು ಸುತರಾಂ ಸಿದ್ಧ ಎಂಬ ಅಭಿಪ್ರಾಯದಿಂದ ಕೈಮುತ್ಯೇನ ಎಂದದ್ದು. (ಈಶ್ವರ ಲಕ್ಷ್ಮೀ ಭಿನ್ನತ್ವವಿದ್ದು ಜೀವ ಭಿನ್ನತ್ವವು, ಜಡತ್ವದಲ್ಲಿ ಹೇತುವೆಂದುಕ್ತವಾಯ್ತು) (2) ಜ್ಞಾನ ಅಜ್ಞಾನಗಳು ಜೀವ ಸ್ವರೂಪಗಳೆಂದಾದರೆ ಅಸ್ವತಂತ್ರನಾದ ಜೀವನಿಂದಲೇ ವ್ಯಾಖ್ಯಾತವಾಯ್ತು. (ಅಂದರೆ ಜ್ಞಾನ ಅಜ್ಞಾನಗಳೂ ಜೀವನಂತೆ ಅಸ್ವತಂತ್ರಗಳಾದುದರಿಂದ ನಿದ್ರಿತನಾದವನನ್ನು ಎಚ್ಚರಿಸಲಿಕ್ಕೆ ಕಾರಣಗಳಾಗಲಾರವು.) (3) ಜ್ಞಾನಾಜ್ಞಾನಗಳು ಭಿನ್ನ ಅಭಿನ್ನ ಉಭಯ ಸ್ವರೂಪಗಳೆಂದಾದರೆ ಭಿನ್ನತ್ವವನ್ನು ಇಟ್ಟುಕೊಂಡರೆ ಜಡವಾದ ಪ್ರಯುಕ್ತ ಸುತರಾಂ ಅಸ್ವಾತಂತ್ರ್ಯವು ಅಭಿನ್ನತ್ವವನ್ನು ಇಟ್ಟುಕೊಂಡರೆ ಜೀವರಲ್ಲಿರತಕ್ಕ ಅಸ್ವಾತಂತ್ರ್ಯವು ಬರುವುದು ಹೀಗೆ ಎರಡು ದೋಷಗಳೂ ಬರುವವು. (4) ಭಿನ್ನವು ಆಗುವುದಿಲ್ಲ ಎಂದು ಹೇಳಿದರೆ ಅಭಿನ್ನವೆಂದೇ ಹೇಳಿದ ಹಾಗಾಯ್ತು. ಭಿನ್ನಾಭಿನ್ನದಲ್ಲಿ ಅಭೇದಸಾಹಿತ್ಯವಿಲ್ಲದಿರುವುದರಿಂದ ಪುನಃ ಅಭಿನ್ನವಾಗುವುದಿಲ್ಲ, ಎಂದು ಹೇಳಿದರೆ ವ್ಯಾಹತಿಯು. ಹೀಗೆಯೇ ಅಭಿನ್ನವಾಗುವುದಿಲ್ಲ ಎಂದು ಹೇಳಿದರೆ ಭಿನ್ನವೆಂದೇ ಹೇಳಿದ ಹಾಗಾಯ್ತು. ಭಿನ್ನಾಭಿನ್ನದಲ್ಲಿ ಭೇದಸಾಹಿತ್ಯವಿಲ್ಲದಿರುವುದರಿಂದ ಪುನಃ ಭಿನ್ನವಾಗುವುದಿಲ್ಲ ಎಂದು ಹೇಳಿದರೆ ಸ್ವವ್ಯಾಹತಿಯು. (೪) (ಅಜ್ಞಾನಾದಿಗಳು ಸ್ವಪ್ನಾದಿ ನಿಮಿತ್ತಕವೆಂದು ಪ್ರಮಾಣ ಸಿದ್ಧವಾದ ಪ್ರಯುಕ್ತ ಈ ಅನುಪಪತ್ತಿಯು ಹೇಗೆ? ಎಂದರೆ) ಸ್ವಪ್ನಾದಿಗಳು ಅಜ್ಞಾನಾದಿ ಮಾತ್ರದಲ್ಲಿ ನಿಮಿತ್ತ ಕಾರಣಗಳೆಂಬ ವಿಷಯದಲ್ಲಿ ಪ್ರಮಾಣವಿಲ್ಲ. (ಅನುಭವವು ಇದ್ದರೂ ಅದು ಜ್ಞಾನ ಅಜ್ಞಾನಗಳಿಗೆ ನಿಮಿತ್ತ ಕಾರಣತ್ವವನ್ನು ಮಾತ್ರ ವಿಷಯೀಕರಿಸುತ್ತವೆ.) ಇಷ್ಟು ಮಾತ್ರವಲ್ಲದೆ ಸರ್ವವೂ ಶ್ರೀ ಹರಿಯ ಅಧೀನವೇ ಎನ್ನುವಲ್ಲಿ 'ನ ಋತೇ ತ್ವತ್ಕ್ರಿಯತೇ ಎನ್ನುವ ಪ್ರಮಾಣವು ಇದೆ (ಏವಂಚ ಜೀವನಿಗೆ ಸ್ವತಂತ್ರನಾಗಿ ಪ್ರಬೋಧವಾಗದಿರುವಪ್ರಯುಕ್ತ ಜ್ಞಾನಾದಿಗಳು ಜಡಗಳಾಗಿರುವ ಕಾರಣಸುತರಾಂ ಸ್ವಾತಂತ್ರ್ಯವು ಕೂಡದಿರುವುದರಿಂದ ಶ್ರೀ ಹರಿಯೇ ಸ್ವಪ್ನತಿರೋಧಾನವನ್ನು ಮಾಡುವವನು.) ॥ ೨ ॥

ಇನ್ನೇ ದೇಹಯೋಗಾಧಿಕರಣದಲ್ಲಿ ಹಿಂದೆ ಹೇಳಿದ ಪ್ರಕಾರ ಜಾಗ್ರದವಸ್ಥೆಯು ಭಗವದಧೀನವ್ರೋ ಅಲ್ಲವೋ ಎಂದು ಸಂಶಯವು ಬಂದರೆ—ಅಲ್ಲವೆಂದು ಪೂರ್ವಪಕ್ಷವು. ಭಗವದಧೀನವೇ ಎಂದು ಸಿದ್ಧಾಂತವು. ಅದರಲ್ಲಿ ಕಾಲಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಸೂ ॥ (೧) ನ ಚ ಕಾಲಾಪೇಕ್ಷಯೈವ ಜಾಗರಿತಂ । (೨) ಅಚೇತನತ್ವಾದೇವ ಕಾಲಸ್ಯ ॥
(೩) ಚೇತನಾಂತರಸ್ಯಾಪ್ಯಸ್ವಾತಂತ್ರ್ಯಾತ್ ॥ ೩ ॥

ಅ ॥ (೧) ಕಾಲವನ್ನಪೇಕ್ಷಿಸಿಯೇ ಎಚ್ಚರಿಕೆಯುಂಟಾಗುವುದು. (ಆದಕಾರಣ ಶ್ರೀಹರಿಗೆ ಮಹಾಮಹಿಮೆಯು ಇಲ್ಲ, ಎಂದರೆ ಹಾಗೆಹೇಳಕೂಡದು. (೨) ಏಕೆಂದರೆ—ತದೆ ವ=(ಸ್ವತೋಽಪ್ರಬೋಧಃ ಎಂಬಲ್ಲಿ ಅಭಿಪ್ರೇತವಾದ ಅಸ್ವಾತಂತ್ರ್ಯಕ್ಕೆ ನಿಮಿತ್ತಭೂತವಾದ ಅಚೇತನತ್ವವೇ) ಎಂದು ಹೇಳಿದ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಕಾಲವು ಜಡವಾಗಿರುವುದರಿಂದ ಅಸ್ವತಂತ್ರವಾಗಿರುವ ಪ್ರಯುಕ್ತ ಜಾಗರಣವು ಕಾಲಾಧೀನವಲ್ಲ. (೩) (ಕಾಲವು ಅಚೇತನವಾಗಿರುವುದರಿಂದ ಜಾಗರಣವು ಕಾಲಾಧೀನವಾಗುವುದು ಬೇಡ. ಆದಾಗ್ಯೂ ಭಗವದಧೀನವೆನ್ನುವುದು ಕೂಡುವುದಿಲ್ಲ. ಅದು ಜೀವನ ಅಧೀನವು. ಜಾಗರಣದಲ್ಲಿ ಜೀವನಿಗೆ ಸ್ವಾತಂತ್ರ್ಯವು ತೋರುತ್ತದೆ ಎಂದರೆ.) ಹಾಗೆ ಹೇಳಕೂಡದು. ಜೀವನಿಗೆ ಸ್ವಾತಂತ್ರ್ಯವು ತೋರುವುದು ಭ್ರಾಂತಿಯು. ಏಕೆಂದರೆ ಜಿಜ್ಞಾಭೇದಾದಿಗಳಿಂದ ಯಾವ ಜೀವರಿಗೂ ಸ್ವಾತಂತ್ರ್ಯವಿಲ್ಲವೆಂಬುದು ಅಪಾಮರಾದಿಸಾಧಾರಣವಾಗಿದೆ. (ಏವಂಚ ಕಾಲವು ಅಚೇತನವಾಗಿರುವುದರಿಂದ ಈಶ್ವರನಿಗೇನೇ ಜಾಗ್ರದವಸ್ಥಾಪ್ರೇರಕತ್ವವು. ಆದಕಾರಣ ಶ್ರೀಹರಿಗೆ ಮಹಾಮಾಹಾತ್ಮ್ಯವು ಯುಕ್ತವು) ॥ ೩ ॥

೪ನೇ ತದಭಾವಾಧಿಕರಣದಲ್ಲಿ 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' 'ಯತ್ರೈತತ್ಸುಪ್ತಃ ಸಂಪನ್ನಃ ಸ್ವಪ್ನಂ ನ ವಿಜಾನಾತ್ಯಾಸು ನಾಡೀಷು ಸುಪ್ತೋ ಭವತಿ ಎಂಬ ೨ ಶ್ರುತಿಗಳಿಂದ ಸುಪ್ತಿಯು ಶ್ರೀ ಪರಮಾತ್ಮನಲ್ಲಿಯೋ, ನಾಡಿಗಳಲ್ಲಿಯೋ, ಎಂದು ಸಂಶಯವು ಬಂದರೆ ಶ್ರೀಹರಿಯಲ್ಲಿಯೇ, ನಾಡಿಗಳಲ್ಲಿ ಅಲ್ಲ, ಎಂದು ಪೂರ್ವಪಕ್ಷವು ನಾಡಿಗಳಲ್ಲಿರತಕ್ಕ ಶ್ರೀ ಪರಮಾತ್ಮನಲ್ಲಿ ಎಂದು ಸಿದ್ಧಾಂತವು. ಅದರಲ್ಲಿ ದುಃಖಾ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪರಮಾತ್ಮನೋಽನ್ಯತ್ರಾವಸ್ಥಾನೇ ದುಃಖಿತ್ವಪ್ರಾಪ್ತೇರ್ನಾಡೀಷು ಸುಪ್ತಿರ್ನ ಭವತಿ ॥ (೨) ಉಭಯಸ್ವೀಕಾರೋಪಪತ್ತೌ ಮಾನಸ್ಯ ಕ್ಲೃಪ್ತ್ಯಕರಣಮಿತ್ಯವ್ಯವಸ್ಥಿತಿದೋಷಾದತಿಪ್ರಸಂಗಾತ್ ॥ ೪ ॥

ಅ ॥ (೧) ಜಾಗ್ರದವಸ್ಥೆ ಸ್ವಪ್ನಾವಸ್ಥೆ ಇವುಗಳಲ್ಲಿ ಜೀವನು ಶ್ರೀಪರಮಾತ್ಮನಿಂದ ಬೇರೆ ಕಡೆ ಇರುವುದಾದರೆ ಜೀವನಿಗೆ ದುಃಖವು ತೋರುವುದರಿಂದ ನಾಡಿಗಳಲ್ಲಿ ಸುಪ್ತಿಯು ಆಗುವುದಿಲ್ಲ. (ಆದಕಾರಣ ದುಃಖವಿಲ್ಲದಿರುವುದರಿಂದ ಶ್ರೀ ಪರಮಾತ್ಮನಲ್ಲಿಯೇ ಸುಪ್ತಿಯು. ಎಂದರೆ ಹಾಗೆ) ಹೇಳಕೂಡದು. (೨) ಏಕೆಂದರೆ ಅಮಾನಕ್ಲೃಪ್ತಿಃ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ನಾಡಿಗಳಲ್ಲಿರತಕ್ಕ ಶ್ರೀಪರಮಾತ್ಮನಲ್ಲಿ ಸುಪ್ತಿಯನ್ನು ಅಂಗೀಕರಿಸಿದರೆ (ಅಂದರೆ ನಾಡಿಗಳಲ್ಲಿಯೂ ಶ್ರೀ ಪರಮಾತ್ಮನಲ್ಲಿಯೂ ಸುಪ್ತಿಯು ಹೀಗೆ ಎರಡನ್ನು ಸ್ವೀಕರಿಸಿದರೆ) ಪ್ರಮಾಣಭೂತವಾದ 'ಸತಾ ಸೋಮ್ಯ ತದಾ ಸಂಪನ್ನಃ' 'ನಾಡೀಷು ಸುಪ್ತೋ ಭವತಿ' ಎನ್ನುವ ಎರಡು ಶ್ರುತಿಗಳಿಗೂ ವ್ಯವಸ್ಥೆಯು ಉಪಪನ್ನವಾಗುವುದಾದರೂ ಉದಾಹರಿಸಿದ ಪ್ರಮಾಣಕ್ಕೆ ನಾಡಿಗಳಲ್ಲಿರತಕ್ಕ ಶ್ರೀಪರಮಾತ್ಮನಲ್ಲಿ ಸುಪ್ತಿಯೆಂಬ ಕ್ಲೃಪ್ತಿಯನ್ನು (ವ್ಯವಸ್ಥೆಯನ್ನು) ಒಡಂಬಡದಿದ್ದರೆ ಅವ್ಯವಸ್ಥೆಯು. (ಅಂದರೆ ಎಲ್ಲಾ ಕಡೆಯಲ್ಲಿಯೂ ಪ್ರಮಾಣದಿಂದ ಪ್ರಮೇಯವನ್ನು ವ್ಯವಸ್ಥೆ ಮಾಡಬೇಕು. ಅದು ಇಲ್ಲವೆಂದಾಗುವುದು.) ಆ ದೋಷದಿಂದ ಪ್ರಮಾಣದಲ್ಲಿ ವ್ಯವಸ್ಥಾಭಾವರೂಪದೋಷದಿಂದ ಅತಿಪ್ರಸಂಗವು (ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದುದನ್ನು ಪರಿತ್ಯಾಗಮಾಡಬೇಕಾಗುವುದು. ಅಥವಾ ವಿರುದ್ಧಗಳಾದ ೨ ಪ್ರಮಾಣಗಳಲ್ಲಿ ಒಂದು ಪ್ರಮಾಣಕ್ಕೆ ಅಪ್ರಾಮಾಣ್ಯವನು ಸ್ವೀಕರಿಸಬೇಕಾಗುವುದು. (ಅಂತೂ ಶ್ರೀಪರಮಾತ್ಮನಲ್ಲಿಯೇ ಸುಪ್ತಿಯೆಂದು ಅಂಗೀಕರಿಸಿದರೆ ಅವ್ಯವಸ್ಥಾದೋಷವು ಬರುವುದರಿಂದ ನಾಡಿಗಳಲ್ಲಿರತಕ್ಕ ಶ್ರೀಪರಮಾತ್ಮನಲ್ಲಿಯೇ ಸುಪ್ತಿಯು.) ॥ ೪ ॥

೫ನೇ ಪ್ರಬೋಧಾಧಿಕರಣದಲ್ಲಿ ಸರ್ವವೂ ಭಗವದಧೀನವೆಂದು ಹೇಳಿದೆ. ಸುಪ್ತಿಪ್ರಬೋಧವು (ನಿದ್ರೆಯಿಂದ ಎಚ್ಚರಿಕೆಯು) ಭಗವದಧೀನವೆಂದು ವಿಶೇಷೋಕ್ತಿಯು ಇಲ್ಲ. ಆದಕಾರಣ ಸುಪ್ತಿಪ್ರಬೋಧವು ಭಗವದಧೀನವೋ ಅಲ್ಲವೋ ಎಂದು ಸಂಶಯವು ಬಂದರೆ ಕೇವಲ ಈಶ್ವರನ ಅಧೀನವಲ್ಲವೆಂದು ಪೂರ್ವಪಕ್ಷವು. ಕೇವಲ ಈಶ್ವರಾಧೀನವೆಂದು ಸಿದ್ಧಾಂತವು. ಅದರಲ್ಲಿ ಪೃಥಗ್ಭವಃ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪ್ರಬೋಧಸ್ಯ ಪೃಥಗಪಿ ಕಾರಣದೃಷ್ಟೇಃ ಕ್ವಚಿತ್ತದೇವ ॥ (೨) ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಇತಿ ಶ್ರುತೇಸ್ತತ್ರಾಪಿ ಈಶಕೃತತ್ವೇ ಸಮ್ಯಜ್ಞಾನಾತ್ ॥ ೫ ॥

ಅ ॥ ನಿದ್ರೆಯಿಂದ ಎಚ್ಚರಿಕೆಯಾಗಲಿಕ್ಕೆ ಊರೂನ್ಮಥನ ಭೇರೀತಾಡನ ಮೊದಲಾದ ಬೇರೆ ಕಾರಣಗಳೂ ಇದ್ದುದರಿಂದ ಕೆಲವು ಕಡೆ ಊರೂನ್ಮಥನ, ಭೇರೀತಾಡನ ಮೊದಲಾದವುಗಳೇ ಕಾರಣವು. ಶ್ರೀ

ಹರಿಯು ಕಾರಣನಲ್ಲ. ಎಲ್ಲಿ ಕಾರಣಾಂತರಗಳಿದ್ದರೂ ಅಕಸ್ಮಾತ್ ಪ್ರಬೋಧ (ಎಚ್ಚರಿಕೆ) ಹಾಗುತ್ತದೋ, ಅಲ್ಲಿ ಶ್ರೀಹರಿಯು ಕಾರಣನಲ್ಲ ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಸನ್ಮಾನಂ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಬೋಧಾದಿಗಳನ್ನು ಶ್ರೀಹರಿಯೇ ಮಾಡುತ್ತಾನೆನ್ನುವ ವಿಷಯದಲ್ಲಿ ನ ಋತೇ ನೀನು ಹೊರತು ಯಾವ ವಸ್ತುವೂ ಮಾಡಲ್ಪಡುವುದಿಲ್ಲ ಎಂದು ಸ್ಪಷ್ಟಾರ್ಥವುಳ್ಳ ಶ್ರುತಿಯು ಇವೆ. ಮತ್ತು ಭೇರೀತಾಡನಾದಿಗಳು ಕಾರಣಗಳು ಎಂದು ಪರರು ಎಲ್ಲಿ ಹೇಳುತ್ತಾರೋ ಅಲ್ಲಿಯೂ ಶ್ರೀ ಹರಿಯೇ ಮಾಡುತ್ತಾನೆನ್ನುವ ವಿಷಯದಲ್ಲಿ ಸ್ಪಷ್ಟಾರ್ಥವುಳ್ಳ ಯುಕ್ತಿಯುಕ್ತವಾದ ಶ್ರುತಿರೂಪ ಪ್ರಮಾಣ ಇದೆ. (ಏವಂಚ ಇತರವಾದವುಗಳನ್ನು ನಿಷೇಧಿಸಿ ಶ್ರೀ ಹರಿಯೇ ನಿದ್ರಿತರನ್ನು, ಎಚ್ಚರಿಸುವವನು, ಎಂದು ಹೇಳಿದ ಪ್ರಯುಕ್ತ ನಿರವಕಾಶವೂ ಅಪೌರುಷೇಯವೂ ಆದ ನ ಋತೇ ಎಂಬ ಶ್ರುತಿಯಿಂದ ಶ್ರೀಹರಿಯೇ ಪ್ರಬೋಧವನ್ನು ಮಾಡುವವನು.) ||೫||

೬ನೇ ಕರ್ಮಾನುಸ್ಮೃತ್ಯಧಿಕರಣದಲ್ಲಿ ಜಾಗ್ರದವಸ್ಥಾದಿಗಳು ಶ್ರೀಹರಿಯ ಅಧೀನಗಳೆಂದು ಪ್ರತಿಪಾದಿಸುವ ವಾಕ್ಯಕ್ಕೆ ಎರಡು ರೀತಿಯಾಗಿಯೂ ಅರ್ಥವು ಕೂಡುವುದರಿಂದ ಎಲ್ಲಾ ಜೀವರ ಎಲ್ಲಾ ಅವಸ್ಥೆಗಳೂ ಶ್ರೀಹರಿಯ ಅಧೀನಗಳೋ ಅಥವಾ ಕೆಲವು ಜೀವರ ಕೆಲವು ಕಾಲಗಳಲ್ಲಿರತಕ್ಕ ಅವಸ್ಥೆಗಳು ಮಾತ್ರ ಭಗವಂತನ ಅಧೀನಗಳೋ ಎಂದು ಸಂಶಯವು ಬಂದರೆ ಕೆಲವು ಜೀವರ ಕಿಂಚಿತ್ಕಾಲದಲ್ಲಿರತಕ್ಕ ಅವಸ್ಥೆಗಳು ಮಾತ್ರ ಶ್ರೀಹರಿಯ ಅಧೀನಗಳೆಂದು ಪೂರ್ವಪಕ್ಷವು ಸರ್ವಜೀವರ ಸರ್ವಕಾಲಗಳಲ್ಲಿರತಕ್ಕಎಲ್ಲಾ ಅವಸ್ಥೆಗಳೂ ಶ್ರೀಪರಮಾತ್ಮನ ಅಧೀನಗಳೇ, ಎಂದು ಸಿದ್ಧಾಂತವು. ಅದರಲ್ಲಿ ಪೃಥಗ್ಭವಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ || (೧) ನ ಚ ರಾಜಾದೀನಾಂ ಪೃಥಗ್ದರ್ಶನಾದೀಶಾಂತರಕಲ್ಪನಾ || (೨) ದೇಶಕಾಲವಿಶೇಷೇऽಪಿ ಸ್ವಪ್ನಾದೀನಾಂ ಸ ಏವ ಹಿ | ತಿರಸ್ಕರ್ತಾ ಚ ಕರ್ತಾಚ ನ ಖಂಡೇಶಃ ಸ ರಾಜವತ್ || ಇತಿ ಶ್ರುತಿಮಾನಾತ್ ||೬||**

ಅ || (೧) ರಾಜಾದಿಗಳು ಪ್ರಪ್ರತ್ಯೇಕವಾಗಿ ಖಂಡರಾಜ್ಯಾಧಿಪತಿಗಳಾಗಿ ಕಂಡುದರಿಂದ ದೇಶ ಕಾಲಾದಿ ಭೇದದಿಂದ ಬೇರೆ ಬೇರೆ ನಿಯಾಮಕರನ್ನು ಕಲ್ಪಿಸಲೇ ಬೇಕು. (ಅಂತೂ ಈಶ್ವರಃ ಖಂಡೇಶೋ ಭವಿತುಮರ್ಹತಿ ಅಧಿಪತಿತ್ವಾತ್ ರಾಜಾದಿವತ್ = ರಾಜಾದಿಗಳು ಪ್ರಪ್ರತ್ಯೇಕ ಖಂಡರಾಜ್ಯಾಧಿಪತಿಗಳಾಗಿ ಕಂಡಂತೆ ಶ್ರೀಹರಿಯೂ ಖಂಡಾಧಿಪತಿಯು ಆಗುವನು. ಆದಕಾರಣ ಶ್ರೀಹರಿಗೆ ಸರ್ವಾವಸ್ಥಾ ಪ್ರೇರಕತ್ವವು ಇಲ್ಲ. ಎಂದರೆ ಹಾಗೆ) ಹೇಳಕೂಡದು. (೨) (ಏಕೆಂದರೆ ಸನ್ಮಾನಂ ಎಂಬ ನ್ಯಾಯವನ್ನೇ ವಿವರಿಸುತ್ತಾರೆ) ಸರ್ವದೇಶವಿಶೇಷಗಳಲ್ಲಿಯೂ ಸರ್ವಕಾಲ ವಿಶೇಷಗಳಲ್ಲಿಯೂ ಶ್ರೀಹರಿಯೊಬ್ಬನೇ ಸ್ವಪ್ನಾದಿಗಳನ್ನು ಜೀವನಿಗೆ ಮಾಡುತ್ತಾನೆ. ತಿರಸ್ಕರಿಸುತ್ತಾನೆ. ರಾಜನಂತೆ ಖಂಡಾಧಿಪತಿಯಲ್ಲ, ಆದಕಾರಣ ಸರ್ವದೇಶಕಾಲಗಳಲ್ಲಿ ಶ್ರೀಹರಿಯೇ ವಿಶಿಷ್ಟವಾದ ಸ್ವಪ್ನಾದಿಗಳನ್ನು ಮಾಡುತ್ತಾನೆ. ತಿರಸ್ಕರಿಸುತ್ತಾನೆ ಎಂದು ಪ್ರತಿಪಾದಿಸುವ ಸಮಾಚೀನವಾದ ನಿರವಕಾಶವಾದ ಪ್ರಮಾಣವಿದ್ದ ಪ್ರಯುಕ್ತ ಶ್ರೀಹರಿಯೇ ಸರ್ವಾವಸ್ಥೆಗಳಿಗೂ ಪ್ರೇರಕನು. || ||

೭ನೇ ಸಂಪತ್ತ್ಯಧಿಕರಣದಲ್ಲಿ ಎರಡು ವಿಧಗಳಾದ ಅವಸ್ಥೆಗಳು ಕಾಣುವುದರಿಂದ ಮೂರ್ಛಾವಸ್ಥೆಯು ಶ್ರೀ ಪರಮಾತ್ಮನಲ್ಲಿಯೋ ಬೇರೆ ಕಡೆಗಳಲ್ಲಿಯೋ?, ಎಂದು ಸಂಶಯವು ಬಂದರೆ ಶ್ರೀಹರಿಯಲ್ಲಿಯೇ ಎಂದು ಪೂರ್ವಪಕ್ಷವು. ಶ್ರೀಹರಿಯಲ್ಲಿ ಅರ್ಧಪ್ರಾಪ್ತಿಯೆಂದು ಸಿದ್ಧಾಂತವು. ಅದರಲ್ಲಿ, ಪೃಥಗ್ಭವಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಮೋಹೇ ಬ್ರಹ್ಮಪ್ರಾಪ್ತಿರೇವ ಪೃಥಗವಸ್ಥಾತ್ವಾದಿತಿವಾಚ್ಯಂ ॥ (೨) ಪರಿಶೇಷಪ್ರಮಾಣಾದರ್ಥಪ್ರಾಪ್ತಿತ್ವಾವಗಮಾತ್ ॥ ೭ ॥**

ಅ ॥ (೧) ಮೋಹವು ಸ್ವಪ್ನಾದ್ಯವಸ್ಥೆಗಳಿಂದ ಬೇರೆ ಅವಸ್ಥೆಯಾಗಿದ್ದುದರಿಂದ ಪರಬ್ರಹ್ಮನ ಪ್ರಾಪ್ತಿ ಯಾದರೆ ಕೇವಲ ಸುಖವೇ ಪ್ರಸಕ್ತವಾಗುವ ಪ್ರಯುಕ್ತ ಬ್ರಹ್ಮ ಪ್ರಾಪ್ತಿಯಲ್ಲ. (ಅಂತೂ ಮೂರ್ಛಾ ವಸ್ಥೆಯು ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಿಂದ ಪ್ರತ್ಯೇಕವಾಗಿರುವುದರಿಂದ ಪರಮಾತ್ಮನಲ್ಲಿ ಸಮಗ್ರ ಪ್ರವೇಶ ವೆಂದರೆ ಸುಪ್ತಿಯಿಂದ ಸಾಂಕರ್ಯವು ಬರುವುದರಿಂದ ಮೂರ್ಛಾವಸ್ಥೆಯು ಪ್ರತ್ಯೇಕವೇ. ಆದಕಾರಣ ಶ್ರೀಹರಿಯು ಮೂರ್ಛಾವಸ್ಥೆಯನ್ನು ಪ್ರವರ್ತಿಸುವವನಲ್ಲ, ಎಂದರೆ ಹಾಗೆ ಹೇಳಕೂಡದು. (೨) ಏಕೆಂದರೆ -ಸನ್ನ್ಯಾಸಂ ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಸುಖದುಃಖಗಳು ಎರಡೂ ಇಲ್ಲದಿರುವುದ ರಿಂದ ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಂತೆ ಅಲ್ಲ. ಕೇವಲ ಸುಖವೂ ಇಲ್ಲದಿರುವುದರಿಂದ ಸುಪ್ತಿಯಂತೆಯೂ ಅಲ್ಲ. ಆದಕಾರಣ ಪರಿಶೇಷಪ್ರಮಾಣದಿಂದ ಶ್ರೀಪರಮಾತ್ಮನಲ್ಲಿ ಅರ್ಥಪ್ರಾಪ್ತಿಯೆಂದು ತಿಳಿಯುತ್ತದೆ.

ವಿ॥ (1) ಮೋಹಾವಸ್ಥೆಯು ಸುಪ್ತಿಯಲ್ಲಿ ಸೇರಲಾರದು. ದುಃಖಮಾತ್ರಪ್ರತಿಸ್ಮೃತೇಃ ಎಂಬ ಪ್ರಮಾಣದಿಂದ ಮೋಹದಲ್ಲಿ ಏತಾವಂತಂ ಕಾಲಂ ದುಃಖಮನ್ವಭವಂ ಎಂದು ದುಃಖಾನುಸಂಧಾನವಿದೆ. ಸುಪ್ತಿಯಲ್ಲಿ ದುಃಖಾನುಸಂಧಾನವಿಲ್ಲ. (2) ಮೋಹದಲ್ಲಿ ದುಃಖ ಆತ್ಮ ಕಾಲಗಳಿಂದ ಬೇರೆ ವಿಷಯಗಳು ಕಾಣದಿರುವುದರಿಂದ ಜಾಗ್ರತ್ಸ್ವಪ್ನಗಳಲ್ಲಿ ಅಂತರ್ಭೂತವಾಗಲಾರದು. ಅಂತೂ ಮೋಹಃ ಪ್ರಸಿದ್ಧಾವಸ್ಥಾಭ್ಯಃ ಪೃಥಕ್, ಅನುಪಪನ್ನಾಂತರ್ಭಾವೇ ಸತ್ಯವಸ್ಥಾತ್ವಾತ್ ಎನ್ನುವ ಪರಿಶೇಷಾನುಮಾನದಿಂದ ಮೂರ್ಛಾ ವಸ್ಥೆಯು ಪ್ರತ್ಯೇಕವೇ. (3) ಮೋಹದಲ್ಲಿ ದುಃಖಾನುಸಂಧಾನವಿದ್ದುದರಿಂದ ಸಮಗ್ರ ಬ್ರಹ್ಮ ಪ್ರಾಪ್ತಿಯು ಕೂಡುವುದಿಲ್ಲ. ಕಾಲ, ಆತ್ಮ ದುಃಖಗಳಿಂದ ಬೇರೆ ಅರ್ಥಗಳು ಕಾಣದಿರುವುದರಿಂದ ಸರ್ವಥಾ ಅಪ್ರಾ ಪ್ತಿಯೂ ಅಲ್ಲ. ಆದಕಾರಣ ಅರ್ಥಪ್ರಾಪ್ತಿಯೆಂದೇ ಅಂಗೀಕರಿಸಬೇಕು. (4) ಏವಂಚ ಪರಿಶೇಷ ಪ್ರಮಾಣ ದಿಂದ ಮೋಹವು ಅರ್ಥಪ್ರಾಪ್ತಿರೂಪವಾದ ಪ್ರತ್ಯೇಕ ಅವಸ್ಥೆಯಾದುದರಿಂದ ಶ್ರೀಹರಿಯೇ ಮೋಹಾವಸ್ಥೆಗೆ ಪ್ರವರ್ತಕನು. ॥ ೭ ॥

ಅನೇನ ಸ್ಥಾನತೋಽಪ್ಯಧಿಕರಣದಲ್ಲಿ ಅನೇಕಸ್ಥಾನಗಳಲ್ಲಿರತಕ್ಕ ಘಟಾದಿಗಳಿಗೆ ಭೇದವೂ, ಆಕಾ ಶಾದಿಗಳಿಗೆ ಅಭೇದವೂ ಕಂಡುದರಿಂದ ಎಲ್ಲಾ ಶರೀರಗಳಲ್ಲಿ ಜಾಗ್ರದಾದಿ ಸ್ಥಾನಗಳಲ್ಲಿರತಕ್ಕ ಶ್ರೀಹರಿಯು ಪರಸ್ಪರ ಭಿನ್ನನೋ, ಅಭಿನ್ನನೋ, ಎಂದು ಸಂಶಯವು ಬಂದರೆ ಭಿನ್ನನೇ ಎಂದು ಪೂರ್ವಪಕ್ಷವು. ಅಭಿ ನ್ನನೇ ಎಂದು ಸಿದ್ಧಾಂತವು. ಅದರಲ್ಲಿ ಸ್ಥಾನಭೇದಃ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಸ್ಥಾನಭೇದಾದ್ವಿಷ್ಣೋರಪಿ ಭೇದಃ ॥ (೨) 'ಅಯಮೇವ ಸಃ' ನೇಹ ನಾ ನಾಸ್ತಿ ಕಿಂಚನೇತ್ಯಾದಿ ಶ್ರುತಿಬಲಾತ್ ಸ್ಥಾನಾನಾಂ ಭೇದಃ ತಸ್ಯಾಭೇದ ಇತಿ ವ್ಯವ ಸ್ಥೋಪಪತ್ತೇಃ ॥ ೮ ॥**

ಅ ॥ (೧) ಸುರ ಅಸುರ ಮನುಷ್ಯಾದಿಗಳ ಶರೀರಗಳಿಗೂ ದಕ್ಷಿಣಾಕ್ಷಿ ಮೊದಲಾದ ಸ್ಥಾನಗಳಿಗೂ ಭೇದವಿದ್ದುದರಿಂದ ಅಲ್ಲಿರತಕ್ಕ ಶ್ರೀಹರಿಗೂ ಭೇದವು. (ಅಂತೂ ಪ್ರತಿಶರೀರಂ ಜಾಗ್ರದಾದಿ ಸ್ಥಾನೇಷು ಸ್ಥಿತಃ ಪರಮಾತ್ಮಾ ಅನ್ಯೋನ್ಯಂ ಭಿನ್ನಃ ಭಿನ್ನಸ್ಥಾನತ್ವಾತ್ ಘಟಪಟವತ್ = ಪ್ರತಿ ಶರೀರಗಳಲ್ಲಿ ಜಾಗ್ರ ದಾದಿ ಸ್ಥಾನಗಳಲ್ಲಿರತಕ್ಕ ಶ್ರೀಪರಮಾತ್ಮನು ಪರಸ್ಪರ, ಭಿನ್ನನು ಬೇರೆ ಬೇರೆ ಸ್ಥಾನಗಳಲ್ಲಿದ್ದ ಪ್ರಯುಕ್ತ

ಘಟಪಟಾದಿಗಳಂತೆ. ಏವಂಚ ಸ್ಥಾನಭೇದದಿಂದ ಅಲ್ಲಲ್ಲಿರತಕ್ಕ ಶ್ರೀಹರಿಗೂ ಭೇದವಿದ್ದುದರಿಂದ ಭಿನ್ನ ಪದಾರ್ಥಗಳಿಗೆ ಗುಣಗಳಲ್ಲಿ ತಾರತಮ್ಯವೂ ಅನುಗ್ರಾಹ್ಯ ಅನುಗ್ರಾಹಕ ಭಾವವೂ ಕಂಡುದರಿಂದ ಶ್ರೀಹರಿಗೆ ಮಹಾಮಹಿಮೆಯು ಇಲ್ಲ, ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ವ್ಯವಸ್ಥಾ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಅಯಮೇವ ಸಃ ನೇಹ ನಾನಾಸ್ತಿ ಇದು ಮೊದಲಾದ ಶ್ರುತಿಗಳ ಬಲ ದಿಂದ ಜಾಗ್ರದಾದಿಸ್ಥಾನಗಳಿಗೆ ಮಾತ್ರ ಭೇದವು. ಶ್ರೀಹರಿಗೆ ಅಭೇದವೇ ಎಂದು ವ್ಯವಸ್ಥೆಯು ಕೂಡುತ್ತದೆ. (ಏವಂಚ ಅಭೇದ ಶ್ರುತಿಯು ನಿರವಕಾಶವಾಗಿರುವುದರಿಂದ ಪ್ರಬಲವಾದ ಕಾರಣ ಅದನ್ನನುಸರಿಸಿ ಭೇದ ಶ್ರುತಿಯು ಅಕ್ಷ್ಯಾದಿ ಸ್ಥಾನಗಳ ಭೇದವನ್ನು ವಿಷಯೀಕರಿಸುತ್ತದೆ, ಎಂದೇ ವ್ಯವಸ್ಥೆಯು ಕೂಡುವುದ ರಿಂದ ಅನುಮಾನವು ಅಭೇದ ಶ್ರುತಿಯಿಂದ ಬಾಧಿತವಾಗುತ್ತದೆ. ಆದಕಾರಣ ಶ್ರೀಹರಿಗೆ ಸ್ಥಾನಭೇದ ಪ್ರಯುಕ್ತ ಭೇದವಿಲ್ಲದಿರುವುದರಿಂದ ಅನುಗ್ರಾಹ್ಯ ಅನುಗ್ರಾಹಕಭಾವವಿಲ್ಲದಿರುವಪ್ರಯುಕ್ತ ಮಹಾ ಮಹಿಮೆಯು ಸಿದ್ಧವಾಯಿತು.) ॥ ೮ ॥

. ೯ನೇ ಅರೂಪಾಧಿಕರಣದಲ್ಲಿ ಲೋಕದಲ್ಲಿ ಯೋಗ್ಯ ಅಯೋಗ್ಯ ಸಾಧನಗಳು ಕಂಡುದರಿಂದ ವಿಷ್ಣು ಪ್ರಾಪ್ತಿಗೆ ಸಾಧನವೆಂದು ಹೇಳಿದ ವಚನವೂ ಯುಕ್ತವೋ, ಅಯುಕ್ತವೋ, ಎಂದು ಸಂಶಯವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ವಿರುದ್ಧತ್ವಂ ಎಂದು ಹೇಳಿದ ಪೂರ್ವಪಕ್ಷ ನ್ಯಾಯವನ್ನೇ ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ರೂಪವತ್ತ್ವಾರೂಪವತ್ತ್ವವಚನಯೋರ್ವಿರೋಧಾದಪ್ರಾಮಾಣ್ಯಂ
(೨) ಅಪ್ರಾಕೃತರೂಪವತ್ತ್ವಮಿತಿ ವ್ಯವಸ್ಥೋಪಪತ್ತೇಃ ॥ ೯ ॥

ಅ ॥ (೧) ಶ್ರೀ ವಿಷ್ಣುವಿಗೆ (1) ರೂಪವುಂಟೋ (2) ಇಲ್ಲವೋ (1) ರೂಪವಿದೆ ಎಂದು ಹೇಳಿದರೆ– 'ಅರೂಪವದವ್ಯಯಂ' 'ತದರೂಪಮನಾಮಯಂ' ಇತ್ಯಾದಿ ರೂಪವಿಲ್ಲವೆಂದು ಹೇಳತಕ್ಕ ಶ್ರುತಿಯು ಅಪ್ರಮಾಣವಾಗಬೇಕಾಗುವುದು. ವಿಷ್ಣುವಿಗೆ ಅನಿತ್ಯತ್ವವೂ ಬರಬೇಕಾಗುವುದು. (2) ರೂಪವಿಲ್ಲವೆಂದೂ ಹೇಳಲಾಗುವುದಿಲ್ಲ. 'ರುಗ್ಮವರ್ಣಂ ಕರ್ತಾರಂ' 'ಆದಿತ್ಯವರ್ಣಂ' ಇತ್ಯಾದಿ ರೂಪವಿದೆ ಎಂದು ಹೇಳತಕ್ಕ ಶ್ರುತಿಯು ಅಪ್ರಮಾಣವಾಗಬೇಕಾಗುವುದು. ಈಶ್ವರನಿಗೆ ಸೌಂದರ್ಯಾದಿ ಗುಣಗಳೂ ಇಲ್ಲವೆಂದು ಆಗಬೇಕಾಗುವುದು. (ಈ ಪ್ರಕಾರ ಶ್ರುತಿಗಳಿಗೆ ಪರಸ್ಪರವಿರೋಧವಿದ್ದುದರಿಂದ ರೂಪಾದಿಗಳು ಇಲ್ಲ ವೆಂದಾಗೋಣ ಸೌಂದರ್ಯಾದಿಗಳು ಕೂಡದಿರುವುದರಿಂದ ಶ್ರೀ ವಿಷ್ಣುವಿನಲ್ಲಿ ಭಕ್ತಿಯು ಕೂಡಲಾರದು. ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ—ವ್ಯವಸ್ಥಾ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸು ತ್ತಾರೆ.) ರುಗ್ಮವರ್ಣಂ ಇತ್ಯಾದಿ ಶ್ರುತಿಯು ಶ್ರೀವಿಷ್ಣುವಿಗೆ ವಿಲಕ್ಷಣ ಅಪ್ರಾಕೃತರೂಪವಿದೆ, ಎಂದು ಪ್ರತಿ ಪಾದಿಸುತ್ತದೆ. ಅರೂಪಂ ಇತ್ಯಾದಿ ಶ್ರುತಿಯು ಪ್ರಾಕೃತರೂಪವಿಲ್ಲವೆಂದು ಪ್ರತಿಪಾದಿಸುತ್ತದೆ. ಈ ಪ್ರಕಾರ ವ್ಯವಸ್ಥೆಯು ಕೂಡುವುದರಿಂದ ಶ್ರುತಿಗಳಿಗೆ ವಿರೋಧವಿಲ್ಲದಿರುವ ಪ್ರಯುಕ್ತ ಅಪ್ರಾಮಾಣ್ಯವಿಲ್ಲ. ಸೌಂದರ್ಯಾದ್ಯಭಾವವೂ ಅನಿತ್ಯತ್ವಪ್ರಾಪ್ತಿಯೂ ಬರುವುದಿಲ್ಲ. ಶ್ರೀಹರಿಗೆ ಅಪ್ರಾಕೃತರೂಪವಿದೆ ಎಂದಂ ಗೀಕರಿಸಿರುತ್ತೇವೆ. ಅನಿತ್ಯತ್ವವ್ಯಾಪ್ತವಾದ ಪ್ರಾಕೃತರೂಪವು ಇದೆ ಎಂದು ಎಲ್ಲಿಯೂ ಹೇಳಲೇ ಇಲ್ಲ. ಹೀಗೆ ವ್ಯವಸ್ಥೆಯನ್ನು ಒಡಂಬಟ್ಟದ್ದರಿಂದ ಶ್ರುತಿಗಳಿಗೆ ಪ್ರಾಮಾಣ್ಯವು ಸಿದ್ಧಿಸುವ ಪ್ರಯುಕ್ತ ಸೌಂದರ್ಯಾದಿಗಳು ಕೂಡುವುದರಿಂದ ಶ್ರೀ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಾಗುತ್ತದೆ. ॥ ೯ ॥

೧೦ನೇ ಉಪಮಾಧಿಕರಣದಲ್ಲಿ ಯುಕ್ತಸಾಧನಗಳನ್ನೂ ಅಯುಕ್ತ ಸಾಧನಗಳನ್ನೂ ಕಂಡುದರಿಂದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವೋ, ಅಯುಕ್ತವೋ ಎಂದು ಸಂಶಯವು ಬಂದರೆ ಯುಕ್ತವಲ್ಲವೆಂದು ಪೂರ್ವ

ಪಕ್ಷವು. ಯುಕ್ತವೆಂದು ಸಿದ್ಧಾಂತವು. ಅದರಲ್ಲಿ ನ್ಯಾಯಸಾಮ್ಯಂ ಎಂದು ಹೇಳಿದ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ || (೧) ನ ಚ ಪರಮಾತ್ಮನಾ ಚೇತನತ್ವನ್ಯಾಯಸಾಮ್ಯೇನ ಜೀವಸ್ಯಾಪ್ಯಭೇದಃ । (೨) ಅಲ್ಪಗುಣತ್ವಾದಿ ವಿರೋಧಾತ್ || ೧೦ ||**

ಅ || (೧) ಜೀವ ಬ್ರಹ್ಮರಿಬ್ಬರಲ್ಲಿಯೂ ಚೇತನತ್ವವು ಸಮವಾದ ಕಾರಣ ಜೀವನಿಗೆ ಶ್ರೀಪರಮಾತ್ಮನಿಂದ ಅಭೇದವು. (ಏವಂಚ ಜೀವಃ ಪರಮಾತ್ಮಾಭಿನ್ನಃ ಚೇತನತ್ವಾತ್ ಅಂಶತ್ವಾತ್ ಮತ್ಸ್ಯಾದಿವತ್ ಎಂಬ ಅನುಮಾನದಿಂದ ಜೀವನಿಗೆ ಪರಮಾತ್ಮನಿಂದ ಅಭೇದವಿದ್ದ ಪ್ರಯುಕ್ತ ತನ್ನಲ್ಲಿ ತನಗೆ ಭಕ್ತಿಯು ಕೂಡಲಾರದು. ಆದಕಾರಣ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವಲ್ಲ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಅಲ್ಪತಾ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಜೀವನಿಗೆ ಅಲ್ಪಗುಣ ಅಲ್ಪಜ್ಞಾನ ಅಲ್ಪಶಕ್ತ್ಯಾದಿಗಳು ಇರುವವು. ಮತ್ತು ಶ್ರೀಹರಿಯ ಪ್ರತಿಬಿಂಬನು. ಶ್ರೀಹರಿಯು ಪರಿಪೂರ್ಣಗುಣ ಪೂರ್ಣಜ್ಞಾನ ಪೂರ್ಣಶಕ್ತ್ಯಾದಿಗಳುಳ್ಳವನು. ಶ್ರೀಹರಿಯು ಬಿಂಬಭೂತನು. ಹೀಗೆ ವಿರುದ್ಧಧರ್ಮಗಳುಳ್ಳ ಜೀವೇಶ್ವರರಿಗೆ ಐಕ್ಯವು ಸರ್ವಥಾ ಕೂಡಲಾರದು. (ಏವಂಚ ಜೀವಃ ಪರಮಾತ್ಮಾಭಿನ್ನೋ ನ ಭವತಿ ತದ್ವಿರುದ್ಧಧರ್ಮಾಧಿಕರಣತ್ವಾತ್ ಪ್ರತಿಬಿಂಬತ್ವಾತ್ ಸಂಪ್ರತಿಪನ್ನವತ್ ಎನ್ನುವ ಅನುಮಾನದಿಂದ ವಿರೋಧವಿದ್ದ ಪ್ರಯುಕ್ತ ಜೀವನಿಗೆ ಶ್ರೀ ಪರಮಾತ್ಮನಿಂದ ಅಭೇದವಿಲ್ಲ.) (ಅಂತೂ ಜೀವನಿಗೆ ಅಲ್ಪಗುಣಗಳಿದ್ದುದರಿಂದ ಅಪರಿಮಿತ ಗುಣಗಳುಳ್ಳ ಶ್ರೀ ಪರಮಾತ್ಮನಿಂದ ಅಭೇದವು ಕೂಡದಿರುವಪ್ರಯುಕ್ತ ಶ್ರೀ ಪರಮಾತ್ಮನಲ್ಲಿ ಭಕ್ತಿಯು ಯುಕ್ತವು.) || ೧೦ ||

೧೧ನೇ ಅಂಬುವದಧಿಕರಣದಲ್ಲಿ ಕರ್ತವ್ಯಾರ್ಥಗಳೂ ಅಕರ್ತವ್ಯಾರ್ಥಗಳೂ ಕಂಡುದರಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕೋ, ಬೇಡವೋ, ಎಂದು ಸಂಶಯವು ಬಂದರೆ ಭಗವದ್ಭಕ್ತಿಯನ್ನು ಮಾಡಕೂಡದೆಂದು ಪೂರ್ವಪಕ್ಷವು. ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಸತೋಽಭವಃ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ || (೧) ನ ಚ ಸಾದೃಶ್ಯಸತ್ವಾತ್ಸಾಧನಂ ವಿನೈವ ಜೀವಸ್ಯ ತಾದೃಕ್ತ್ವವ್ಯಕ್ತಿಃ । (೨) ಅನಾದಿತಸ್ಸಂಸಾರಸ್ಯಾನಿವೃತ್ತತ್ವೇನ ಭಾವಾತ್ || ೧೧ ||**

ಅ || (೧) ನಿತ್ಯದಲ್ಲಿಯೂ ಸಾದೃಶ್ಯವು ಇದ್ದುದರಿಂದ (ಇದ್ದ ಜ್ಞಾನಾನಂದಾದಿಗಳು ಕದಾಚಿತ್ ತನ್ನಷ್ಟಕ್ಕೇನೇ ಸುಪ್ತಿಯಲ್ಲಿ ಆಗುವಂತೆ ಅಭಿವ್ಯಕ್ತಗಳಾಗುವುದರಿಂದ) ಸಾಧನವಿಲ್ಲದೇನೇ ಜೀವನಿಗೆ ಜ್ಞಾನಾನಂದಾದಿ ಸಾದೃಶ್ಯವು ಅಭಿವ್ಯಕ್ತವಾಗುತ್ತದೆ. (ಅಂತೂ ಜ್ಞಾನಾನಂದಾದಿಗಳಿಂದ ಸಾದೃಶ್ಯವು ಅನಾದಿಲಾಗ್ಯಾತು ಇದ್ದ ಪ್ರಯುಕ್ತ ಭಕ್ತಿಯು ಇಲ್ಲದೇನೇ ಅಭಿವ್ಯಕ್ತಿಯು ಆಗುವುದರಿಂದ ಅದಕ್ಕಾಗಿ ಮಾಹಾತ್ಮ್ಯವನ್ನು ಹೇಳುವುದು ಯುಕ್ತವಲ್ಲ. ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಭವಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಅನಾದಿಲಾಗ್ಯಾತು ಸಂಸಾರವು ನಿವೃತ್ತವಾಗದೆ ಪ್ರವಾಹರೂಪದಿಂದ ಇದ್ದ ಪ್ರಯುಕ್ತ (ಜ್ಞಾನಾನಂದಾದಿ ಸಾದೃಶ್ಯದ ಅಭಿವ್ಯಕ್ತಿಗಾಗಿ ಶ್ರೀ ಪರಮಾತ್ಮನಲ್ಲಿ ಭಕ್ತಿಯನ್ನ ಮಾಡಬೇಕು.) || ೧೧ ||

೧೨ನೇ ವೃದ್ಧಿಹ್ರಾಸಾಧಿಕರಣದಲ್ಲಿ ಚೇತನತ್ವಾದಿಧರ್ಮಗಳು (ತಾರತಮ್ಯೋಪೇತಗಳಾದ ಜ್ಞಾನಾದಿ ಧರ್ಮಗಳು) ಏಕ ಪ್ರಕಾರವಾಗಿ ಕಂಡುದರಿಂದ ಭಗವದ್ಭಕ್ತರಲ್ಲಿ ಭಗವದ್ಭಕ್ತಿಯು ಏಕಪ್ರಕಾ

ರವೋ ವೃದ್ಧಿಹ್ರಾಸವುಳ್ಳದ್ದೋ ಎಂದು ಸಂಶಯವು ಬಂದರೆ ಏಕಪ್ರಕಾರವುಳ್ಳದ್ದೇ ಎಂದು ಪೂರ್ವಪಕ್ಷವು. ವೃದ್ಧಿಹ್ರಾಸವುಳ್ಳದ್ದೆಂದು ಸಿದ್ಧಾಂತವು. ಆದರಲ್ಲಿ **ಗುಣಸಾಮ್ಯಂ** ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಮುಕ್ತತ್ವಾದಿಗುಣಸಾಮ್ಯಾದ್ಬ್ರಹ್ಮಾದೀನಾಂ ಭಕ್ತ್ಯಾದಿಗುಣಸಾಮ್ಯಂ ॥ (೨) ಯಥಾಯಥಾಧಿಕಾರೋ ವಿಶಿಷ್ಯತೇ ಏವಂ ಜ್ಞಾನಂ ಭಕ್ತಿರ್ಬಲಂಚ ವಿಶಿಷ್ಯತೇ ॥ ಮುಕ್ತಾನಾನಂದ ಏತೇಚ ಗುಣಾ ವಿಶಿಷ್ಯಂತೇ ಅತ ಆಹುರ್ಬ್ರಹ್ಮಣೇ ಮುಕ್ತಾ ಬಲಿಂ ಹರಂತೀತ್ಯಾದಿವಿಶೇಷದೃಷ್ಟೇಃ ॥ ೧೨ ॥

ಅ ॥ (೧) ಬ್ರಹ್ಮಾದಿದೇವತೆಗಳಿಗೆ ಫಲಭೂತವಾದ ಮುಕ್ತತ್ವ (ಸಂಸಾರನಿವೃತ್ತಿ) ಮೊದಲಾದ ಗುಣಗಳು ಸಮವಾದಪ್ರಯುಕ್ತ ಸಾಧನ ಭೂತಗಳಾದ ಭಕ್ತ್ಯಾದಿಗುಣಗಳಿಗೂ ಸಾಮ್ಯವು. ತಾರತಮ್ಯವಿಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ವಿಶೇಷದೃಷ್ಟೇಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಸಚ್ಛಾಸ್ತ್ರ ಶ್ರವಣಾದಿಗಳಲ್ಲಿ ಹೇಗೆ ಹೇಗೆ ಅಧಿಕಾರವು ಹೆಚ್ಚು ಹೆಚ್ಚು ಆಗುತ್ತದೊ, ಹೀಗಿಯೇ ಜ್ಞಾನವು ಭಕ್ತಿಯು ಬಲವೂ ಅಧಿಕ ಅಧಿಕವಾಗುತ್ತದೆ. ಮುಕ್ತಿಯಲ್ಲಿ ಆನಂದವೂ ಜ್ಞಾನ ಭಕ್ತ್ಯಾದಿ ಗುಣಗಳೂ ಅಧಿಕವಾಗುತ್ತವೆ. ಆದಕಾರಣ ಮುಕ್ತರು ಚತುರ್ಮುಖ ಬ್ರಹ್ಮನಿಗೆ ಪೂಜಾದಿಗಳನ್ನು ಮಾಡುತ್ತಾರೆ. ಇದು ಮೊದಲಾದ ಸಾಧ್ಯ ಸಾಧನ ತಾರತಮ್ಯಾದಿ ವಿಶೇಷಗಳನ್ನು ಪ್ರತಿಪಾದಿಸುವ ಶ್ರುತಿಯಿದ್ದ ಪ್ರಯುಕ್ತ (ಭಕ್ತ್ಯಾದಿ ಸಾಧನಗಳು ಏಕಪ್ರಕಾರಗಳಲ್ಲ.) ॥ ೧೨ ॥

೧೩ನೇ ಪ್ರಕೃತ್ಯೈತಾವತ್ತ್ವಾಧಿಕರಣದಲ್ಲಿ ಲೋಕದಲ್ಲಿ ಯುಕ್ತ ಅಯುಕ್ತ ಗುಣಗಳು ಕಂಡದ್ದರಿಂದ ಶ್ರೀ ವಿಷ್ಣುವಿಗೆ ಜಗತ್ಪಾಲಕತ್ವ ರೂಪವಾದ ಗುಣವು ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಅಯೋಗಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಸಂಹಾರಕಕರ್ತುರಸಂಹಾರಾದನ್ಯ ರಕ್ಷಾಯಾ ಅಯೋಗಃ ॥(೨) ಸ ಸೃಜತಿ ಸ ಪಾಲಯತಿ ಸ ವಿನಾಶಯತಿ' ಇತ್ಯಾದಿ ವಿಶೇಷವಾಕ್ಯಾತ್ । ಅನ್ನದಾನಾದ್ಯುಪಪತ್ತೇಶ್ಚ ॥ ೧೩ ॥

ಅ ॥ (೧) ಸಂಹಾರ ಮಾಡುವವನಿಗೆ ನಾಶಾಭಾವದಿಂದ ಬೇರೆಯಾದ ರಕ್ಷಣೆಯು ಕೂಡುವುದಿಲ್ಲ. (ಅಂದರೆ ಸಂಹಾರ ಮಾಡದಿರುವುದೇ ರಕ್ಷಣೆ ಮಾಡುವುದು. ರಕ್ಷಣೆಯೆಂದು ಬೇರೆ ವ್ಯಾಪಾರವೇ ಇಲ್ಲ. (ಅಂದರೆ ನಾಶಮಾಡುವವನು ಇನೊಬ್ಬನಾದರೆ ಅದನ್ನು ತಡೆಯುವ ವ್ಯಾಪಾರವು ನಾಶಾಭಾವದಿಂದ ಬೇರೆಯಾದ ಜಗದ್ರಕ್ಷಣೆಯು ಕೂಡಬಹುದಿತ್ತು. ಹೀಗೆ ಇಲ್ಲ. ಏವಂಚ ಅಸಂಹಾರದಿಂದ ಬೇರೆಯಾದ ಜಗದ್ರಕ್ಷಣವೇ ಕೂಡದಿರುವುದರಿಂದ ಜಗತ್ಪಾಲಕತ್ವವು ಶ್ರೀ ವಿಷ್ಣುವಿಗೆ ಇಲ್ಲದಿರುವುದರಿಂದ ಆತನಿಗೆ ಮಹಾ ಮಾಹಾತ್ಮ್ಯೆಯು ಇಲ್ಲ. ಎಂದರೆ) ಹೀಗೆ ಹೇಳಕೂಡದು. (೨) (ಏಕೆಂದರೆ ವಿಶೇಷವಾಕ್ಯಂ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಆ ಶ್ರೀಹರಿಯೇ ಸೃಷ್ಟಿಸುತ್ತಾನೆ, ರಕ್ಷಿಸುತ್ತಾನೆ, ವಿನಾಶಗೊಳಿಸುತ್ತಾನೆ, ಇತ್ಯಾದಿ ವಿಶೇಷವಾಕ್ಯವಿದ್ದಪ್ರಯುಕ್ತ ಅನ್ನದಾನಾದಿಗಳೂ ಉಪಪನ್ನಗಳಾಗುತ್ತವೆ. (ಅಂದರೆ ಅನ್ನದಾನಾದಿರೂಪ ಅಸಂಹಾರಾತಿರಿಕ್ತ ವ್ಯಾಪಾರವಿರುವುದರಿಂದ ರಕ್ಷಕತ್ವವನ್ನು ಬೇರೆಯೇ ಶ್ರೀ

ಪಕ್ಷವು. ಯುಕ್ತವೆಂದು ಸಿದ್ಧಾಂತವು. ಅದರಲ್ಲಿ ನ್ಯಾಯಸಾಮ್ಯಂ ಎಂದು ಹೇಳಿದ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ || (೧) ನ ಚ ಪರಮಾತ್ಮನಾ ಚೇತನತ್ವನ್ಯಾಯಸಾಮ್ಯೇನ ಜೀವಸ್ಯಾಪ್ಯಭೇದಃ | (೨) ಅಲ್ಪಗುಣತ್ವಾದಿ ವಿರೋಧಾತ್ || ೧೦ ||**

ಅ || (೧) ಜೀವ ಬ್ರಹ್ಮರಿಬ್ಬರಲ್ಲಿಯೂ ಚೇತನತ್ವವು ಸಮವಾದ ಕಾರಣ ಜೀವನಿಗೆ ಶ್ರೀಪರಮಾತ್ಮನಿಂದ ಅಭೇದವು. (ಏವಂಚ ಜೀವಃ ಪರಮಾತ್ಮಾಭಿನ್ನಃ ಚೇತನತ್ವಾತ್ ಅಂಶತ್ವಾತ್ ಮತ್ಸ್ಯಾದಿವತ್ ಎಂಬ ಅನುಮಾನದಿಂದ ಜೀವನಿಗೆ ಪರಮಾತ್ಮನಿಂದ ಅಭೇದವಿದ್ದ ಪ್ರಯುಕ್ತ ತನ್ನಲ್ಲಿ ತನಗೆ ಭಕ್ತಿಯು ಕೂಡಲಾರದು. ಆದಕಾರಣ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವಲ್ಲ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಅಲ್ಪತಾ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಜೀವನಿಗೆ ಅಲ್ಪಗುಣ ಅಲ್ಪಜ್ಞಾನ ಅಲ್ಪಶಕ್ತ್ಯಾದಿಗಳು ಇರುವವು. ಮತ್ತು ಶ್ರೀಹರಿಯ ಪ್ರತಿಬಿಂಬನು. ಶ್ರೀಹರಿಯು ಪರಿಪೂರ್ಣಗುಣ ಪೂರ್ಣಜ್ಞಾನ ಪೂರ್ಣಶಕ್ತ್ಯಾದಿಗಳುಳ್ಳವನು. ಶ್ರೀಹರಿಯು ಬಿಂಬಭೂತನು. ಹೀಗೆ ವಿರುದ್ಧಧರ್ಮಗಳುಳ್ಳ ಜೀವೇಶ್ವರರಿಗೆ ಐಕ್ಯವು ಸರ್ವಥಾ ಕೂಡಲಾರದು. (ಏವಂಚ ಜೀವಃ ಪರಮಾತ್ಮಾಭಿನ್ನೋ ನ ಭವತಿ ತದ್ವಿರುದ್ಧಧರ್ಮಾಧಿಕರಣತ್ವಾತ್ ಪ್ರತಿಬಿಂಬತ್ವಾತ್ ಸಂಪ್ರತಿಪನ್ನವತ್ ಎನ್ನುವ ಅನುಮಾನದಿಂದ ವಿರೋಧವಿದ್ದ ಪ್ರಯುಕ್ತ ಜೀವನಿಗೆ ಶ್ರೀ ಪರಮಾತ್ಮನಿಂದ ಅಭೇದವಿಲ್ಲ.) (ಅಂತೂ ಜೀವನಿಗೆ ಅಲ್ಪಗುಣಗಳಿದ್ದುದರಿಂದ ಅಪರಿಮಿತ ಗುಣಗಳುಳ್ಳ ಶ್ರೀ ಪರಮಾತ್ಮನಿಂದ ಅಭೇದವು ಕೂಡದಿರುವ ಪ್ರಯುಕ್ತ ಶ್ರೀ ಪರಮಾತ್ಮನಲ್ಲಿ ಭಕ್ತಿಯು ಯುಕ್ತವು.) || ೧೦ ||

೧೧ನೇ ಅಂಬುವದಧಿಕರಣದಲ್ಲಿ ಕರ್ತವ್ಯಾರ್ಥಗಳೂ ಅಕರ್ತವ್ಯಾರ್ಥಗಳೂ ಕಂಡುದರಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕೋ, ಬೇಡವೋ, ಎಂದು ಸಂಶಯವು ಬಂದರೆ ಭಗವದ್ಭಕ್ತಿಯನ್ನು ಮಾಡಕೂಡದೆಂದು ಪೂರ್ವಪಕ್ಷವು. ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಸತೋಭವಃ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ

**ಮೂ || (೧) ನ ಚ ಸಾದೃಶ್ಯಸತ್ವಾತ್ಸಾಧನಂ ವಿನೈವ ಜೀವಸ್ಯ ತಾದೃಕ್ತ್ವವ್ಯಕ್ತಿಃ | (೨) ಅನಾದಿತಸ್ಸಂಸಾರಸ್ಯಾನಿವೃತ್ತತ್ವೇನ ಭಾವಾತ್ || ೧೧ ||**

ಅ || (೧) ನಿತ್ಯದಲ್ಲಿಯೂ ಸಾದೃಶ್ಯವು ಇದ್ದುದರಿಂದ (ಇದ್ದ ಜ್ಞಾನಾನಂದಾದಿಗಳು ಕದಾಚಿತ್ ತನ್ನಷ್ಟಕ್ಕೇನೇ ಸುಷುಪ್ತಿಯಲ್ಲಿ ಆಗುವಂತೆ ಅಭಿವ್ಯಕ್ತಗಳಾಗುವುದರಿಂದ) ಸಾಧನವಿಲ್ಲದೇನೇ ಜೀವನಿಗೆ ಜ್ಞಾನಾನಂದಾದಿ ಸಾದೃಶ್ಯವು ಅಭಿವ್ಯಕ್ತವಾಗುತ್ತದೆ. (ಅಂತೂ ಜ್ಞಾನಾನಂದಾದಿಗಳಿಂದ ಸಾದೃಶ್ಯವು ಅನಾದಿಲಾಗ್ಯಾತು ಇದ್ದ ಪ್ರಯುಕ್ತ ಭಕ್ತಿಯು ಇಲ್ಲದೇನೇ ಅಭಿವ್ಯಕ್ತಿಯು ಆಗುವುದರಿಂದ ಅದಕ್ಕಾಗಿ ಮಾಹಾತ್ಮ್ಯವನ್ನು ಹೇಳುವುದು ಯುಕ್ತವಲ್ಲ. ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಭವಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಅನಾದಿಲಾಗ್ಯಾತು ಸಂಸಾರವು ನಿವೃತ್ತವಾಗದೆ ಪ್ರವಾಹರೂಪದಿಂದ ಇದ್ದ ಪ್ರಯುಕ್ತ (ಜ್ಞಾನಾನಂದಾದಿ ಸಾದೃಶ್ಯದ ಅಭಿವ್ಯಕ್ತಿಗಾಗಿ ಶ್ರೀ ಪರಮಾತ್ಮನಲ್ಲಿ ಭಕ್ತಿಯನ್ನ ಮಾಡಬೇಕು.) || ೧೧ ||

೧೨ನೇ ವೃದ್ಧಿಹ್ರಾಸಾಧಿಕರಣದಲ್ಲಿ ಚೇತನತ್ವಾದಿಧರ್ಮಗಳು (ತಾರತಮ್ಯೋಪೇತಗಳಾದ ಜ್ಞಾನಾದಿ ಧರ್ಮಗಳು) ಏಕ ಪ್ರಕಾರವಾಗಿ ಕಂಡುದರಿಂದ ಭಗವದ್ಭಕ್ತರಲ್ಲಿ ಭಗವದ್ಭಕ್ತಿಯು ಏಕಪ್ರಕಾ

ರವೋ ವೃದ್ಧಿಹ್ರಾಸವುಳ್ಳದ್ದೋ ಎಂದು ಸಂಶಯವು ಬಂದರೆ ಏಕಪ್ರಕಾರವುಳ್ಳದ್ದೇ ಎಂದು ಪೂರ್ವಪಕ್ಷವು. ವೃದ್ಧಿಹ್ರಾಸವುಳ್ಳದ್ದೆಂದು ಸಿದ್ಧಾಂತವು. ಅದರಲ್ಲಿ ಗುಣಸಾಮ್ಯಂ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ || (೧) ನ ಚ ಮುಕ್ತತ್ವಾದಿಗುಣಸಾಮ್ಯಾದ್ಬ್ರಹ್ಮಾದೀನಾಂ ಭಕ್ತ್ಯಾದಿಗುಣಸಾಮ್ಯಂ || (೨) ಯಥಾಯಥ್ಯಾಧಿಕಾರೋ ವಿಶಿಷ್ಯತೇ ಏವಂ ಜ್ಞಾನಂ ಭಕ್ತಿರ್ಬಲಂಚ ವಿಶಿಷ್ಯತೇ || ಮುಕ್ತಾನಾನಂದ ಏತೇಚ ಗುಣಾ ವಿಶಿಷ್ಯಂತೇ ಅತ ಆಹುರ್ಬ್ರಹ್ಮಣೇ ಮುಕ್ತಾ ಬಲಿಂ ಹರಂತೀತ್ಯಾದಿವಿಶೇಷದೃಷ್ಟೇಃ || ೧೨ ||

ಅ || (೧) ಬ್ರಹ್ಮಾದಿದೇವತೆಗಳಿಗೆ ಫಲಭೂತವಾದ ಮುಕ್ತತ್ವ (ಸಂಸಾರನಿವೃತ್ತಿ) ಮೊದಲಾದ ಗುಣಗಳು ಸಮವಾದದ್ದರಿಂದ ಸಾಧನ ಭೂತಗಳಾದ ಭಕ್ತ್ಯಾದಿಗುಣಗಳಿಗೂ ಸಾಮ್ಯವು. ತಾರತಮ್ಯವಿಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ವಿಶೇಷದೃಷ್ಟೇಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಸಚ್ಛಾಸ್ತ್ರ ಶ್ರವಣಾದಿಗಳಲ್ಲಿ ಹೇಗೆ ಹೇಗೆ ಅಧಿಕಾರವು ಹೆಚ್ಚು ಹೆಚ್ಚು ಆಗುತ್ತದೊ, ಹೀಗಿಯೇ ಜ್ಞಾನವು ಭಕ್ತಿಯು ಬಲವೂ ಅಧಿಕ ಅಧಿಕವಾಗುತ್ತದೆ. ಮುಕ್ತಿಯಲ್ಲಿ ಆನಂದವೂ ಜ್ಞಾನ ಭಕ್ತ್ಯಾದಿ ಗುಣಗಳೂ ಅಧಿಕವಾಗುತ್ತವೆ. ಆದಕಾರಣ ಮುಕ್ತರು ಚತುರ್ಮುಖ ಬ್ರಹ್ಮನಿಗೆ ಪೂಜಾದಿಗಳನ್ನು ಮಾಡುತ್ತಾರೆ. ಇದು ಮೊದಲಾದ ಸಾಧ್ಯ ಸಾಧನ ತಾರತಮ್ಯಾದಿ ವಿಶೇಷಗಳನ್ನು ಪ್ರತಿಪಾದಿಸುವ ಶ್ರುತಿಯಿದ್ದ ಪ್ರಯುಕ್ತ (ಭಕ್ತ್ಯಾದಿ ಸಾಧನಗಳು ಏಕಪ್ರಕಾರಗಳಲ್ಲ.) || ೧೨ ||

೧೩ನೇ ಪ್ರಕೃತೈತಾವತ್ತ್ವಾಧಿಕರಣದಲ್ಲಿ ಲೋಕದಲ್ಲಿ ಯುಕ್ತ ಅಯುಕ್ತ ಗುಣಗಳು ಕಂಡದ್ದರಿಂದ ಶ್ರೀ ವಿಷ್ಣುವಿಗೆ ಜಗತ್ಪಾಲಕತ್ವ ರೂಪವಾದ ಗುಣವು ಯುಕ್ತವೋ ಅಯುಕ್ತವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ ಅಯೋಗಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಸಂಹಾರಕರ್ತುರಸಂಹಾರಾದನ್ಯ ರಕ್ಷಾಯಾ ಅಯೋಗಃ ||(೨) ಸ ಸೃಜತಿ ಸ ಪಾಲಯತಿ ಸ ವಿನಾಶಯತಿ' ಇತ್ಯಾದಿ ವಿಶೇಷವಾಕ್ಯಾತ್ | ಅನ್ನದಾನಾದ್ಯುಪಪತ್ತೇಶ್ಚ || ೧೩ ||

ಅ || (೧) ಸಂಹಾರ ಮಾಡುವವನಿಗೆ ನಾಶಾಭಾವದಿಂದ ಬೇರೆಯಾದ ರಕ್ಷಣೆಯು ಕೂಡುವುದಿಲ್ಲ. (ಅಂದರೆ ಸಂಹಾರ ಮಾಡದಿರುವುದೇ ರಕ್ಷಣೆ ಮಾಡುವುದು. ರಕ್ಷಣೆಯೆಂದು ಬೇರೆ ವ್ಯಾಪಾರವೇ ಇಲ್ಲ. (ಅಂದರೆ ನಾಶಮಾಡುವವನು ಇನೊಬ್ಬನಾದರೆ ಅದನ್ನು ತಡೆಯುವ ವ್ಯಾಪಾರವು ನಾಶಾಭಾವದಿಂದ ಬೇರೆಯಾದ ಜಗದ್ರಕ್ಷಣೆಯು ಕೂಡಬಹುದಿತ್ತು. ಹೀಗೆ ಇಲ್ಲ. ಏವಂಚ ಅಸಂಹಾರದಿಂದ ಬೇರೆಯಾದ ಜಗದ್ರಕ್ಷಣವೇ ಕೂಡದಿರುವುದರಿಂದ ಜಗತ್ಪಾಲಕತ್ವವು ಶ್ರೀ ವಿಷ್ಣುವಿಗೆ ಇಲ್ಲದಿರುವುದರಿಂದ ಆತನಿಗೆ ಮಹಾಮಾಹಾತ್ಮ್ಯೆಯು ಇಲ್ಲ. ಎಂದರೆ) ಹೀಗೆ ಹೇಳಕೂಡದು. (೨) (ಏಕೆಂದರೆ ವಿಶೇಷವಾಕ್ಯಂ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಆ ಶ್ರೀಹರಿಯೇ ಸೃಷ್ಟಿಸುತ್ತಾನೆ, ರಕ್ಷಿಸುತ್ತಾನೆ, ವಿನಾಶಗೊಳಿಸುತ್ತಾನೆ, ಇತ್ಯಾದಿ ವಿಶೇಷವಾಕ್ಯವಿದ್ದಪ್ರಯುಕ್ತ ಅನ್ನದಾನಾದಿಗಳೂ ಉಪಪನ್ನಗಳಾಗುತ್ತವೆ. (ಅಂದರೆ ಅನ್ನದಾನಾದಿರೂಪ ಅಸಂಹಾರಾತಿರಿಕ್ತ ವ್ಯಾಪಾರವಿರುವುದರಿಂದ ರಕ್ಷಕತ್ವವನ್ನು ಬೇರೆಯೇ ಶ್ರೀ

ಹರಿಗೆ ಹೇಳಬೇಕು. (ಸ ಪಾಲಯತಿ ಎಂದು ಅನ್ನದಾನಾದಿರೂಪವಾದ ರಕ್ಷಣೆಯನ್ನು ಪ್ರತ್ಯೇಕವಾಗಿ ಹೇಳಿದುದರಿಂದ ಇದು ವಿಶೇಷವಾಕ್ಯವೆಂದು ತಿಳಿಯಬೇಕು. ಅಸಂಹಾರದಿಂದ ಬೇರೆಯಾದ ಪಾಲನೆ ಇಲ್ಲವಾದರೆ ಅನ್ನದಾನಾದಿಗಳೇ ಕೂಡದೆ ಹೋಗುವವು.) (ಏವಂಚ ಪಾಲಯತಿ ಇತ್ಯಾದಿ ವಿಶೇಷವಾಕ್ಯದಿಂದ ಜಗದ್ರಕ್ಷಣಾದಿರೂಪ ಮಹಾಮಹಿಮೆಯುಳ್ಳ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವು.) ॥ ೧೩ ॥

೧೪ನೇ ತದವ್ಯಕ್ತಾಧಿಕರಣದಲ್ಲಿ ಲೋಕದಲ್ಲಿ ಕರ್ತವ್ಯ, ಅಕರ್ತವ್ಯ ವ್ಯಾಪಾರಗಳು ಕಂಡುದರಿಂದ ಶ್ರೀವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಬೇಕೋ, ಬೇಡವೋ, ಎಂದು ಸಂದೇಹವು ಬಂದರೆ ಮಾಡಬಾರದೆಂದು ಪೂರ್ವಪಕ್ಷವು. ಮಾಡಲೇಬೇಕೆಂದು ಸಿದ್ಧಾಂತವು. ಅದರಲ್ಲಿ ತರ್ಕಬಾಧಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ॥(೧) ನ ಚಾವ್ಯಕ್ತಸ್ವಭಾವಸ್ಯ ದರ್ಶನೇ ತರ್ಕಬಾಧಃ । (೨) ಅನಂತಶಕ್ತಿತ್ವಾದ್ವಿಷ್ಣೋಃ । ತಚ್ಛಕ್ತ್ಯಾಽವ್ಯಕ್ತಸ್ಯಾಪಿ ದರ್ಶನೋಪಪತ್ತೇಃ ॥ ೧೪ ॥

ಅ ॥ (೧) ಅವ್ಯಕ್ತ ಸ್ವಭಾವವುಳ್ಳ ಶ್ರೀಹರಿಯು ಪ್ರತ್ಯಕ್ಷನಾಗುತ್ತಾನೆಂದು ಹೇಳಿದರೆ 'ಈಶ್ವರೋ ನ ಪ್ರತೀಯತೇ ಅವ್ಯಕ್ತಸ್ವಭಾವತ್ವಾತ್ ಅದೃಷ್ಟವತ್= ಅದೃಷ್ಟದಂತೆ ಅವ್ಯಕ್ತಸ್ವಭಾವವುಳ್ಳವನಾದುದರಿಂದ ಶ್ರೀಹರಿಯು ಪ್ರತ್ಯಕ್ಷನಾಗುವುದಿಲ್ಲ ಎಂಬ ಅನುಮಾನದಿಂದ ಬಾಧವು. (ಏವಂಚ ಅನುಮಾನ ಬಾಧದಿಂದ ಶ್ರೀಹರಿಯು ಪ್ರತ್ಯಕ್ಷನಾಗದಿರುವುದರಿಂದ ಆತನಲ್ಲಿ ಭಕ್ತಿಯು ನಿಷ್ಫಲವಾದ ಪ್ರಯುಕ್ತ ಆತನಿಗೆ ಮಹಾಮಾಹಾತ್ಮ್ಯ ಹೇಳಿದ್ದು ಯುಕ್ತವಲ್ಲ) ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಪುಂಶಕ್ತಿಃ (ವಿಷ್ಣುವಿನ ಶಕ್ತಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಅವ್ಯಕ್ತಸ್ವಭಾವವುಳ್ಳ ಶ್ರೀಹರಿಗೆ ತನ್ನ ಮಹಿಮೆಯಿಂದಲೂ ಪ್ರತ್ಯಕ್ಷತ್ವವು ಕೂಡಲಾರದು. ಒಬ್ಬ ಮನುಷ್ಯನು ಪ್ರಸನ್ನನಾದಾಗ್ಯೂ ವಾನರನು ಆಗಲಿಕ್ಕೆ ಇಷ್ಟಪಡಲಾರನಷ್ಟೆ, ಎಂದರೆ) ಶ್ರೀವಿಷ್ಣುವು ಅನಂತಾನಂತಶಕ್ತಿಯುಳ್ಳವನಾದುದರಿಂದ ತನ್ನ ಅಚಿಂತ್ಯಶಕ್ತಿಯಿಂದಲೆ ಅವ್ಯಕ್ತನಾದಾಗ್ಯೂ ಪ್ರತ್ಯಕ್ಷನಾಗುತ್ತಾನೆಂಬುವುದು ಕೂಡುತ್ತದೆ. (ಇಂತಹ ಮಹಾಶಕ್ತಿಯಿದ್ದುದರಿಂದ ತರ್ಕವು ಬಾಧಿತವಾಯಿತೆಂದೂ ತಿಳಿಯತಕ್ಕದು. ಏವಂಚ ಅವ್ಯಕ್ತನಾದಾಗ್ಯೂ ವಿಷ್ಣುವಿನ ಅಚಿಂತ್ಯಶಕ್ತಿಯಿಂದ ಪ್ರತ್ಯಕ್ಷತ್ವವು ಕೂಡುವಪ್ರಯುಕ್ತ ಆತನಲ್ಲಿ ಭಕ್ತಿಯು ಯುಕ್ತವು )॥ ೧೪ ॥

೧೫ನೇ ಅಹಿಕುಂಡಲಾಧಿಕರಣದಲ್ಲಿ ಹಿಂದಿನ ಅಧಿಕರಣದಂತೆ ಸಂಶಯಾದಿಗಳು. ಅದರಲ್ಲಿ ವಿಲೋಮತಾ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಗುಣಾನಾಂ ಗುಣಿಸ್ವರೂಪತ್ವಂ ವಿರುದ್ಧಂ। (೨) ಕಾಲಾದಿದೃಷ್ಟಾಂತಾತ್ ॥ ೧೫ ॥

ಅ ॥ (೧) ಜ್ಞಾನಾನಂದಾದಿ ಗುಣಗಳಿಗೆ ಗುಣಿಸ್ವರೂಪತ್ವವು ವಿರುದ್ಧವಾಗಿರುವುದರಿಂದ ಶ್ರೀ ಹರಿಗೆ ಗುಣಗಳಿಲ್ಲದಿರುವುದರಿಂದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ– ಪುನಿದರ್ಶನಂ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಕಾಲ ಮೊದಲಾದ ದೃಷ್ಟಾಂತದಿಂದ (ಅಂದರೆ—(1) ಪೂರ್ವಃ ಕಾಲಃ= ಪೂರ್ವಕಾಲವು ಎಂದು ಹೇಳುವಾಗ ಕಾಲಕ್ಕೂ ಪೂರ್ವಕ್ಕೂ ಭೇದವಿಲ್ಲದಿದ್ದರೂ ಕಾಲಃ ಎಂಬುವುದು ವಿಶೇಷ್ಯವು. ಪೂರ್ವಃ ಎಂಬುವುದು ವಿಶೇಷಣವು ಹೇಗೆ ಆಗುತ್ತದೋ, ಇದಾನೀಂ ಕಾಲಃ ಎಂಬುವಲ್ಲಿಯೂ ಹೀಗೆಯೇ. (2) ಸೂರ್ಯನು ಪ್ರಕಾಶ

ಸ್ವರೂಪನಾದಾಗ್ಯೂ ಪ್ರಕಾಶೀ= ಪ್ರಕಾಶವುಳ್ಳವನು ಎಂದು ಹೇಗೆ ವ್ಯವಹಾರವೋ, (೩) ಸರ್ಪವು ಕುಂಡಲ ಸ್ವರೂಪವಾದುದಾಗ್ಯೂ ಕುಂಡಲೀ ಎಂದು ಹೇಗೆ ವ್ಯವಹಾರವೋ ಹಾಗೆಯೇ ಪರಮಾತ್ಮನು ಜ್ಞಾನಾನಂದಾದಿ ಗುಣಸ್ವರೂಪನಾದಾಗ್ಯೂ ವಿಶೇಷ ಬಲದಿಂದಲೇ ಜ್ಞಾನಾನಂದಾದಿ ಗುಣಗಳುಳ್ಳವನೆಂಬ ವ್ಯವಹಾರವೂ ಕೂಡುತ್ತದೆ. ಅಂತೂ ಕಾಲಾದಿ ದೃಷ್ಟಾಂತದಿಂದ ಶ್ರೀ ಪರಮಾತ್ಮನು ಗುಣಸ್ವರೂಪನೂ ಗುಣವಿಶಿಷ್ಟನೂ ಆಗಿರುವುದರಿಂದ ಅತನಲ್ಲಿ ಭಕ್ತಿಯು ಯುಕ್ತವು.) ॥ ೧೫ ॥

೧೬ನೇ ಪರಮತೋಽಧಿಕರಣದಲ್ಲಿ ಶ್ರೀಪರಮಾತ್ಮನ ಆನಂದಾದಿ ಗುಣಗಳಿಗೆ ಲೌಕಿಕತ್ವವಾಗಲೀ ಅಲೌಕಿಕತ್ವವಾಗಲೀ ಕೂಡುವುದರಿಂದ ಲೌಕಿಕವೋ ಅವು ಅಲೌಕಿಕವೋ ಎಂದು ಸಂದೇಹವು ಬಂದರೆ ಶ್ರೀಹರಿಯ ಆನಂದಾದಿಗುಣಗಳೂ ಲೋಕಸದೃಶಗಳೇ ಎಂದು ಪೂರ್ವಪಕ್ಷವು.ಅಲೌಕಿಕಗಳೇಎಂದುಸಿದ್ಧಾಂತವು. ಅದರಲ್ಲಿ ವಿಲೋಮತಾ ಎಂಬ ಪೂರ್ವ ಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಸೂ॥ (೧) ಬ್ರಹ್ಮಾನಂದಾದೀನಾಮನ್ಯಥಾತ್ವಪತಚ್ಛಬ್ದತ್ವಂ ತಚ್ಛಬ್ದತ್ವೇ ಲೋಕೋಪಮತ್ವಂ ಚೇತಿ ವಿಲೋಮತಾ ॥ (೨) ಅಲೌಕಿಕಸ್ತಸ್ಯ ಶಬ್ದಸ್ತಥಾಪ್ಯರ್ಥಾ ಅಲೌಕಿಕೋ ಹ್ಯೇಷ ವಿಷ್ಣುಃಪರತ್ವಾತ್ । ತಥಾಪಿ ಶಬ್ದಾ ಲೌಕಿಕಾ ಅಸ್ಯಮುಷ್ಮಿನ್ ಪ್ರವರ್ತಮಾನಾ ಅಧಿಕಾರ್ಥಾನ್ ವದಂತೀತ್ಯಪಿಶ್ರುತಿಭ್ಯೋಽಲೌಕಿಕತ್ವಾವಗಮಾತ್ ॥ ೧೬ ॥

ಅ ॥ (೧) ಬ್ರಹ್ಮನ ಆನಂದಾದಿ ಗುಣಗಳು ಲೋಕಾನಂದಾದಿಗಳಿಂದ ವಿಲಕ್ಷಣಗಳಾಗಿರುವಪಕ್ಷ ಯುಕ್ತ ಆನಂದಾದಿಶಬ್ದವಾಚ್ಯತ್ವವು ಇಲ್ಲದೆ ಹೋಗಬೇಕಾಗುವದು. (ಹೇಗೆಂದರೆ ಆನಂದಾದಿಶಬ್ದಗಳಿಗೆ ಲೌಕಿಕ ಆನಂದಾದಿಗಳಲ್ಲಿಯೇ ಶಕ್ತಿಯಿರುವುದರಿಂದ ಅಲೌಕಿಕಾನಂದದಲ್ಲಿ ಶಕ್ತಿ ಬರಲಿಕ್ಕೆ ಉಪಾಯವಿಲ್ಲ.) ಬ್ರಹ್ಮಾನಂದಾದಿಗಳಿಗೆ ಆನಂದಾದಿಶಬ್ದವಾಚ್ಯತ್ವವಿದ್ದರೆ ಲೌಕಿಕಆನಂದಕ್ಕೆ ಸದೃಶಗಳೇ ಆಗಬೇಕಾಗುವುದು ಹೀಗೆ ವಿರೋಧವು.(ಎವಂಚಅಲೌಕಿಕತ್ವವಿದ್ದರೆ ಆನಂದಾದಿ ಶಬ್ದವಾಚ್ಯತ್ವವಿಲ್ಲ,ಆನಂದಾದಿ ಶಬ್ದವಾಚ್ಯತ್ವವಿದ್ದರೆ ಲೌಕಿಕತ್ವವು; ಹೀಗೆ ಅಲೌಕಿಕತ್ವ, ಆನಂದಾದಿ ಶಬ್ದವಾಚ್ಯತ್ವ ಇವುಗಳಿಗೆ ಸಹಾನವಸ್ಥಾನರೂಪ ವಿರೋಧ ವಿದ್ದುದರಿಂದ ಆನಂದಾದಿ ಶಬ್ದವಾಚ್ಯವಾದ ಲೌಕಿಕ।ಆನಂದಾದಿ ಗುಣಗಳುಳ್ಳ ಶ್ರೀ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಲ್ಲ, ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ— ಅಲೌಕಿಕತ್ವಂ ಎಂಬು ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಶ್ರೀಹರಿಯ ಆನಂದಾದಿ ಗುಣಗಳನ್ನು ಪ್ರತಿಪಾದಿಸುವ ಶಬ್ದಗಳು ಅಲೌಕಿಕಗಳು. (ವೈದಿಕಗಳು) ಆತನ ಆನಂದಾದಿಗುಣಗಳೂ ಅಲೌಕಿಕಗಳು. (ಅಪ್ರಾಕೃತಗಳು.) ಶ್ರೀ ವಿಷ್ಣುವು ಸರ್ವೋತ್ತಮನಾದುದರಿಂದ ಅಲೌಕಿಕನು.ಆದಾಗ್ಯೂಪೌರುಷೇಯಾಗಮಗಳೂ ಕೂಡಶ್ರೀಹರಿಯ ಗುಣಾದಿಗಳನ್ನು ಹೇಳುವುದರಲ್ಲಿ ಪ್ರವೃತ್ತಗಳಾದವುಗಳು. ಅವು ಶ್ರೀಹರಿಗೆ ಲೋಕ ವಿಲಕ್ಷಣ ಆನಂದಾದಿಗಳನ್ನೇ ಪ್ರತಿಪಾದಿಸುತ್ತವೆ. ಇದು ಮೊದಲಾದ ಶ್ರುತಿಗಳ ದೆಶೆಯಿಂದ ಬ್ರಹ್ಮಾನಂದಾದಿಗಳಿಗೆ ಅಲೌಕಿಕತ್ವವು ತಿಳಿಯುವುದರಿಂದ ಅಲೌಕಿಕತ್ವವೂ ಆನಂದಾದಿಶಬ್ದವಾಚ್ಯತ್ವವೂ ಎರಡೂ ಸಿದ್ಧವಾಗುತ್ತದೆ. (ಆದಾಗ್ಯೂ ಘಟಶಬ್ದವಾಚ್ಯವಾದುದಾಗ್ಯೂ ಸುವರ್ಣಘಟವು ಲೋಕ ಸದೃಶವಲ್ಲ.) ಏವಂಚ ಈ ಶ್ರುತಿ ಬಲದಿಂದ ಅಲೌಕಿಕತ್ವ ಆನಂದಾದಿಶಬ್ದವಾಚ್ಯತ್ವಗಳಿಗೆ ವಿರೋಧವಿಲ್ಲದಿರುವಕಾರಣ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವು.) ॥ ೧೬ ॥

೧೭ನೇ ಸ್ಥಾನ ವಿಶೇಷಾಧಿಕರಣದಲ್ಲಿ ಪದಾರ್ಥಗಳಿಗೆ ಕಿಂಚಿತ್ಪ್ರತಿಬಿಂಬತ್ವವೂ ಅಪ್ರತಿಬಿಂಬತ್ವವೂ ದೃಷ್ಟವಾಗಿರುವುದರಿಂದ ಚತುರ್ಮುಖಾದಿಗಳ ಆನಂದಾದಿಗಳು ಶ್ರೀ ಭಗವಂತನ ಆನಂದಾದಿಗಳಿಗೆ ಪ್ರತಿಬಿಂಬವಾಗುತ್ತವೋ ಇಲ್ಲವೋ, ಎಂದು ಸಂಶಯವು ಬಂದರೆ ಪ್ರತಿಬಿಂಬವಾಗುವುದಿಲ್ಲ. ಎಂದು ಪೂರ್ವ ಪಕ್ಷವು. ಶ್ರೀ ಹರಿಯ ಆನಂದಾದಿಗಳಿಗೆ ಪ್ರತಿಬಿಂಬವೇ ಎಂದು ಸಿದ್ಧಾಂತವು. ಅದರಲ್ಲಿ ನಾನಾಭಾವಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧)ನ ಚ ಬ್ರಹ್ಮಾದ್ಯಾನಂದವೈಚಿತ್ರ್ಯೇಽಪಿ ಬಿಂಬಭೂತವಿಷ್ಣ್ವಾನಂದವೈಚಿತ್ರ್ಯಂ|| (೨) ಆದಿತ್ಯಾದಿವದಾಧಿಕ್ಯಾತ್ || (೩) ನ ಹಿ ಸೂರ್ಯಕಾಂತ ಪ್ರತಿಬಿಂಬಸ್ಯಾಗ್ನಿಜನಕತ್ವಶಕ್ತಿರ್ನ ಜಲಗತಸ್ಯೇತ್ಯೇತಾವತಾ ಸೂರ್ಯವೈಚಿತ್ರ್ಯಂ || (೪) ಆಧಿಕ್ಯಂ ಹಿ ತತ್ರ ನಿಮಿತ್ತಂ | ಸೂರ್ಯಚಂದ್ರಾದಿಪ್ರತಿಬಿಂಬಂ ವಿನಾಽನ್ಯತ್ರ ತಥಾ ವಿಶೇಷಾದೃಷ್ಟೇಃ || ೧೭ ||

ಅ || (೧) ಪ್ರತಿಬಿಂಬಭೂತಗಳಾದ ಬ್ರಹ್ಮಾದಿಗಳ ಆನಂದಗಳು ವಿಚಿತ್ರಗಳಾದರೆ (ತಾರತಮ್ಯವುಳ್ಳವುಗಳಾದರೆ) ಬಿಂಬಭೂತವಾದ ವಿಷ್ಣುವಿನ ಆನಂದವೂ ವಿಚಿತ್ರವಾಗಬೇಕಾಗುವುದು. ಇಲ್ಲವಾದರೆ ಬ್ರಹ್ಮಾದಿಗಳ ಆನಂದದಲ್ಲಿಯೂ ತಾರತಮ್ಯವು ಇಲ್ಲದೆ ಹೋಗುವುದು. ಏವಂಚ ಪ್ರತಿಬಿಂಬ ಭೂತಗಳಾದ ಚತುರ್ಮುಖನ ಆನಂದಾದಿಗಳಿಗೆ ತಾರತಮ್ಯವಿದ್ದ ಪ್ರಯುಕ್ತ ಬಿಂಬ ಭೂತ ವಿಷ್ಣುವಿನ ಆನಂದಾದಿಗಳಿಗೂ ತಾರತಮ್ಯವು ಬರಬೇಕಾಗುವುದರಿಂದ ಆತನಲ್ಲಿ ಭಕ್ತಿಯು ಯುಕ್ತವಲ್ಲ ಎಂದರೆ ಹಾಗೆ ಹೇಳಕೂಡದು. (ಏಕೆಂದರೆ ಬ್ರಹ್ಮಾದಿಗಳ ಆನಂದಾದಿಗಳಿಗೆ ತಾರತಮ್ಯವಿದ್ದರೂ ವಿಷ್ಣುವಿನ ಆನಂದದಲ್ಲಿ ತಾರತಮ್ಯ ಹೇಳಕೂಡದು.) (೨) ಅದಕ್ಕೆ ನಿಮಿತ್ತವಾದ ಆಧಿಕ್ಯಂ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಆದಿತ್ಯ. ಸೂರ್ಯಕಾಂತಾದಿ ಸ್ಥಾನಗಳಂತೆ ಬಿಂಬ ಭೂತನಾದ ಶ್ರೀ ವಿಷ್ಣುವಿಗೆ ಐಶ್ವರ್ಯ ರೂಪ ಆಧಿಕ್ಯವು. ಬ್ರಹ್ಮಾದಿ ಸ್ಥಾನಗಳಿಗೆ ಭಕ್ತ್ಯಾದಿ ಗುಣಗಳಿಂದ ಆಧಿಕ್ಯವು. (೩) (ಸೂತ್ರದಲ್ಲಿಷ್ಟ ಕ್ರಮವನ್ನನುಸರಿಸಿ ಆದಿ ಪದದಿಂದುಕ್ತವಾದ ದೃಷ್ಟಾಂತವನ್ನು ಪಪಾದಿಸುತ್ತಾರೆ.) ಸೂರ್ಯಕಾಂತಾದಿಗಳಲ್ಲಿರತಕ್ಕ ಸೂರ್ಯ ಪ್ರತಿಬಿಂಬವು ಅಗ್ನಿಯನ್ನು ಹುಟ್ಟಿಸುತ್ತದೆ. ಜಲದಲ್ಲಿರತಕ್ಕ ಸೂರ್ಯ ಪ್ರತಿಬಿಂಬವು ಅಗ್ನಿಯನ್ನು ಹುಟ್ಟಿಸುವುದಿಲ್ಲ, ಹೀಗೆ ಇಷ್ಟರಿಂದ ಮಾತ್ರ ಪ್ರತಿಬಿಂಬದಲ್ಲಿ ವೈಚಿತ್ರ್ಯವಿದ್ದರೂ ಹೇಗೆ ಬಿಂಬಭೂತನಾದ ಸೂರ್ಯನಲ್ಲಿ ವೈಚಿತ್ರ್ಯವಿಲ್ಲವೋ, ಹಾಗೆಯೇ ಬ್ರಹ್ಮಾದಿ ದೇವತೆಗಳ ಆನಂದಗಳಿಗೆ ವೈಚಿತ್ರ್ಯ (ತಾರತಮ್ಯ)ವಿದ್ದರೂ ಭಗವಂತನ ಆನಂದದಲ್ಲಿ ವೈಚಿತ್ರ್ಯವಿಲ್ಲ. (೪) (ಬಿಂಬದಲ್ಲಿ ವೈಚಿತ್ರ್ಯವು ಇಲ್ಲದಿರುವುದರಿಂದ ಸೂರ್ಯಕಾಂತವಲ್ಲಿರತಕ್ಕ ಸೂರ್ಯಪ್ರತಿಬಿಂಬಕ್ಕೆ ಅಗ್ನಿಜನಕತ್ವ ಶಕ್ತಿಯಿದೆ, ಜಲದಲ್ಲಿರತಕ್ಕ ಸೂರ್ಯ ಪ್ರತಿಬಿಂಬಕ್ಕೆ ಅಂತಹ ಶಕ್ತಿಯಿಲ್ಲ ಎಂಬುವಲ್ಲಿ ಏನು ಕಾರಣವು ಎಂದರೆ) ಸೂರ್ಯಕಾಂತದಲ್ಲಿರತಕ್ಕ ಸೂರ್ಯ ಪ್ರತಿಬಿಂಬಕ್ಕೆ ಅಗ್ನಿಯನ್ನು ಹುಟ್ಟಿಸುವ ಶಕ್ತಿಯು ಬರಲಿಕ್ಕೆ ಸೂರ್ಯಾದಿಗಳಲ್ಲಿರತಕ್ಕ ಆಧಿಕ್ಯವು ನಿಮಿತ್ತವು (ಹೇಗೆಂದರೆ) ಸೂರ್ಯ ಚಂದ್ರಾದಿಗಳ ಪ್ರತಿಬಿಂಬವಿಲ್ಲದೆ ಬೇರೆ ಸೂರ್ಯಕಾಂತಾದಿಗಳಲ್ಲಿರತಕ್ಕ ಮುಖದಲ್ಲಿ ಅಗ್ನಿಜನಕತ್ವರೂಪವಾದ ವಿಶೇಷವು ದೃಷ್ಟವಾಗಲಿಲ್ಲ. (ಏವಂಚ ಬಿಂಬಭೂತನಾದ ಶ್ರೀಹರಿಯ ಐಶ್ವರ್ಯಾಧಿಕ್ಯದಿಂದ ಸ್ಥಾನಭೂತ ಬ್ರಹ್ಮಾದಿಗಳಿಗೆ ಭಕ್ತ್ಯಾದಿ ಗುಣಗಳಿಂದ ಆಧಿಕ್ಯವಿದ್ದ ಪ್ರಯುಕ್ತ ಬ್ರಹ್ಮಾದಿ ದೇವತೆಗಳ ಆನಂದಾದಿಗಳು ವಿಚಿತ್ರಗಳಾದಾಗ್ಯೂ ಶ್ರೀ ಭಗವಂತನ ಆನಂದವು ವಿಚಿತ್ರವಲ್ಲ. ಆದಕಾರಣ ಅಲೌಕಿಕ ಅವಿಚಿತ್ರ ಪರಿಪೂರ್ಣ ಅಪರಿಮಿತ ಆನಂದಾದಿ ಗುಣಗಳುಳ್ಳ ಶ್ರೀವಿಷ್ಣುವಿನಲ್ಲಿ ಭಕ್ತಿಯು ಯುಕ್ತವೇ.) || ೧೭ ||

೧೮ನೇ ತಥಾನ್ಯತ್ವಾಧಿಕರಣದಲ್ಲಿ ವ್ಯಕ್ತ ಅವ್ಯಕ್ತ ಪದಾರ್ಥಗಳು ಕಂಡು ಬಂದುದರಿಂದ ಬ್ರಹ್ಮನು ವ್ಯಕ್ತನೋ ಅವ್ಯಕ್ತನೋ ಎಂದು ಸಂದೇಹವು ಬಂದರೆ ವ್ಯಕ್ತನೆಂದು ಪೂರ್ವ ಪಕ್ಷವು. ಅವ್ಯಕ್ತನೆಂದು ಸಿದ್ಧಾಂತವು. ಅದರಲ್ಲಿ **ನಾನಾಭಾವಃ** ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ॥ (೧) ಸ ಚ ನಾನಾಭಾವಾದ್ವಿಷ್ಣೋಶ್ಚಿತ್ರಪ್ರತಿಬಿಂಬರೂಪತಾ ॥ (೨) ಆಧಿಕ್ಯಾದೇವ (೩) ಪ್ರತಿಬಿಂಬೇ ಹಿ ದೋಷಾಶ್ಚ ಪ್ರತೀಯಂತೇ । ಅತೋ ಹಿ ಶ್ರುತಿಃ ಪ್ರತಿಷೇಧತಿ 'ನೇದಂ ಯದಿದಮುಪಾಸತೇ' ಇತಿ ॥ ೧೮ ॥**

ಅ॥ (೧) ಭಗವದ್ರೂಪಗಳಿಗೆ ಸ್ವರೂಪತಃ ಭೇದವಿಲ್ಲದಿದ್ದರೂ ಧ್ಯಾನಿಸುವವರು ಬಹುಮಂದಿ ಇದ್ದ ಪ್ರಯುಕ್ತ ಧ್ಯಾನಕಾಲದಲ್ಲಿ ತೋರುವ ಮತ್ಸ್ಯಕೂರ್ಮ ಮೊದಲಾದ ಅನಂತಾನಂತರೂಪಗಳಿರುವ ಕಾರಣ ಅವುಗಳೆಲ್ಲವೂ ಶ್ರೀವಿಷ್ಣುವಿನ ರೂಪಗಳೆಂದಂಗೀಕರಿಸಿದರೆ ವಿರೋಧವಿಲ್ಲದಿರುವುದರಿಂದ ಶ್ರೀ ವಿಷ್ಣುವು ಚಿತ್ರಪ್ರತಿಬಿಂಬಸ್ವರೂಪನು. (ಅಂದರೆ ಮಾನಸವಾಸನಾಮಯವಾದ ಮನಸ್ಸಿನಲ್ಲಿ ತೋರುವ ಪ್ರತಿಮಾ ಸ್ವರೂಪನು.) (ಅಂತೂ ಧ್ಯೇಯವಾದ ಪ್ರತಿಮೆಯೂ ಶ್ರೀಹರಿಯೇ.) (ಏವಂಚ ಧ್ಯೇಯ ಪ್ರತಿಮೆಗಳು ಬಹಳವಿದ್ದ ಪ್ರಯುಕ್ತ ಶ್ರೀ ವಿಷ್ಣುರೂಪಗಳಿಗೂ ನಾನಾತ್ವವು ಪ್ರಾಪ್ತವಾಗುವುದರಿಂದ ವ್ಯಕ್ತತ್ವವೇ ಬರುವುದರಿಂದ ಆತನಲ್ಲಿ ಭಕ್ತಿಯು ವ್ಯರ್ಥವೇ. ಎಂದರೆ) ಹಾಗೆ ಹೇಳಕೂಡದು (೨) (ಏಕೆಂದರೆ ಆಧಿಕ್ಯಾಚ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಜೀವರ ಆನಂದಾದಿಗಳು ಅತ್ಯಲ್ಪಗಳಾಗಿವೆ. ಪರಬ್ರಹ್ಮನ ಆನಂದಾದಿಗಳು ಅಪರಿಮಿತಗಳಾಗಿವೆ. ಆದಕಾರಣ ಅವುಗಳಿಗಿಂತ ಜೀವರ ಆನಂದಾದಿಗಳು ಹೇಗೆ ವಿಲಕ್ಷಣಗಳಾಗಿವೆಯೋ ಹಾಗೆಯೇ ಧ್ಯೇಯವಾದ ಪ್ರತಿಮೆಯಲ್ಲಿ ದುರ್ಲಕ್ಷಣಾದಿಗಳು ಇರುವ ಕಾರಣ ಶ್ರೀ ವಿಷ್ಣುವಿಗೆ ನಿರ್ದೋಷತ್ವಾದಿರೂಪವಾದ ಆಧಿಕ್ಯವಿದ್ದುದರಿಂದಲೇ (ಧ್ಯೇಯವಾದ ಪ್ರತಿಮಾರೂಪಕ್ಕೆ ಶ್ರೀ ವಿಷ್ಣುವಿನಿಂದ ವೈಲಕ್ಷಣ್ಯವನ್ನು ಅಂಗೀಕರಿಸಲೇ ಬೇಕು) (೩) ಶ್ರೀ ವಿಷ್ಣುವು ಧ್ಯೇಯಪ್ರತಿಮಾ ರೂಪನು ಏಕೆ ಆಗುವುದಿಲ್ಲ ಎಂದರೆ) ಧ್ಯೇಯವಾದ ಪ್ರತಿಮೆಯಲ್ಲಿ ಪ್ರಾಕೃತತ್ವ, ನಿರತಿಶಯಸೌಂದರ್ಯಾದ್ಯಭಾವ, ಅನಿತ್ಯತ್ವ ಮೊದಲಾದ ದೋಷಗಳು ತೋರುತ್ತವೆ. ನಿರ್ದೋಷನಾದ ಪರಬ್ರಹ್ಮನಿಗೂ ಸದೋಷವಾದ ಧ್ಯೇಯ ಪ್ರತಿಮೆಗೂ ವೈಲಕ್ಷಣ್ಯವಿದ್ದುದರಿಂದ ಐಕ್ಯವು ಸರ್ವಥಾ ಕೂಡದಿರುವುದರಿಂದಲೇ ಪ್ರಸಿದ್ಧವಾದ ಶ್ರುತಿಯು 'ನಿನ್ನ ಸಮೀಪದಲ್ಲಿ ಯಾವುದಿದೆಯೋ ಅದು ಪರಬ್ರಹ್ಮವಲ್ಲ' ಎಂದು ಸ್ಪಷ್ಟವಾಗಿ ನಿಷೇಧಿಸುತ್ತದೆ. (ತಥಾಚ ಶ್ರೀ ವಿಷ್ಣುವಿಗೆ ನಿರ್ದೋಷತ್ವ ಮೊದಲಾದ ಆಧಿಕ್ಯವಿದ್ದುದರಿಂದ ಸದೋಷವಾದ ಧ್ಯೇಯ ಪ್ರತಿಮಾರೂಪತ್ವವಿಲ್ಲದಿರುವುದರಿಂದ ಆತನಿಗೆ ಅವ್ಯಕ್ತತ್ವವೇ ಯುಕ್ತವೇ ) ॥ ೧೮ ॥

೧೯ನೇ ಅನೇನ ಸರ್ವಗತತ್ವಾಧಿಕರಣದಲ್ಲಿ ಜನ್ಮಾದ್ಯಸ್ಯ ಯತಃ ಶ್ರೀ ಹರಿಯು ಜಗತ್ತನ್ನು ಸೃಷ್ಟಿಸುತ್ತಾನೆ. ಎಂಬ ವಚನವು, (1) ಕೆಲವು ಜಗತ್ತನ್ನು ಸೃಷ್ಟಿಸುತ್ತಾನೆ, (2) ಎಲ್ಲಾ ಜಗತ್ತನ್ನು ಸೃಷ್ಟಿಸುತ್ತಾನೆ. ಎಂದು ೨ ಪಕ್ಷದಲ್ಲಿಯೂ ಕೂಡುವುದರಿಂದ ಶ್ರೀಹರಿಯು ಸಮಸ್ತ ದೇಶಗಳಲ್ಲಿಯೂ ಸಮಸ್ತ ಕಾಲಗಳಲ್ಲಿಯೂ ಒಬ್ಬನೇ ಸೃಷ್ಟಿಸುತ್ತಾನೋ ಇಲ್ಲವೋ ಎಂದು ಸಂಶಯವು ಬಂದರೆ— ಸರ್ವ ದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವವಸ್ತುಗಳನ್ನು ಒಬ್ಬನೇ ಸೃಷ್ಟಿಸುವವನಲ್ಲ (ಎಂದು ಪೂರ್ವಪಕ್ಷವು. ಒಬ್ಬನೇ ಸೃಷ್ಟಿಸುವವನೆಂದು ಸಿದ್ಧಾಂತವು. ಆದರಲ್ಲಿ **ನಾನಾಭಾವಃ** ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ (೧) ನ ಚ ನಾನಾವತಾರಕೌತುಕದರ್ಶನಾದ್ವಿಷೋಃ । ಕ್ವಚಿದ್ದೇಶಕಾಲಾಂತರೇ ಕೌತುಕಾದೇವ ಸೃಷ್ಟ್ಯಾದಿಕಮಕುರ್ವನ್ ಅನ್ಯಮೇವ ಸಾಮರ್ಥ್ಯೇನ ನಿಯೋಜಯತಿ ॥ (೨) 'ಸರ್ವತ್ರ ಸರ್ವಮೇತಸ್ಮಾ'ದಿತ್ಯಾದಿ ಶ್ರುತ್ಯಾ ಕ್ರೀಡಾಯಾಮಪಿ ಸ್ವಾತಂತ್ರ್ಯಾತ್ । (೩) ಸ್ವಾತಂತ್ರ್ಯಾತ್ಕ್ರೀಡತೇ ವಿಷ್ಣುರ್ನಚ ಸ್ವಾತಂತ್ರ್ಯಮನ್ಯಗಂ। ಕರೋತಿ ಕ್ವಾಪಿ ನಿಯತಾ ಕ್ರೀಡಾ ಸೃಷ್ಟ್ಯಾದಿಗಾऽಸ್ಯ ಚ ॥ ನಿಯತಕ್ರೀಡನಾದೇವ ಕರ್ತಾ ನಾನ್ಯೋऽಸ್ತಿ ಕಸ್ಯಚಿತ್ । ಅಸ್ವತಂತ್ರೋ ಹಿ ಚಲತಿ ಚಲಚಿತ್ತಾದಶಕ್ತಿತಃ । ಸ್ವತಂತ್ರಃ ಪೂರ್ಣಶಕ್ತಿಃ ಸನ್ಕುತೋऽಸೌ ನಿಯತಿಂ ತ್ಯಜೇತ್ ॥ ಇತಿ ಶ್ರುತೇಶ್ಚ॥೧೯॥

ಅ ॥ (೧)ಶ್ರೀಪರಮಾತ್ಮನಿಗೆ ಕೃಷ್ಣರಾಮಮೊದಲಾದ ಅನೇಕ ಅವತಾರಗಳಲ್ಲಿ ಅರ್ಜುನನ ಸಾರಥ್ಯವನ್ನು ಮಾಡಿದ್ದು ಇದು ಮೊದಲಾದ ಲೀಲಾರೂಪಕೌತುಕವು ಕಂಡುಬಂದುದರಿಂದ ಕೆಲವು ದೇಶಗಳಲ್ಲಿ ಕೆಲವು ಕಾಲಗಳಲ್ಲಿ ಕ್ರೀಡೆಯಿಂದಲೇ ತಾನು ಸೃಷ್ಟ್ಯಾದಿಗಳನ್ನು ಮಾಡದೇನೇ ಇನ್ನೊಬ್ಬನಿಗೇನೇ ಸ್ವಾತಂತ್ರ್ಯಾದಿಗಳನ್ನು ಕೊಟ್ಟು ಸೃಷ್ಟ್ಯಾದಿಗಳನ್ನು ಮಾಡಲಿಕ್ಕೆ ಪ್ರೇರೇಪಿಸುತ್ತಾನೆ. (ಏವಂಚ ಶ್ರೀವಿಷ್ಣುವಿನ ಅವತಾರಗಳಲ್ಲಿ ನಾನಾ ವಿಧಗಳಾದ ಕೌತುಕಗಳು ಕಂಡು ಬಂದುದರಿಂದ ಜಗತ್ತಿನ ಸೃಷ್ಟ್ಯಾದಿ ಕರ್ತೃತ್ವವನ್ನು ಇನ್ನೊಬ್ಬನಿಗೆ ಕೊಡುತ್ತಾನೆ. ಆದಕಾರಣ ಆತನಿಗೇನೇ ಮಹಾಮಹಿಮೆಯು ಇಲ್ಲ. ಎಂದರೆ— ಹಾಗೆ ಹೇಳಕೂಡದು (೨) (ಏಕೆಂದರೆ—ಸ್ವಾತಂತ್ರ್ಯಂ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು=ಸರ್ವವಸ್ತುಗಳ ಸೃಷ್ಟ್ಯಾದಿಗಳೆಲ್ಲವೂ ಸರ್ವಕಾಲಗಳಲ್ಲಿಯೂ ಸರ್ವದೇಶಗಳಲ್ಲಿಯೂ ಶ್ರೀಹರಿಯೊಬ್ಬನಿಂದಲೇ ಆಗುತ್ತವೆ, ಇದು ಮೊದಲಾದ ಶ್ರುತಿಗಳಿಂದ ಸರ್ವಸ್ವಾತಂತ್ರ್ಯವಿದೆ ಎಂದು ತಿಳಿದು ಬರುವದರಿಂದ ಕ್ರೀಡೆಯಲ್ಲಿಯೂ (ತನ್ನ ಸರ್ವೋತ್ತಮತ್ವವನ್ನು ಇನ್ನೊಬ್ಬನಿಗೆ ಕೊಡುವುದಿಲ್ಲ. ಸತ್ಯಲೋಕಾಧಿಪತ್ಯವನ್ನು ಇನ್ನೊಬ್ಬನಿಗೆ ಕೊಟ್ಟಂತೆ ತನ್ನ ವೈಕುಂಠಲೋಕದ ಆಧಿಪತ್ಯವನ್ನು ಯಾವಾಗಲೂ ಎಲ್ಲಿಯೂ ಇನ್ನೊಬ್ಬನಿಗೆ ಕೊಡಲಿಲ್ಲವಷ್ಟೆ. ಆದುದರಿಂದಲೇ ಮುಕ್ತರಿಗೆ ತನ್ನ ಸಾರೂಪ್ಯವನ್ನು ಕೊಟ್ಟಾಗ್ಯೂ ಶ್ರೀ ವತ್ಸಕೌಸ್ತುಭಾದಿಗಳನ್ನು ಕೊಡಲಿಲ್ಲ.) (ಕ್ರೀಡೆಯಿಂದ ಇತರರಿಗೆ ಸ್ವಾತಂತ್ರ್ಯವನ್ನು ಶ್ರೀಹರಿಯು ಕೊಟ್ಟಿದ್ದರೆ ಆ ಕಾಲದಲ್ಲಿ ಇತರರಿಗೆ ಸೃಷ್ಟ್ಯಾದಿಕರ್ತೃತ್ವವು ಇಲ್ಲವೆಂದಾಗುವುದರಿಂದ ಸಮಸ್ತ ವಸ್ತುಗಳನ್ನು ಸರ್ವದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಶ್ರೀಹರಿಯೊಬ್ಬನೇ ಸೃಷ್ಟಿಸುವವನು ಇತ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿ ವಿರೋಧವು ಬರುತ್ತಿತ್ತು. ಹಾಗೆ ಇನ್ನೊಬ್ಬನಿಗೆ ಸ್ವಾತಂತ್ರ್ಯವನ್ನು ಕೊಡುವುದೇ ಇಲ್ಲ (೩)(ಈ ವಿಷಯದಲ್ಲಿ ಸ್ಪಷ್ಟ ಶ್ರುತಿಯನ್ನು ಹೇಳುತ್ತಾರೆ) ಶ್ರೀವಿಷ್ಣುವು ಸರ್ವಸ್ವಾತಂತ್ರ್ಯದಿಂದಲೇ ಕ್ರೀಡಿಸುತ್ತಾನೆ. ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ತನ್ನ ಸ್ವಾತಂತ್ರ್ಯವನ್ನು ಇತರರಿಗೆ ಕೊಡುವುದೇ ಇಲ್ಲ. ಶ್ರೀಹರಿಗೆ ಸೃಷ್ಟ್ಯಾದಿ ವಿಷಯಕವಾದ ಕ್ರೀಡೆಯು ನಿಯಮೇನ ಇರತಕ್ಕುದೇ. ಸೃಷ್ಟ್ಯಾದಿ ವಿಷಯಕವಾದ ನಿಯತವಾದ ಕ್ರೀಡೆಯಿಂದಲೇ ಶ್ರೀಹರಿಯು ಸರ್ವಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನು. ಇನ್ನೊಬ್ಬನು ಯಾವುದನ್ನೂ ಸ್ವತಂತ್ರವಾಗಿ ಸೃಷ್ಟಿಸುವವನಿಲ್ಲ. ಅಸ್ವತಂತ್ರನಾದವನು ಚಂಚಲಚಿತ್ತವುಳ್ಳವನಾದುದರಿಂದ ಅಶಕ್ತಿಯಿಂದ ಚಲಿಸುತ್ತಾನೆ. (ಅಂದರೆ—ತನ್ನ ಕಾರ್ಯದಿಂದ ಚ್ಯುತನಾಗುತ್ತಾನೆ.) ಸರ್ವಸ್ವತಂತ್ರನೂ ಅಪರಿಮಿತ ಶಕ್ತಿಯುಳ್ಳವನೂ ನಿರ್ದುಷ್ಟನೂ ಆದ ಈ ಶ್ರೀಹರಿಯು ತನ್ನ ನಿಯಮವನ್ನು ಏತಕ್ಕೆ ಪರಿತ್ಯಾಗ ಮಾಡುವನು? ಎಂಬ ಶ್ರುತಿಯಿಂದ (ತನ್ನ ಸ್ವಾತಂತ್ರ್ಯಾದಿಗಳನ್ನು ಇತರರಿಗೆ ಸರ್ವಥಾ ಕೊಡಲಾರನು.) (ಏವಂಚ ಶ್ರೀಹರಿಗೇನೇ ಸರ್ವಸ್ವಾತಂತ್ರ್ಯವಿದ್ದುದರಿಂದ ಆ ಶ್ರೀಹರಿಯೇ ಸರ್ವದೇಶ ಕಾಲಗಳಲ್ಲಿ ಜಗತ್ಸೃಷ್ಟ್ಯಾದಿಗಳನ್ನು ಮಾಡುವವನಾದುದರಿಂದ ಆ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವು.)

॥ ೧೯ ॥

೨೦ನೇ ಫಲಾಧಿಕರಣದಲ್ಲಿ ಶ್ರೀಹರಿಯು ಫಲವನ್ನು ಕೊಡುವವನೋ, ಕರ್ಮವು ಫಲವನ್ನು ಕೊಡತಕ್ಕುದೋ, ಎಂದು ವಾದಿಗಳ ವಿವಾದದಿಂದ ಸಂಶಯವು ಬಂದರೆ-ಕರ್ಮವೇ ಫಲವನ್ನು ಕೊಡತಕ್ಕುದು, ಎಂದು ಪೂರ್ವಪಕ್ಷವು. ಶ್ರೀಹರಿಯೇ ಫಲವನ್ನು ಕೊಡುವವನು ಎಂದು ಸಿದ್ಧಾಂತವು.ಅದರಲ್ಲಿ ಪ್ರಲೋಭಃ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಕರ್ಮಾನ್ವಯವ್ಯತಿರೇಕಾತ್ಫಲಸ್ಯೇಶ್ವರಃ ಫಲದಾತೇತಿ ಪ್ರಲೋಭ ಮಾತ್ರಂ || (೨) ತಸ್ಯೈವ ಸ್ವಾತಂತ್ರ್ಯಾತ್ || (೩) ಕರ್ಮಾಣ್ಯನಂತಾನಿ ಯಥೇಷ್ಟ ಮಿಶಃ ಸಂಪಾದ್ಯ ತೇಷಾಂ ಫಲಮಿಚ್ಛಯೈವ | ಕ್ವಚಿದ್ದದಾತಿ ಕ್ವಚ ನೋ ದದಾತಿ ನ ಹ್ಯಾನಂತ್ಯಾತ್ಕರ್ಮಣಾಂ ಭೋಗನಾಶಃ | ಸ್ವಾತಂತ್ರ್ಯಂ ಚೇತ್ಕರ್ಮಣಾಂ ಸರ್ವ ಭೋಗಃಸ್ಯಾನ್ನಹ್ಯೇವಂ ಕ್ವಾಪಿ ತತ್ಕ್ಷೇಪಚಿತ್ಸ್ಯಾತ್ || ಅತೋऽಪಿ ಸ ಸ್ವೇಚ್ಛಯಾ ಕಿಂಚಿದೇವ ಫಲಂ ಕುರ್ಯಾದ್ವಿಫಲಂ ಪ್ರಾಯಶಶ್ಚ || ಕ್ವಚಿತ್ ಜ್ಞಾನಂ ಜನಯನ್ ಭಸ್ಮಕುರ್ಯಾತ್ ಸ್ವೇಚ್ಛಾವೃತ್ತಿಸ್ತಸ್ಯ ವಿಷ್ಣೋಸ್ಸದೈವೇತಿ ಬ್ರಹ್ಮಾಂಡೇ || (೪) ಸ್ವತಂತ್ರ ಈಶ ಏವೈಕಸ್ತದ್ವಶಂ ಕರ್ಮ ಸರ್ವದಾ| ಅತ ಈಶಸ್ವಮಿಶಸ್ಯ ನಹೀ ಶೋऽನ್ಯಃ ಕಥಂಚನೇತಿ ಶ್ರುತಿಃ || (೫) ಅತಃಪ್ರಲೋಭಮಾತ್ರಕಲ್ಪನೇ ಶ್ರುತಹಾ ನಿರಶ್ರುತಕಲ್ಪನಾ ಚೇತಿ ಹರಿರೇವ ಫಲಪ್ರದಃ || ೨೦ ||

ಅ || (೧) ಜೀವನು ಕರ್ಮವನ್ನು ಮಾಡಿದರೇನೇ ಶ್ರೀಹರಿಯು ಜೀವನಿಗೆ ಫಲವನ್ನು ಕೊಡುತ್ತಾನೆ, ಕರ್ಮ ಮಾಡದಿದ್ದರೆ ಫಲವನ್ನು ಕೊಡುವುದಿಲ್ಲ, ಆದಕಾರಣ ಶ್ರೀಹರಿಯೇ ಫಲವನ್ನು ಕೊಡುವವನೆಂಬುವುದು ಕೇವಲ ಪ್ರಲೋಭವು. (ವಂಚನೆಯು.) ಆದುದರಿಂದ ಶ್ರೀಹರಿಗೆ ನಿರತಿಶಯವಾದ ಐಶ್ವರ್ಯವಿಲ್ಲ. ಎಂದರೆ) ಹಾಗೆ ಹೇಳಕೂಡದು (೨) (ಏಕೆಂದರೆ—ಸ್ವಾತಂತ್ರ್ಯಂ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಫಲವನ್ನು ಕೊಡಲಿಕ್ಕೆ ಕರ್ಮವು ನಿಮಿತ್ತಕಾರಣವು. ಅಂತಹ ಕರ್ಮವೂ ಶ್ರೀಹರಿಯ ಅಧೀನವೇ ಎಂದು ಹೇಳಿದುದರಿಂದ) ಶ್ರೀಹರಿಗೇನೇ ಸರ್ವಸ್ವಾತಂತ್ರ್ಯವು. (ಇಲ್ಲವಾದರೆ ಭಗವಂತನ ಅಪರೋಕ್ಷ ಜ್ಞಾನವಾದೊಡನೆಯೇ ಪ್ರಾರಬ್ಧ ಕರ್ಮಬಿಟ್ಟು ಬೇರೆ ಎಲ್ಲಾ ಕರ್ಮಗಳ ಫಲವನ್ನು ಭೋಗಿಸದೇನೇ ಹೇಗೆ ಕರ್ಮಗಳನ್ನು ನಾಶಗೊಳಿಸುತ್ತಾನೆ.) (೩) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಶ್ರೀಹರಿಯು ಅನಂತಾನಂತ ಕರ್ಮಗಳನ್ನು ಯಥೇಷ್ಟವಾಗಿ ಜೀವರಿಂದ ಮಾಡಿಸಿ ತನ್ನ ಇಚ್ಛೆಯಿಂದಲೇ ಅವುಗಳಿಗೆ ಫಲವನ್ನು ಕ್ವಚಿತ್ ಕೊಡುತ್ತಾನೆ. ಕೆಲವೆಡೆ ಕರ್ಮಗಳು ಅನಂತಗಳಾಗಿರುವುದರಿಂದ ಕೊಡುವುದಿಲ್ಲ. ಕರ್ಮಗಳು ಅನಂತಗಳಾಗಿರುವುದರಿಂದ ಭೋಗದಿಂದ ನಾಶವೂ ಆಗುವುದಿಲ್ಲ. ಜೀವನಿಗೆ ಕರ್ಮಗಳ ಸ್ವಾತಂತ್ರ್ಯವಿರುತ್ತಿದ್ದರೆ ಕರ್ಮಗಳ ಸರ್ವಭೋಗವೇ ಆಗುತ್ತಿತ್ತು. ಹೀಗೆ ಎಲ್ಲಿಯೂ ಯಾವುದರಿಂದಲೂ ಸರ್ವಭೋಗವು ಆಗಲಾರದಷ್ಟೆ. ಆ ಶ್ರೀಹರಿಯು ಸರ್ವಸ್ವತಂತ್ರನಾದುದರಿಂದಲೇ ತನ್ನ ಇಚ್ಛೆಯಿಂದಲೇ ಕೆಲವು ಕರ್ಮವನ್ನೇ ಸಫಲವನ್ನಾಗಿ ಮಾಡುತ್ತಾನೆ. ಪ್ರಾಯಶಃ ಕೆಲವು ಕರ್ಮವನ್ನು ಪ್ರಾಯಶ್ಚಿತ್ತ ಮೊದಲಾದ ನಿಮಿತ್ತಾಂತರಗಳಿಂದ ಕರ್ಮವನ್ನು ಫಲರಹಿತವನ್ನಾಗಿ ಮಾಡುತ್ತಾನೆ. ಕೆಲವು ಕಡೆ ಅಪರೋಕ್ಷ ಜ್ಞಾನವನ್ನು ಹುಟ್ಟಿಸಿ (ಕರ್ಮವನ್ನು ಭಸ್ಮೀಕರಿಸುತ್ತಾನೆ. ಆ ಶ್ರೀ ವಿಷ್ಣುವು ಯಾವಾಗಲೂ ತನ್ನ ಇಚ್ಛೆಯಿಂದಲೇ ಇರುತ್ತಾನೆ, ಎಂದು ಬ್ರಹ್ಮಾಂಡ ಪುರಾಣದಲ್ಲಿ (ವಿವಕ್ಷಿತ ಅಶೇಷಾರ್ಥಗಳನ್ನು ಪ್ರತಿಪಾದಿಸಿಯದೆ.) (೪) ಸರ್ವ ಸ್ವತಂತ್ರನಾದವನು ಶ್ರೀಹರಿಯೊಬ್ಬನೇ.ಸರ್ವಕರ್ಮವೂ ಸದಾ ಆ ಶ್ರೀಹರಿಯ

ಅಧೀನವೇ. ಆದುದರಿಂದಲೇ ಶ್ರೀಹರಿಗೆ ಸರ್ವೇಶ್ವರತ್ವವು. ಇನ್ನೊಬ್ಬನು ಯಾವ ಪ್ರಕಾರದಿಂದಲೂ ಸರ್ವೇಶ್ವರನು ಆಗಲಾರನಷ್ಟೆ, ಎಂಬ ಶ್ರುತಿಯು (ಕರ್ಮದಲ್ಲಿಯೂ ಶ್ರೀಹರಿಗೇನೇ ಸ್ವಾತಂತ್ರ್ಯವನ್ನು ಹೇಳಿದೆ.) (೫) ಆದಕಾರಣ ಪ್ರಲೋಭ (ವಂಚನೆ) ಮಾತ್ರವನ್ನು ಕಲ್ಪಿಸಿದರೆ ಶ್ರುತಿಸಿದ್ಧವಾದುದನ್ನು ಬಿಡಬೇಕಾಗುವುದು. ಅಶ್ರುತವಾದುದನ್ನು ಕಲ್ಪಿಸಬೇಕಾಗುವುದು. ಆದಕಾರಣ ಶ್ರೀಹರಿಗೇನೇ ನಿರತಿಶಯ ಐಶ್ವರ್ಯರೂಪ ಸರ್ವಸ್ವಾತಂತ್ರ್ಯವಿದ್ದುದರಿಂದ ಆತನೇ ಫಲವನ್ನು ಕೊಡುವವನು. ಆತನಲ್ಲಿ ಭಕ್ತಿಯು ಯುಕ್ತವೇ. ॥ ೨೦ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣದಲ್ಲಿ ೩ನೇ ಅಧ್ಯಾಯದಲ್ಲಿ ೨ನೇ ಪಾದವು ಸಮಾಪ್ತವಾಯಿತು-

# ೩ನೇ ಪಾದವು

**ಪದ್ಮಾಪದ್ಮಜವಂದ್ಯಾಯ ಪದ್ಮಪತ್ರನಿಭೇಕ್ಷಣ ।**
**ಪದ್ಮನಾಭಾಯ ರಾಮಾಯ ನಮಃ ಸತ್ಪದ್ಮಮಾಲಿನೇ ॥**

ಈ ಪಾದದಲ್ಲಿ ಭಕ್ತಿಸಾಧ್ಯವಾದ ಅಪರೋಕ್ಷ ಜ್ಞಾನಕ್ಕೆ ಸಾಧನವಾದ ಉಪಾಸನಾವನ್ನು ಪ್ರತಿಪಾದಿಸುತ್ತಾರೆ. ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುತ್ತಾರೆ.

ಪೃಥಗ್ದೃಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ । ವಿಶೇಷದರ್ಶನಂ ಕಾರ್ಯ
ಲೋಪೋ ನಾನೋಕ್ತಿರಾಶುತಾ । ವಿಭ್ರಮೋಽಪಾಕೃತಿರ್ಲಿಂಗಮನವಸ್ಥಾವಿಶೇಷಿತಾ ।
ಅಪ್ರಯೋಜನತಾ ಚಾತಿಪ್ರಸಂಗೋಽದೂರಸಂಶ್ರಯಃ । ವಿಶಿಷ್ಟಕಾರಣಂ ಚೇಷ್ಟಾ
ದೃಷ್ಟವೈರೂಪ್ಯಮುನ್ನತಿಃ । ಅನುಕ್ತಿರಪ್ರಯತ್ನತ್ವಂ ದೃಢಬಂಧಪರಾಭವೌ ।
ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾನಿರ್ಣಯೋ ಭ್ರಮಃ । ವಿಶೇಷ
ದರ್ಶಿತಾಲಾಭೌ ಗುಣಸಾಮ್ಯಂ ಪೃಥಗ್ದೃಶಿಃ । ಅಗಮ್ಯವರ್ತ್ಮಸಂಧಾನಮಿಷ್ಟಂ
ಫಲಮುಕಲ್ಪನಾ । ಶುದ್ಧವೈರೂಪ್ಯಮುಂಗತ್ವಮವಿಶೇಷದೃಶಿಃ ಕ್ರಿಯಾ । ಯುಕ್ತಯಃ
ಪೂರ್ವಪಕ್ಷಸ್ಥಾಸ್ಸುಜ್ಞೇಯತ್ವಂ ವಿಧಿಕ್ರಿಯಾ । ಮಾಹಾತ್ಮ್ಯಮಲ್ಪಶಕ್ತಿತ್ವಂ
ಯಥಾಯೋಗ್ಯಫಲಂ ಭವಃ । ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।
ಯಥಾಶಕ್ತಿಕ್ರಿಯಾ ಸಂಧಿಃ ಪ್ರಮಾಣಬಲಮಾನತಿಃ । ಕಾರಣಂ ಕಾರ್ಯವೈಶೇಷ್ಯಂ
ಸ್ವಭಾವೋ ವಸ್ತುದೂಷಣಂ । ಪ್ರತಿಕ್ರಿಯಾವಿರೋಧಶ್ಚ ಪ್ರತಿಸಂಧಿರನೂನತಾ ॥
ಸಂಸ್ಕಾರಾಪಾಟವಂ ಸ್ವೇಚ್ಛಾನಿಯತಿರ್ವಸ್ತುವೈಭವಂ । ವಿಶೇಷೋಕ್ತಿರಮಾನತ್ವಂ
ಪ್ರಾಧಾನ್ಯಂ ಪ್ರೀತಿರಾಗಮಃ ಸುಸ್ಥಿರತ್ವಂ ಕೃತಪ್ರಾಪ್ತಿರನಾದಿಗುಣವಿಸ್ತರಃ । ಸಾಧ
ನೋಕ್ತಮತಾ ನಾನಾದೃಷ್ಟಿಃ ಶಿಷ್ಟಿರನೂನತಾ । ಅವಿಷ್ಣುತ್ವಾವಿರೋಧೌ ಚ ಗುಣ
ವೈಶೇಷ್ಯಮಾಗಮಃ ಸಿದ್ಧಾಂತನಿರ್ಣಯೇ ಹ್ಯೇತಾಃ ಯುಕ್ತಯೋಽವ್ಯಾಹತಾಃ ಸದಾ ॥
ಎಂದು

೧ನೇ ಸರ್ವವೇದಾಧಿಕರಣದಲ್ಲಿ ಸಚ್ಛಾಸ್ತ್ರಗಳ ಶ್ರವಣಾದಿಗಳನ್ನು ಮಾಡಬೇಕೆಂಬುವ ವಚನವು ಸಾಧಾರಣವಾಗಿರುವುದರಿಂದ ಪ್ರತಿಯೊಬ್ಬರೂ (1) ಸರ್ವಶಾಖೆಗಳಲ್ಲಿ ಹೇಳಿದ ಪ್ರಕಾರ ಪರಬ್ರಹ್ಮನನ್ನು ತಿಳಿಯಬೇಕೋ, (2) ಅಥವಾ ತಂತಮ್ಮ ಶಾಖೆಗಳಲ್ಲಿ ಹೇಳಿದ ಪ್ರಕಾರ ತಿಳಿಯಬೇಕೋ, ಎಂದು ಸಂದೇಹವು ಬಂದರೆ—ತಂತಮ್ಮ ಶಾಖೆಗಳಲ್ಲಿ ಹೇಳಿದ ಪ್ರಕಾರವೇ ತಿಳಿಯಬೇಕು, ಎಂದು ಪೂರ್ವಪಕ್ಷವು. ಸರ್ವಶಾಖೆಗಳಲ್ಲಿ ಹೇಳಿದ ಪ್ರಕಾರವೇ ತಿಳಿಯಬೇಕೆಂದು ಸಿದ್ಧಾಂತವು. ಅದರಲ್ಲಿ ಪೃಥಕ್‌ದೃಷ್ಟಿಃ(ಎಲ್ಲಾ ಶಾಖೆ

ಗಳಲ್ಲಿ ಹೇಳಿದ ಅರ್ಥಗಳನ್ನು ಪ್ರತ್ಯೇಕವಾಗಿ ಕಾಣುವುದು.) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಪ್ರತಿಶಾಖಮುಚ್ಯಮಾನಾನಾಮರ್ಥಾನಾಂ ಪೃಥಕ್ತ್ವಾತ್ತತ್ತಚ್ಛಾಖಿಭಿರೇವ ತತ್ರತತ್ರೋಕ್ತಂ ಜ್ಞೇಯಮಿತಿನಿಯಮಃ ॥ (೨) ನಾನಾವೇದೈರಿತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚೇತಿ ಶ್ರುತೇಃ ಸುಷ್ಠು ಜ್ಞೇಯತ್ವಾದ್ವಿಷ್ಣೋಃ ॥ ೧ ॥**

ಅ ॥ (೧) ಪ್ರತಿಯೊಂದು ಶಾಖೆಗಳಲ್ಲಿ ಹೇಳಲ್ಪಡತಕ್ಕ ಅರ್ಥಗಳು ಬೇರೆ ಬೇರೆಯಾಗಿರುವುದರಿಂದ ಆಯಾಯ ಶಾಖೆಗಳಿಂದಲೇ ಆಯಾಯ (ತಂತಮ್ಮ) ಶಾಖೆಗಳಲ್ಲಿ ಹೇಳಿದ್ದ ಪ್ರಮೇಯವನ್ನು ತಿಳಿಯಬೇಕು ಎಂದು ನಿಯಮವು. (ಎಲ್ಲರೂ ಎಲ್ಲಾ ಶಾಖೆಗಳಲ್ಲಿ ಹೇಳಿದ ಪ್ರಮೇಯವನ್ನು ತಿಳಿಯಬೇಕಾಗಿಲ್ಲ.) ಏಕೆಂದರೆ, ಸರ್ವಶಾಖೆಗಳಲ್ಲಿ ಹೇಳಿದ ವಸ್ತುವು ಒಂದಲ್ಲ. ಒಂದು ಶಾಖೆಯಲ್ಲಿ 'ವಿಜ್ಞಾನಮಾನಂದಂ ಬ್ರಹ್ಮ' ಎಂದೂ ಇನ್ನೊಂದರಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದೂ, ಮತ್ತೊಂದು ಕಡೆ 'ಶ್ರೋತಾ ಮಂತಾ' ಎಂದು ಇತ್ಯಾದಿ ಪ್ರಕಾರ ಸರ್ವಶಾಖೆಗಳಲ್ಲಿ ಹೇಳಿದ ಅರ್ಥಗಳು ಬೇರೆ ಬೇರೆಯಾಗಿರುವುದರಿಂದ ಒಂದನ್ನೇ ತಿಳಿಯಬೇಕಾಗಿರುವುದರಿಂದ ತಂತಮ್ಮ ಶಾಖೆಗಳಲ್ಲಿ ಹೇಳಿದುದನ್ನೇ ತಿಳಿಯಬೇಕು. ಹೀಗೆ ಸಮಸ್ತ ಶ್ರುತಿಗಳ ಅರ್ಥಭೂತನಾದ ಪರಬ್ರಹ್ಮನೂ ಸಮಸ್ತ ಶ್ರುತಿಗಳ ಅರ್ಥ ನಿರ್ಣಾಯಕವಾದ ಶಾಸ್ತ್ರವೂ ಸರ್ವೋಪಾದೇಯವಾಗಲಾರದು.ಎಂದರೆ ಹಾಗೆ ಹೇಳಕೂಡದು. (೨)(ಏಕೆಂದರೆ**ಸುಜ್ಞೇಯತ್ವಂ**=(ಸಮಸ್ತ ವೇದಗಳಿಂದಲೂ ಶ್ರೀ ವಿಷ್ಣು ವಿಗೇನೇ ಸುಖದಿಂದ ತಿಳಿಯಲು ಯೋಗ್ಯತ್ವವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಸಮಸ್ತ ವೇದ ಇತಿಹಾಸ, ಪುರಾಣ, ಯುಕ್ತಿ ಇವುಗಳಿಂದೆಲ್ಲವುಗಳಿಂದಲೂ ಭಗವಂತನೊಬ್ಬನೇ ಸರ್ವಶಾಖೆಗಳಲ್ಲಿ ಹೇಳಿದ ಪ್ರಕಾರ ತಿಳಿಯಲರ್ಹನು, ಎಂಬ ಶ್ರುತಿಯಿಂದ ಶ್ರೀವಿಷ್ಣುವು ನಾನಾ ಶಾಖೆಗಳಲ್ಲಿ ಹೇಳಿದ ವಿಚಿತ್ರ ಮಹಿಮೆಗಳುಳ್ಳವನೆಂದು ಮೋಕ್ಷಸಾಧನ ಮಹಾಪ್ರಸಾದ ಸಿದ್ಧಿಗಾಗಿ ಸರ್ವಶಾಖೋಕ್ತ ಪ್ರಕಾರ ಚೆನ್ನಾಗಿ ತಿಳಿಯಬೇಕು) (ಯದ್ಯಪಿ ಮನುಷ್ಯರಿಗೆ ನಾಲ್ಕು ಗುಣಗಳನ್ನು ಪಾಸನ ಮಾಡುವುದರಲ್ಲಿಯೇ ಅಧಿಕಾರವು. ಆದರೂ ಅದು ಸ್ಥಿರವಾಗಲಿಕ್ಕೆ ಯಥಾಶಕ್ತಿ ಸರ್ವಶಾಖೆಗಳಲ್ಲಿ ಹೇಳಿದ ಪ್ರಮೇಯವನ್ನು ತಿಳಿಯಬೇಕು ) ಹೀಗೆ ಶ್ರೀವಿಷ್ಣುವು ಸಮಸ್ತ ವೇದಗಳಲ್ಲಿ ಹೇಳಲ್ಪಟ್ಟವನೆಂದು ಚೆನ್ನಾಗಿ ತಿಳಿಯಲರ್ಹನಾದುದರಿಂದ ಶ್ರೀವಿಷ್ಣುವೂ ಶಾಸ್ತ್ರವೂ ಸರ್ವೋಪಾದೇಯವು.) ॥ ೧ ॥

೨ನೇ ಉಪಸಂಹಾರಾಧಿಕರಣದಲ್ಲಿ ಧ್ಯಾನವಿಧಿಯು ಎರಡು ರೀತಿಯಾಗಿ ಕೂಡುವುದರಿಂದ ಶ್ರೀಹರಿಯನ್ನು ಸಮಸ್ತ ವೇದಗಳಲ್ಲಿ ಹೇಳಿದ ಗುಣಗಳನ್ನೇಕೀಕರಿಸಿ ಧ್ಯಾನಿಸಬೇಕೋ, ಬೇರೆ ಪ್ರಕಾರ ಧ್ಯಾನಿಸಬೇಕೋ, ಎಂದು ಸಂದೇಹವು ಬಂದರೆ—ಬೇರೆ ಪ್ರಕಾರವೇ ಧ್ಯಾನಿಸಬೇಕೆಂದು ಪೂರ್ವಪಕ್ಷವು. ಸರ್ವವೇದಗಳಲ್ಲಿ ಹೇಳಿದ ಗುಣಗಳನ್ನೇಕೀಕರಿಸಿ ಧ್ಯಾನಿಸಬೇಕು, ಎಂದು ಸಿದ್ಧಾಂತವು. ಆದರಲ್ಲಿ **ಅಶಕ್ಯತ್ವಂ** ಚತುರ್ಮುಖನಿಗೂ ಸಮಸ್ತ ವೇದಗಳಲ್ಲಿ ಹೇಳಿದ ಪ್ರಕಾರ ಧ್ಯಾನಿಸಲಿಕ್ಕೆ ಶಕ್ಯವಾಗದಿರುವಿಕೆ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚಾಶಕ್ಯತಯಾ ಕಸ್ಯಾಪಿ ಸರ್ವಗುಣೋಪಸಂಹಾರೋ ನಾಸ್ತಿ॥ (೨) ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಸ್ತೇನೈವ ವಿದ್ವಾನ್ ವಿಧಿಕೃನ್ನಾನ್ಯಥಾ ಸ್ಯಾದಿತಿಶ್ರುತೇಃ. ವಿಹಿತಕ್ರಿಯಾಲೋಪಪ್ರಸಂಗಾತ್ ॥ ॥ ೨ ॥**

ಅ ॥ (೧) ಬಹುಪ್ರಯಾಸ ಸಾಧ್ಯವಾಗಿರುವಕಾರಣ ಅಶಕ್ಯವಾಗಿರುವುದರಿಂದ ತೈಲಧಾರೆಯಂತೆ ಅವಿಚ್ಛಿನ್ನವಾದ ಸ್ವಯೋಗ್ಯಗಳಾದ ಸಕಲಗುಣಗಳ ಉಪಸಂಹಾರವು ಯಾರಿಗೂ (ಚತುರ್ಮುಖನಿಗೂ ಕೂಡ) ಇಲ್ಲ. (ಆದಕಾರಣ ಸಮಸ್ತ ವೇದಗಳಲ್ಲಿ ಹೇಳಿದ ಪ್ರಕಾರ ಧ್ಯಾನಿಸಕೂಡದು.) ಅಂತೂ ಸರ್ವಗುಣಗಳನ್ನುಪಸಂಹಾರ ಮಾಡಿ ಧ್ಯಾನಿಸಲಿಕ್ಕೆ ಸಾಧ್ಯವಾಗದಿರುವುದರಿಂದ ಅದಕ್ಕಾಗಿ ಸರ್ವಶಾಖೆಗಳ ಪರಿಜ್ಞಾನವು ವ್ಯರ್ಥವು-ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ವಿಧಿಕ್ರಿಯಾ=(ಉಪಾಸನಾ ಕ್ರಿಯೆಯು ವಿಹಿತವಾದುದು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಸಮಸ್ತಗುಣಗಳೂ ಸರ್ವದಾ ಉಪಾಸನಾ ಮಾಡಲರ್ಹಗಳೇ. ಸರ್ವಗುಣಗಳ ಉಪಾಸನಾದಿಂದಲೇ ಜ್ಞಾನಿಯು ವಿಧ್ಯುಕ್ತವಾದುದನ್ನು ಮಾಡಿದವನಾಗುತ್ತಾನೆ, ಎಂಬ ಶ್ರುತಿಯಿಂದ ಸಮಸ್ತಗುಣಗಳನ್ನುಪಸಂಹಾರಮಾಡದಿದ್ದರೆ ವಿಹಿತಗಳಾದ ಕ್ರಿಯೆಗಳಿಗೆ ಲೋಪವು ಬರಬೇಕಾಗಿರುವುದರಿಂದ (ಅನರ್ಥವು ಪ್ರಾಪ್ತವಾಗುವುದು.) ಆದಕಾರಣ ಸರ್ವಜ್ಞಗುರುಗಳ ಪ್ರಸಾದದಿಂದ ಅಶಕ್ಯವಾದುದೂ ಸಾಧ್ಯವೇ ಆಗುವುದು.) (ಇದರಿಂದ 'ಸರ್ವಗುಣೋಪಸಂಸಾರಃ ಕರ್ತವ್ಯಃ ವಿಹಿತಕ್ರಿಯಾತ್ವಾತ್ ಜ್ಯೋತಿಷ್ಟೋಮಾದಿವತ್ ಎಂಬ ಅನುಮಾನವು ಉಕ್ತವಾಯ್ತು. ಏವಂಚ ಸರ್ವಗುಣಗಳನ್ನೂ ಏಕೀಕರಿಸಿಕೊಂಡು ಉಪಾಸನಾ ಮಾಡಬೇಕೆಂದು ವಿಹಿತವಾದ ಕಾರಣ ಸರ್ವಶಾಖೋಕ್ತಪ್ರಕಾರ ಪರಿಜ್ಞಾನವು ಸಾರ್ಥಕವೇ. ॥ ೨ ॥

೩ನೇ ಪ್ರಾಪ್ತ್ಯಧಿಕರಣದಲ್ಲಿ ಕರ್ತವ್ಯವೆಂದು ಹೇಳಲ್ಪಟ್ಟ, ವಿರೋಧ, ಇವುಗಳಿಂದ ಗುಣೋಪಸಂಹಾರ ಅನುಪಸಂಹಾರಗಳು ಕೂಡುತ್ತವೋ, ಇಲ್ಲವೋ, ಎಂದು ಸಂದೇಹವು ಬಂದರೆ ಕೂಡುವುದಿಲ್ಲ ಎಂದು ಪೂರ್ವಪಕ್ಷವು. ಕೂಡುತ್ತವೆ ಎಂದು ಸಿದ್ಧಾಂತವು. ಅದರಲ್ಲಿ ಅನಿರ್ಣೀತಿಃ=(ಅಧಿಕಾರಿಯ ನಿರ್ಣಯವಾಗದಿರುವಿಕೆ) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ಕೇಷಾಂಚಿತ್ಸರ್ವಗುಣೋಪಸಂಹಾರಸ್ಯ ಕರ್ತವ್ಯತ್ವೇ ಸರ್ವೇಷಾಮಪಿ ತಥಾ ಸ್ಯಾತ್ ಅನೇನೋಪಸಂಹರ್ತವ್ಯಾಃ ಅನೇನ ನೋಪಸಂಸರ್ತವ್ಯಾಃ ಇತ್ಯಾದ್ಯ ನಿರ್ಣೀತೇರಿತಿ ನ ಮಂತವ್ಯಂ ॥ (೨) ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ । ಯುಗಪತ್ಸ್ವಪ್ರಭುಜೌ ಯದ್ವದ್ಧ್ಯಾಯೇತ್ತಾವತ ಏವ ಸಃ । ಯುಗಪದ್ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾ ಹರೇಃ। ತದನ್ಯೇಷಾಂ ಯಥಾಯೋಗ್ಯಂ ಸ್ವಮಾಹಾತ್ಮ್ಯಾನುಸಾರತಃ ॥ ಇತಿ ಶ್ರುತೇರ್ಯುಗಪದ್ಗುಣ ಪ್ರತೀತ್ಯಾದಿಮಾಹಾತ್ಮ್ಯನಿರ್ಣಯೋಪಪತ್ತೇಃ ॥ ೩ ॥

ಅ ॥ (೧) ಕೆಲವರು (ಋಜುಗಳು) ಸರ್ವಗುಣಗಳನ್ನು ಉಪಸಂಹಾರ ಮಾಡಿ ಧ್ಯಾನವನ್ನು ಮಾಡಬೇಕೆಂದಾದರೆ—ಸರ್ವರಿಗೂ (ಋಜುವ್ಯತಿರಿಕ್ತರಿಗೂ) ಹಾಗೆಯೆ ಆಗಬೇಕಾಗುವುದು. (ಏಕೆಂದರೆ—ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ಎಂದು ಉಪಾಸನಾವಿಧಾಯಕ ವಾಕ್ಯವು ಸರ್ವಸಾಧಾರಣವಾಗಿದೆ.) ಇವನು ಉಪಸಂಹಾರಮಾಡಬೇಕು, ಇವನು ಉಪಸಂಹಾರ ಮಾಡಬಾರದು ಇತ್ಯಾದಿಗಳು ನಿರ್ಣಯವಾಗುವುದಿಲ್ಲ. (ಏವಂಚ ಅಧಿಕಾರಿ ನಿರ್ಣಯವಾಗದಿರುವುದರಿಂದ ಉಪಸಂಹಾರ ಅನುಪಸಂಹಾರಗಳು ಅನುಪಪನ್ನಗಳಾಗಿರುವುದರಿಂದ ಅದಕ್ಕಾಗಿ ಸರ್ವಪರಿಜ್ಞಾನವು ಆವಶ್ಯಕವಲ್ಲ, ಎಂದರೆ ಹಾಗೆ ತಿಳಿಯಕೂಡದು. (೨) (ಏಕೆಂದರೆ—**ಮಾಹಾತ್ಮ್ಯಂ**=(ಯೋಗ್ಯತಾರೂಪಮಹಿಮೆಯು) ಎಂಬಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಯಾರಿಗೆ ಉಪಾಸನಾ ಮಾಡುವಾಗ ಎಷ್ಟು ಗುಣಗಳು ಸ್ಪಷ್ಟವಾಗಿ ತೋರುತ್ತವೋ

ಅಷ್ಟು ಗುಣಗಳನ್ನೇ ಆತನು ಏಕಕಾಲದಲ್ಲಿ ತನ್ನ ಭುಜಗಳು ಹೇಗೆ ತೋರುತ್ತವೋ, ಹಾಗೆಯೇ ಧ್ಯಾನಿಸ ಬೇಕು. ಚತುರ್ಮುಖ ಬ್ರಹ್ಮನಿಗೆ ಶ್ರೀಹರಿಯ ಎಲ್ಲಾ ಗುಣಗಳೂ ಏಕಕಾಲದಲ್ಲಿಯೇ ತೋರುತ್ತವೆ. ಚತುರ್ಮುಖನು ಹೊರತು ಇತರರಿಗೆ ತಂತಮ್ಮ ಯೋಗ್ಯತಾನುಸಾರ ಯಥಾ ಯೋಗ್ಯವಾಗಿಯೇ ತೋರು ತ್ತವೆ, ಎಂಬ ಶ್ರುತಿಯ ದೆಸೆಯಿಂದ ಏಕಕಾಲದಲ್ಲಿ ಭಗವದ್ಗುಣ ಪ್ರತೀತಿ, ತಂತಮಗೆ ಯೋಗ್ಯಗಳಾದ ಗುಣಗಳನ್ನುಪದೇಶಿಸುವ ಸರ್ವಜ್ಞರಾದ ಗುರುಗಳ ವಾಕ್ಯ ಇತ್ಯಾದಿ ರೂಪವಾದ ಯೋಗ್ಯತಾರೂಪವಾದ ಮಾಹಾತ್ಮ್ಯಯಿಂದ ನಿರ್ಣಯವು ಆಗುತ್ತದೆ. (ಏವಂಚ ಬ್ರಹ್ಮಾದ್ಯಧಿಕಾರಿಗಳಿಗೆ ಯೋಗ್ಯತಾರೂಪವಾದ ಮಾಹಾತ್ಮ್ಯಯಿಂದ ಉಪಸಂಹಾರ ಅನುಪಸಂಹಾರಗಳು ಯುಕ್ತಗಳಾಗಿರುವ ಪ್ರಯುಕ್ತ ಸರ್ವಪರಿಜ್ಞಾನವು ಯುಕ್ತವು ॥ ೩ ॥

೪ನೇ ಸರ್ವಾಭೇದಾಧಿಕರಣದಲ್ಲಿ ಕರ್ತವ್ಯ ಅಕರ್ತವ್ಯ ಕರ್ಮಗಳು ಕಂಡದರಿಂದ ಬಹುಗುಣೋಪ ಸಂಹಾರವನ್ನು ಮಾಡಬೇಕೋ ಬೇಡವೊ ಎಂದು ಸಂದೇಹವು ಬಂದರೆ-ಮಾಡಬಾರದೆಂದು ಪೂರ್ವಪಕ್ಷವು. ಮಾಡಲೇ ಬೇಕೆಂದು ಸಿದ್ಧಾಂತವು. ಅದರಲ್ಲಿ ಅನಿರ್ಣೀತಿಃ=(ಅತಿಶಯ ಫಲದ ನಿರ್ಣಯವಿಲ್ಲದಿರುವಿಕೆ) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಫಲಾನಿರ್ಣೀತಿಃ ॥ (೨) ಮಾಹಾತ್ಮ್ಯೇನೈವಾನ್ಯತ್ಫಲಂ ಮಹತಾಮಿತಿ ನಿರ್ಣಯೋಪಪತ್ತೇಃ ॥ ೪ ॥

ಅ॥(೧)(ದೃಷ್ಟ್ವೈವತಂಮುಚ್ಯತೇಎಂಬಶ್ರುತಿಯಲ್ಲಿಸಾಮಾನ್ಯವಾಗಿಹೇಳಿದುದರಿಂದಸರ್ವಗುಣೋ ಪಾಸಕನಿಗೆ ಸರ್ವಗುಣೋಪಸಂಹಾರದಲ್ಲಿ ಅಲ್ಪ ಗುಣಗಳನ್ನುಪಾಸನಾ ಮಾಡುವವನ ಫಲಕ್ಕಿಂತ) ಫಲ ವಿಶೇಷವು ನಿರ್ಣೀತವಾಗದಿರುವುದರಿಂದ (ಬ್ರಹ್ಮನೂ ಸರ್ವಗುಣೋಪಸಂಹಾರವನ್ನು ಮಾಡಬಾರದು, ಫಲಾತಿಶಯ ನಿರ್ಣಯವಿಲ್ಲದಿದ್ದರೂ ಸರ್ವಗುಣೋಪಸಂಹಾರ ಮಾಡಿದರೆ ಅಂತಹವರು ಪ್ರೇಕ್ಷಾವಂತರೇ ಆಗಲಾರರು) (ಏವಂಚ ಫಲಾತಿಶಯ ನಿರ್ಣಯವಾಗದಿರುವುದರಿಂದ ಉಪಸಂಹಾರವು ಕರ್ತವ್ಯವಾಗ ದಿರುವ ಪ್ರಯುಕ್ತ ಸರ್ವಪರಿಜ್ಞಾನವು ಯುಕ್ತವಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಮಾಹಾತ್ಮ್ಯಂ=(ಬಹು ಗುಣೋಪಸಂಹಾರರೂಪವಾದ ಮಹಿಮೆಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಬಹುಗುಣೋಪಸಂಹಾರರೂಪವಾದ ಮಹಿಮೆಯಿಂದಲೇ ಉಪಸಂಹಾರ ಮಾಡದಿದ್ದವನ ಫಲಕ್ಕಿಂತ ಅತಿಶಯಿತ ಫಲವು ಅಂತಹ ಗುಣೋಪಸಂಹಾರದಲ್ಲಿ ಯೋಗ್ಯತಾ ರೂಪವಾದಮಾಹಾತ್ಮ್ಯವುಳ್ಳ ವರಿಗೆ ಕಂಡದೆ, ಹೀಗೆ ನಿರ್ಣಯವು ಉಪಪನ್ನವಾಗುತ್ತದೆ. (ಇಲ್ಲವಾದರೆ ಅಧಿಕೋಪಾಸನೆಯನ್ನು ಮಾಡ ಬೇಕೆಂದು ವಿಧಿಸುವ ಶ್ರುತಿಯು ವ್ಯರ್ಥವಾಗುವುದರಿಂದ ಅಪ್ರಮಾಣವಾಗಬೇಕಾಗುವುದು.) ಏವಂಚ ಉಪ ಸಂಹಾರ ಮಾಡುವವರಿಗೆ ವಿಲಕ್ಷಣ ಫಲವಿದೆ ಎಂಬ ನಿರ್ಣಯವಿದ್ದುದರಿಂದ ಉಪಸಂಹಾರವು ಯುಕ್ತವು.) ॥ ೪ ॥

೫ನೇ ಆನಂದಾಧಿಕರಣದಲ್ಲಿ ವಿಶೇಷೋಕ್ತಿಯಿಲ್ಲದೆ ಉಪಾಸ್ಯಗಳೆಂದು ಹೇಳಿದ ಭಗವದ್ಗುಣಗಳು ಎಲ್ಲಾ ಮುಮುಕ್ಷುಗಳಿಂದಲೂ ಉಪಾಸ್ಯಗಳಾದುವುಗಳು ಸಂಖ್ಯಾ ನಿರ್ದೇಶಗಳಿಂದ ಪ್ರತ್ಯೇಕ ಕ್ಲೃಪ್ತಗಳಾಗಿ ಇವೆಯೋ, ಇಲ್ಲವೋ, ಎಂದು ಸಂದೇಹವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಇವೆಎಂದು ಸಿದ್ಧಾಂತವು. ಆದರಲ್ಲಿ ಸಮುಚ್ಚಯಃ (ಸಮಸ್ತಗುಣಗಳ ಸಮುಚ್ಚಯವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿ ಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ಆನಂದಾದೀನಾಂ ಕೇಷಾಂಚಿತ್ಸಮುಚ್ಚಯೇ ಪ್ರಾಪ್ತೇ ಸರ್ವೇಷಾಂ ಸರ್ವಗುಣಸಮುಚ್ಚಯಃ ಸ್ಯಾದಿತಿ ನ ಮಂತವ್ಯಂ ॥ (೨) ಅಲ್ಪಶಕ್ತಿತ್ವಾತೇಷಾಂ ಪುಂಸಾಂ ॥ ೫ ॥

ಅ ॥ (೧) (ಎಲ್ಲಾ ಮುಮುಕ್ಷುಗಳಿಂದಲೂ ಉಪಾಸ್ಯಗಳಾದ ಗುಣಗಳು ಸಂಖ್ಯಾ ನಿರ್ದೇಶಗಳಿಂದ ಕ್ಲೃಪ್ತಗಳಾಗಿಲ್ಲ. ಇದ್ದರೆ ಯಾವ ಗುಣಗಳಿಗೆ ಎಷ್ಟಕ್ಕೆ ಸಮುಚ್ಚಯವು ಎಂದರೆ) ಆನಂದ ಮೊದಲಾದ ಕೆಲವು ೫, ೬. ಗುಣಗಳಿಗೆ ಸಮುಚ್ಚಯವು ಎಂದು ಪ್ರಾಪ್ತವಾದರೆ ಎಲ್ಲಾ ಮುಮುಕ್ಷುಗಳಿಗೂ ಎಲ್ಲಾ ಗುಣಗಳ ಸಮುಚ್ಚಯವೂ ಆಗಬೇಕಾಗುವುದು. (೪, ೫, ೬, ಗುಣಗಳೇ ಉಪಾಸ್ಯಗಳು ಎಂದು ಸಂಖ್ಯಾ ನಿಯಮವಿಲ್ಲದೆ ಹೋಗುವುದು) ಅಂದರೆ–ಈ ಮುಮುಕ್ಷುವಿಗೆ ಇಷ್ಟು ಗುಣಗಳು. ಅವು ಇವುಗಳೇ, ಇತರಗಳಲ್ಲ, ಎಂದು ನಿರ್ಣಾಯಕವಿಲ್ಲದಿರುವುದರಿಂದ ಕೇವಲ ತನ್ನ ಇಚ್ಛೆಯಿಂದಲೇ ಗುಣಗಳನ್ನು ಒಟ್ಟು ಕೂಡಿಸಿದರೆ ತಮಗೆ ಅಯೋಗ್ಯಗಳಾದ ಗುಣಗಳಿಗೂ ಸಮುಚ್ಚಯವು ಬರಬೇಕಾಗುವುದು. ನಾನಾರತ್ನಗಳ ಸಮುದಾಯವನ್ನು ಪುಂಜೀಕರಿಸಿಟ್ಟರೆ ಅದರಿಂದ ತನ್ನ ಇಚ್ಛೆಯಿಂದ ರತ್ನಗಳನ್ನು ತರುವವನಿಗೆ ವೈಡೂರ್ಯ ಮೊದಲಾದ ವಿಜಾತೀಯಮಣಿ ಮೊದಲಾದವುಗಳ ಆನಯನವೂ ಸ್ವೇಚ್ಛಾನುಸಾರ ಕಂಡದೆ) (ಏವಂಚ ಮುಮುಕ್ಷುಗಳಿಂದ ನಿಯಮದಿಂದ ಉಪಾಸ್ಯಗಳಾದ ಗುಣಗಳ ನಿರ್ಣಯವು ಇಲ್ಲದಿರುವುದರಿಂದ ಯಾರಿಗೂ ಉಪಾಸನೆಯು ಕೂಡದೆ ಹೋಗುವುದು ಎಂದರೆ)ಹಾಗೆ ತಿಳಿಯಕೂಡದು.(೨) (ಏಕೆಂದರೆ–ಅಲ್ಪಶಕ್ತಿತ್ವಂ= (ಎಲ್ಲಾ ಮುಮುಕ್ಷುಗಳಿಗೂ ಅಲ್ಪವಾದ ಶಕ್ತಿಯಿರುವುದು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಹಿಂದೆ ಹೇಳದ ಎಲ್ಲಾ ಮುಮುಕ್ಷುಗಳಿಗೆ ಅಲ್ಪಶಕ್ತಿಯಿರುವುದು. (ಸಂಖ್ಯಾ ನಿರ್ದೇಶಗಳಿಂದ ಕ್ಲೃಪ್ತಗಳಾದವುಗಳು ಮಾನುಷಾದಿ ಮುಮುಕ್ಷುಗಳಿಗೆ ನಾಲ್ಕೇ ಗುಣಗಳು ಉಪಾಸ್ಯಗಳು. ಅವು ಆನಂದ, ಜ್ಞಾನ, ಸತ್, ಆತ್ಮಾ ಎಂದು ನಾಲ್ಕೇ ಗುಣಗಳು. ಹೆಚ್ಚು ಇಲ್ಲ. ತಂ ಯಥಾ ಯಥೋಪಾಸತೇ ಎಂಬ ಶ್ರುತಿಯಿಂದ ಮುಕ್ತಿಯಲ್ಲಿಯೂ ಆನಂದವೂ ಸ್ವಯೋಗ್ಯಜ್ಞಾನವೂ, ಜನನಾದಿ ದೋಷರಾಹಿತ್ಯವೂ, ಸ್ವಾವರ ಸರ್ವಸ್ವಾಮಿತ್ವವೂ ಇವು ಸರ್ವರಿಗೂ ಅಪೇಕ್ಷಿತವಾದ ಪ್ರಯುಕ್ತ ಅಂತಹ ಗುಣಗಳುಳ್ಳವನೆಂದೇ ಶ್ರೀ ಭಗವಂತನನ್ನುಪಾಸನಾ ಮಾಡಬೇಕು. ಕೆಲವು ಗುಣಗಳಿಗೆ ಸಮುಚ್ಚಯವಿದ್ದರೆ ಸರ್ವಗುಣಗಳಿಗೂ ಸಮುಚ್ಚಯವು ಬರಬೇಕಾಗುವುದು, ಎಂದು ಇಲ್ಲ. ಬ್ರಹ್ಮಾದಿ ಕೆಲವು ದೇವತೆಗಳಿಗೆ ಅಧಿಕ ಗುಣಗಳನ್ನುಪಾಸನಾ ಮಾಡಲಿಕ್ಕೆ ಸಾಮರ್ಥ್ಯವಿದ್ದರೂ ಬೇರೆ ಮಾನುಷಾದಿ ಮುಮುಕ್ಷುಗಳಿಗೆ ಅಲ್ಪ ಶಕ್ತಿಯಿರುವುದರಿಂದ ನಾಲ್ಕರಕ್ಕಿಂತ ಅಧಿಕ ಗುಣಗಳನ್ನುಪಾಸನ ಮಾಡಲಿಕ್ಕೆ ಸಾಮರ್ಥ್ಯವಿಲ್ಲ.) (ಈ ರತ್ನಗಳನ್ನು ಇಷ್ಟೇ ತರಬೇಕು, ಎಂದು ನಿಯಮ ಮಾಡಿದರೆ ವಿಜಾತೀಯಗಳಾದ ರತ್ನಾಂತರಗಳಿಗೆ ಅಪ್ರಾಪ್ತಿಯು ಕಂಡುದರಿಂದ ದೃಷ್ಟಾಂತವೂ ನಮಗೆ ಅನುಗುಣವೇ ಆಗಿದೆ.) (ಏವಂಚ ಸರ್ವೋಪಾಸ್ಯ ಗುಣಗಳು ನಿರ್ಣೀತಗಳಾಗಿರುವುದರಿಂದ ಉಪಾಸನೆಯು ಯುಕ್ತವು.) ॥ ೫ ॥

೬ನೇ ಪ್ರಿಯಶಿರಸ್ತ್ವಾದ್ಯಧಿಕರಣದಲ್ಲಿ ಎಲ್ಲಾ ಮುಮುಕ್ಷುಗಳಿಂದ ಉಪಾಸ್ಯಗಳೂ ಅನುಪಾಸ್ಯಗಳೂ ಆದ ಗುಣಗಳು ತೋರಿರುವುದರಿಂದ ತಸ್ಯ ಪ್ರಿಯಮೇವ ಶಿರಃ ಇತ್ಯಾದಿಗಳಲ್ಲಿ ಶ್ರುತಗಳಾದ ಪ್ರಿಯಶಿರಸ್ತ್ವಾದಿ ಗುಣಗಳು ಎಲ್ಲಾ ಮೋಕ್ಷೇಚ್ಛುಗಳಿಂದ ಉಪಾಸ್ಯಗಳೋ, ಅಲ್ಲವೋ ಎಂದು ಸಂಶಯವು ಬಂದರೆ ಸರ್ವೋಪಾಸ್ಯಗಳೆಂದು ಪೂರ್ವಪಕ್ಷವು. ಸರ್ವೋಪಾಸ್ಯಗಳಲ್ಲವೆಂದು ಸಿದ್ಧಾಂತವು. ಅದರಲ್ಲಿ ವಿಶೇಷದರ್ಶನಂ (ಪ್ರಿಯ ಶಿರಸ್ತ್ವಾದಿ ಗುಣಗಳು ಆನಂದದ ವಿಶೇಷ (ಪ್ರಭೇದ)ವೆಂದು ಕಂಡದೆ,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ಪ್ರಿಯಶಿರಸ್ತ್ವಾದೀನಾಮಾನಂದಾದಿವಿಶೇಷತ್ವೇನೈವ ದರ್ಶನಾತ್ತೇಷಾಮಪಿ ಸರ್ವೋಪಸಂಹಾರ್ಯತ್ವಮಿತಿ ನ ಮಂತವ್ಯಂ || (೨) ಯಥಾಯೋಗಾನ್ ಗುಣ ಪೂಗಾನುಪಾಸ್ಯ ಫಲಂ ಭವೇನ್ಮುಕ್ತಿಗಂ। ನಾನ್ಯಥಾ ಸ್ಯಾತ್। ನಿತ್ಯೈಕಾಗ್ರ್ಯವ್ಯಗ್ರತಾ ಹೇತುತಶ್ಚ ಸಾಕ್ಷಾದ್ದೃಶಿರ್ನೋ ತದ್ವಿಶೇಷೈಃ ಸ್ಮೃತೈಶ್ಚ (ತ ತತ್ತದ್ವಿಶೇಷೈಃ।) ಇತಿ ಶ್ರುತೇಃ ಸ್ವಯೋಗ್ಯಗುಣೈರೇವ ಫಲಭಾವಾತ್ || ೬ ||

ಅ || (೧) ಪ್ರಿಯಶಿರಸ್ತ್ವ ಸಾರ್ವಜ್ಞ್ಯ ಮೊದಲಾದ ಗುಣಗಳು ಆನಂದ ಜ್ಞಾನ ಮೊದಲಾದವುಗಳ ವಿಶೇಷವೆಂದೇ ತಸ್ಯಪ್ರಿಯಮೇವಶಿರಃ ಇತ್ಯಾದಿಗಳಲ್ಲಿ ಕಂಡುದರಿಂದ ಪ್ರಿಯಶಿರಸ್ತ್ವಾದಿಗಳನ್ನು ಸರ್ವರೂ ಉಪಸಂಹಾರ ಮಾಡಬೇಕು. (ಇಲ್ಲವಾದರೆ ಆನಂದಾದಿಗಳನ್ನು ಚೆನ್ನಾಗಿ ಉಪಾಸನೆ ಮಾಡದಿರುವುದರಿಂದ ಮೋಕ್ಷವೇ ಇಲ್ಲವೆಂದಾಗಬೇಕಾಗುವುದು.) (ಏವಂಚ ಪ್ರಿಯಶಿರಸ್ತ್ವಾದಿಗಳು ಆನಂದಾದಿಗಳ ವಿಶೇಷ ವೆಂದು ಸರ್ವರೂ ಉಪಾಸನಾ ಮಾಡಬೇಕು. ಎಂದರೆ ಹೀಗೆ ತಿಳಿಯಕೂಡದು, (೨) ಏಕೆಂದರೆ— ಯಥಾಯೋಗ್ಯಫಲಂ (ಯಥಾಯೋಗ್ಯವಾಗಿ ನಾಲ್ಕು ಗುಣಗಳನ್ನುಪಾಸನಾ ಮಾಡಿರುವುದರಿಂದಲೇ ಫಲವು)ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)(ಎಲ್ಲಾ ಮುಮುಕ್ಷುಗಳಿಗೆ ಪ್ರಿಯಶಿರಸ್ತ್ವಾದಿಗಳನ್ನು ಪಾಸನೆ ಮಾಡಲಿಕ್ಕೆ ಯೋಗ್ಯತೆಯಿಲ್ಲದಿರುವುದರಿಂದ ಯೋಗ್ಯ ಗುಣಗಳ ಉಪಾಸನದಿಂದಲೇ ಅಪರೋಕ್ಷ ಜ್ಞಾನದ್ವಾರಾ ಮುಕ್ತಿರೂಪವಾದ ಫಲವು. ಇಲ್ಲವಾದರೆ ಅನರ್ಥವು ಪ್ರಾಪ್ತವಾಗುವುದು, ಆದಕಾರಣ ಪ್ರಿಯ ಶಿರಸ್ತ್ವಾದಿಗಳು ಸರ್ವೋಪಾಸ್ಯಗಳಲ್ಲ, ಎಂಬ ಅಭಿಪ್ರಾಯದಿಂದ ಪ್ರಮಾಣವನ್ನುದಾಹರಿಸುತ್ತಾರೆ.) ತನಗೆ ಧ್ಯಾನಾದಿಗಳನ್ನು ಮಾಡಲಿಕ್ಕೆ ಯೋಗ್ಯತಾ ಇದ್ದಷ್ಟು ಗುಣಗಳ ಸಮುದಾಯವನ್ನುಪಾಸನಾಮಾಡಿದ್ದ ವನಿಗೇನೇ ಅಪರೋಕ್ಷ ಜ್ಞಾನದ್ವಾರಾ ಮೋಕ್ಷವಲ್ಲಿ ಫಲವು ಲಭಿಸುವುದು. ಇಲ್ಲದಿದ್ದರೆ ಲಭಿಸಲಾರದು. ಏಕೆಂದರೆ ಆನಂದಾದಿ ಗುಣಗಳನ್ನು ನಿಯಮೇನ ಧ್ಯಾನಿಸುವಾಗ ಏಕಕಾಲದಲ್ಲಿ ಏಕಾಗ್ರ್ಯಕ್ಕೆ (ನಿಯತಧ್ಯಾನಕ್ಕೆ) ವ್ಯಗ್ರ್ಯತ್ವವ (ಹಾನಿಯು) ಬರುವಕಾರಣ ಆನಂದಾದಿಗುಣ ವಿಶಿಷ್ಟನಾದ ಶ್ರೀ ಪರಮಾತ್ಮನ ಅಪ ರೋಕ್ಷಜ್ಞಾನವು ಆಗಲಾರದು. ಆದಕ್ಕಾಗಿ ಪ್ರಿಯಶಿರಸ್ತ್ವಾದಿ ವಿಶೇಷ ಗುಣಗಳು ಸ್ಮೃತಗಳಾದರೂ ಅವು ಗಳನ್ನುಪಾಸನಾ ಮಾಡಕೂಡದು. ಎಂಬ ಶ್ರುತಿಯಿಂದ ತಂತಮಗೆ ಯೋಗ್ಯಗಳಾದ ಗುಣಗಳಿಂದಲೇ ಫಲವು ಸಿಗುವುದು. ನಿಯಮೇನ ಧ್ಯಾನಿಸುವಾಗ ಏಕಕಾಲದಲ್ಲಿ ಯಾವುದು ಅಭಿವ್ಯಂಗ್ಯವಾಗುತ್ತದೋ ಅದರಿಂದ ಯೋಗ್ಯತೆಯು ನಿರ್ಣಯಿಸಲಿಕ್ಕೆ ಶಕ್ಯವಾಗುವುದು.) (ಏವಂಚ ಯಥಾ ಯೋಗ್ಯಗಳಾದ ನಾಲ್ಕು ಗುಣ ಗಳನ್ನು ಉಪಾಸನಾ ಮಾಡಿದುದರಿಂದಲೇ ಫಲವು ಸಿಗುವ ಪ್ರಯುಕ್ತ ಪ್ರಿಯಶಿರಸ್ತ್ವಾದಿಗಳು ಸರ್ವೋ ಪಾಸ್ಯಗಳಲ್ಲ. || ೬ ||

೭ನೇ ಇತರಾಧಿಕರಣದಲ್ಲಿ ದೇವಾದಿಗಳು ನಾಲ್ಕು ಗುಣಗಳಿಂದ ಅತಿರಿಕ್ತಗಳಾದ ಭಗವದ್ಗುಣಗಳನ್ನು ಪಾಸನಾ ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ ಬ್ರಹ್ಮನು ಹೊರತು ಬೇರೆ ದೇವಾಡಿಗಳು ನಾಲ್ಕೇ ಗುಣಗಳನ್ನುಪಾಸನಾ ಮಾಡಬೇಕು. ಹೆಚ್ಚು ಗುಣಗಳನ್ನುಪಾಸನಾ ಮಾಡಬಾರದು, ಎಂದು ಪೂರ್ವಪಕ್ಷವು. ನಾಲ್ಕು ಗುಣಗಳಿಂದ ಬೇರೆಯಾದ ಮಧ್ಯಮ ಗುಣಗಳನ್ನು ದೇವಾದಿಗಳು ಉಪಾಸನಾ ಮಾಡಬೇಕು, ಎಂದು ಸಿದ್ಧಾಂತವು. ಅದರಲ್ಲಿ ಕಾರ್ಯಲೋಪಃ ಎಂಬ ನ್ಯಾಯವನ್ನು ವಿವರಿಸಿ ಕೊಂಡು ನಿರಾಕರಿಸುತ್ತಾರೆ.

ಮೂ || (೧) ತರ್ಹಿ ಬ್ರಹ್ಮಣೋನ್ಯೇಷಾಂ ದೇವಾದೀನಾಮಪಿ ಬಹುಗುಣೋಪಾಸನಾಯಾಃ ಕಾರ್ಯಂ ನಾಸ್ತಿ। ಮಧ್ಯೇ ನಿಯಮಾಸಿದ್ಧೇರಿತಿ ನ ಮಂತವ್ಯಂ(೨)ತೇಷಾಂ ಭೂಮ್ನ್ಯ

ತ್ಕರ್ಷಂ ಜ್ಞಾತ್ವಾ ತದಭಿಜ್ಞಸ್ಯ ಬ್ರಹ್ಮಣ ಏವ ಗುಣನಿಯಮೋಪದೇಶೋಪಪತ್ತೇಃ॥ (೩) ಯೋ ಯೋ ಭಾವೋ ದೇವತಾನಾಂ ವಿಮುಕ್ತೌ ತತ್ತತ್ಪ್ರಾಪ್ತೌ ಸುಗುಣಾನೀಶ ತುಷ್ಟ್ಯೈ । ಬ್ರಹ್ಮಾ ದಿಶತ್ಯಥ ತಾಂಸ್ತೇ ವಿಚಿಂತ್ಯ ತತ್ತದ್ಭಾವಂ ಪ್ರಾಪ್ನುವಂತ್ಯಾತ್ಮ ಶಕ್ತ್ಯಾ ॥ ಇತಿ ಶ್ರುತೇಃ ॥ ೭ ॥

ಅ ॥ (೧) ಸ್ವಯೋಗ್ಯ ಗುಣಗಳಿಂದಲೇ ಅಭೀಷ್ಟ ಸಿದ್ಧಿಯೆಂದಂಗೀಕರಿಸಿದರೆ (ಅಂದರೆ ಮಾನುಷ ಮುಕ್ತರಿಗೆ ನಾಲ್ಕು ಗುಣಗಳನ್ನು ಪಾಸನೆ ಮಾಡಿದುದರಿಂದಲೇ ಫಲವು ಸಿದ್ಧಿಸುತ್ತದೆಂದಂಗೀಕರಿಸಿದರೆ) ಚತುರ್ಮುಖನಿಂದ ಇತರರಾದ ದೇವಾದಿಗಳಿಗೂ ಕೂಡ ಬಹು ಗುಣೋಪಾಸನೆಯಿಂದ ಫಲವಿಲ್ಲ. (ಅಂದರೆ ಬಹು ಗುಣೋಪಾಸನೆಯು ಮಾಡದೆ ಹೋಗಬೇಕಾಗುವುದು) (ಬ್ರಹ್ಮನಿಗೆ ಸಮಸ್ತಗುಣಗಳನ್ನು ಪಾಸನಾ ಮಾಡಬೇಕೆಂಬ ನಿಯಮದಲ್ಲಿ ಪ್ರಮಾಣವಿದ್ದಂತೆ, ಮನುಷ್ಯರಿಗೆ ನಾಲ್ಕೇ ಗುಣಗಳನ್ನು ಉಪಾಸನ ಮಾಡ ಬೇಕೆಂಬುವಲ್ಲಿ ಪ್ರಮಾಣವಿದ್ದಂತೆ ಸಮಸ್ತಗುಣ–ಆತ್ಮಾದಿ ನಾಲ್ಕು ಗುಣ ಇವುಗಳಿಗಿಂತ) ಮಧ್ಯಮ ಗುಣ ಗಳಲ್ಲಿ ನಿಯಮವು ಸಿದ್ಧವಾಗಲಿಲ್ಲ. (ಮನುಷ್ಯರಿಗಿಂತ ಹೆಚ್ಚು ಗುಣಗಳ ಉಪಾಸನಾ ರೂಪವಾದ ಕಾರ್ಯಕ್ಕೆ ಲೋಪವೇ ಬರುವುದು) (ಮಧ್ಯಮ ವರ್ಗಗಳಾದ ದೇವಾದಿಗಳಿಗೆ ಯೋಗ್ಯತಾ ನಿರ್ಣಾಯಕ ಪ್ರಮಾಣವಿಲ್ಲದಿರುವುದರಿಂದ ಬಹುಗುಣೋಪಸಂಹಾರವು ಹೇಗೆ ಆಗುವುದು.) (ಏವಂಚ ಯೋಗ್ಯತಾ ನಿರ್ಣಯವಾಗದಿರುವುದರಿಂದ ದೇವಾದಿಗಳಿಗೆ ಬಹು ಗುಣೋಪಾಸನೆಯು ಕೂಡದಿರುವಪ್ರಯುಕ್ತ ಬಹು ಗುಣೋಪಸಂಹಾರವು ಮಾಡಕೂಡದು. ನಾಲ್ಕು ಗುಣಗಳ ಉಪಾಸನೆಯೇ ಕರ್ತವ್ಯವು) ಎಂದರೆ ಹೀಗೆ ತಿಳಿಯಕೂಡದು. (೨) (ಏಕೆಂದರೆ ಭವಃ=(ಯೋಗ್ಯತಾ ನಿರ್ಣಯವನ್ನು ತಿಳಿದಿರುವ ಸರ್ವಜ್ಞರಾದ ಗುರು ಗಳ ಗುಣನಿಯಮೋಪದೇಶವು ಇದೆ,) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಮುಂದಿನ ಉತ್ಕ ರ್ಷಕ್ಕೆ ಸಾಧಕವಾದ ಉಪಾಸನಾ ವಿಷಯ ಗುಣಗಳ ನಿಯಮವನ್ನು ತಿಳಿದಿರುವ ಚತುರ್ಮುಖನು ಅಥವಾ ಶೇಷಾಂ ವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ ಎಂಬ ಪ್ರಮಾಣಾನುಸಾರ ಸರ್ವಜ್ಞ ರಾದ ಗುರುಗಳು ಆ ದೇವಾದಿಗಳ ಮುಂದಿನ ಉತ್ಕರ್ಷವನ್ನು ತಿಳಿದು ಗುಣಗಳ ನಿಯಮವನ್ನುಪದೇಶಿಸು ವರು. (ಏವಂಚ ಅವರವರಿಂದ ಹೊಂದತಕ್ಕ ಫಲವನ್ನಪೇಕ್ಷಿಸಿ ಸರ್ವಜ್ಞರಾದ ಗುರುಗಳ ಉಪದೇಶದಿಂದ ಯೋಗ್ಯತಾ ನಿರ್ಣಯವು ಆಗುವುದು) ಆದಕಾರಣ ಮುಕ್ತಿಯಲ್ಲಿ ಚತುರ್ಮುಖನಿಂದ ಇತರರಾದ ದೇವಾದಿ ಗಳಿಗೂ ಮನುಷ್ಯರಿಗಿಂತ ಉತ್ಕೃಷ್ಟ ಫಲವಿದೆ.) (೩) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ.) ದೇವತೆ ಗಳಿಗೆ ಮುಕ್ತಿಯಲ್ಲಿ ಯಾವ ಯಾವ ಉತ್ಕರ್ಷವು ಆಗುತ್ತದೋ, ಆಯಾವ ಉತ್ಕರ್ಷವನ್ನು ಹೊಂದಲಿಕ್ಕೆ ಸರ್ವೇಶ್ವರನಾದ ಶ್ರೀಹರಿಯ ಪೂರ್ಣತ್ವಕ್ಕೆ ಅವಿರೋಧಿಗಳಾದ ಸುಗುಣಗಳನ್ನು ಚತುರ್ಮುಖ ಬ್ರಹ್ಮನು ಉಪದೇಶಿಸುತ್ತಾನೆ. ಆ ಮೇಲೆ ಆ ದೇವತೆಗಳು ಆ ಗುಣಗಳನ್ನು ತಮ್ಮ ಶಕ್ತ್ಯನುಸಾರ ಧ್ಯಾನಿಸಿ ಆಯಾವ ಉತ್ಕರ್ಷವನ್ನು ಹೊಂದುತ್ತಾರೆ,ಎಂಬ ಶ್ರುತಿಯಲ್ಲಿ (ಚತುರ್ಮುಖ ಬ್ರಹ್ಮನೇ ಅವರವರಿಗೆ ಯೋಗ್ಯಗಳಾದ ಗುಣಗಳನ್ನು ತಿಳಿದು ಉಪದೇಶಿಸುತ್ತಾನೆ, ಎಂದು ಹೇಳಿದುದರಿಂದ ಮಧ್ಯಮದೇವತೆಗಳಿಗೆ ಉಪಾಸ್ಯ ಗುಣನಿಯಮವು ಇರುತ್ತದೆ ) (ಏವಂಚ ಯೋಗ್ಯತಾ ನಿರ್ಣಯಾನುಸಾರ ಮಧ್ಯಮ ಗುಣಗಳನ್ನು ದೇವಾದಿ ಗಳು ಉಪಾಸನಾ ಮಾಡಬೇಕು.) ॥ ೭ ॥

ಆನೇ ಅಧ್ಯಾನಾಧಿಕರಣದಲ್ಲಿ ಕರ್ತವ್ಯ ಅಕರ್ತವ್ಯ ಕ್ರಿಯೆಗಳನ್ನು ಕಂಡದರಿಂದ ಹಿಂದೆ ಹೇಳಿದ ಗುಣೋಪಸಂಹಾರ, ಅನುಪಸಂಹಾರಗಳನ್ನು ಮಾಡಬೇಕೋ, ಬೇಡವೋ ಎಂದು ಸಂದೇಹವು ಬಂದರೆ ಮಾಡಕೂಡದೆಂದು ಪೂರ್ವಪಕ್ಷವು. ಮಾಡಬೇಕೆಂದು ಸಿದ್ಧಾಂತವು. ಆದರಲ್ಲಿ ಸರ್ವಗುಣೋಪಸಂಹಾರ

ವನ್ನು ಮಾಡಕೂಡದೆಂದು ನಾನೋಕ್ತಿಃ=(ನಾನಾ ಸ್ಥಾನಗಳಲ್ಲಿ ಗುಣಗಳಿಗೆ ಉಕ್ತಿಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ನಾನಾಸ್ಥಾನೇಷೂಕ್ತಗುಣಾನಾಮನುಪಾಸನಾರ್ಥತ್ವಂ। (೨) ವಿಪ್ರಕೀರ್ಣಗುಣಾನ್ ಪಿಂಡೀಕೃತ್ಯೋಪಾಸಿತುಸ್ತಾದೃಶಫಲಪ್ರಾಪ್ತೇಸ್ತಥಾ ಧ್ಯಾನಾರ್ಥಮೇವ ಗುಣಾನಾಮುಕ್ತಿರಿತ್ಯುಪಪತ್ತಿಃ || ೮ ||

ಅ || (೧) ಗುಣಗಳನ್ನು ನಾನಾಸ್ಥಾನಗಳಲ್ಲಿ ಹೇಳಿದುದರಿಂದ (ಅವು ಉಪಸಂಹಾರೋಪಯುಕ್ತವಲ್ಲ. ಉಪಸಂಹಾರಾರ್ಥವಾಗಿದ್ದರೆ ಅವುಗಳನ್ನೆಲ್ಲಾ ಏಕತ್ರ ಹೇಳಬೇಕಿತ್ತು. ಆದಕಾರಣ) ಉಪಾಸನೆಗೆ ಉಪಯುಕ್ತವಲ್ಲ. ಶ್ರುತಿಯು ಉಪಾಸನೆಗಾಗಿ ಭಗವದ್ಗುಣಗಳನ್ನು ಹೇಳುವುದಾದರೆ ನಾನಾ ಶಾಖೆಗಳಲ್ಲಿ ಒಂದೊಂದು ಗುಣವನ್ನು ಹೇಳಬಾರದಿತ್ತು. ಮತ್ತೆ ಮಾಲಿಕೆಯಲ್ಲಿ ಮಣಿಗಳನ್ನೆಂಬಂತೆ ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಒಟ್ಟಿಗೇನೇ ಹೇಳಬೇಕಿತ್ತು. ಏವಂಚ ನಾನಾಸ್ಥಾನಗಳಲ್ಲಿ ಗುಣಗಳನ್ನು ಹೇಳಿದುದರಿಂದ ಉಪಸಂಹಾರವು ಕೂಡದಿರುವಪ್ರಯುಕ್ತ ಉಪಾಸನವು ಯುಕ್ತವಲ್ಲ,ಎಂದರೆ ಹಾಗೆ ಹೇಳಕೂಡದು(೨) (ಏಕೆಂದರೆ ಫಲಸಾಮ್ಯಂ=(ವಿಪ್ರಕೀರ್ಣಗುಣೋಪಸಂಹಾರಕ್ಕೆ ಅನುಸಾರಿಯಾದ ಮುಕ್ತಿಯಲ್ಲಿ ಆನಂದಾತಿಶಯರೂಪವಾದ ಫಲಸಾಮ್ಯ) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ನಾನಾಸ್ಥಾನಗಳಲ್ಲಿ ಹೇಳಿದ ಗುಣಗಳನ್ನು ಒಂದೇ ಜ್ಞಾನದಲ್ಲಿ ವಿಷಯೀಕರಿಸಿಕೊಂಡು ಉಪಾಸನಾ ಮಾಡುವವನಿಗೆ ತನ್ನ ಪ್ರಯತ್ನಕ್ಕೆ ಅನುಸಾರಿಯಾದ ತನಗೆ ಸದೃಶವಾದ ಮುಕ್ತಿಯಲ್ಲಿ ಆನಂದಾತಿಶಯರೂಪವಾದ ಫಲವು ಸಿಗುವುದರಿಂದ ಅಲ್ಲಿ ಅಲ್ಲಿರತಕ್ಕ ಗುಣಗಳು ತನ್ನ ಮನಸ್ಸಿನಲ್ಲಿ ಹೇಗೆ ಸ್ಥಿರವಾಗಿ ಇರುತ್ತಾವೋ, ಹಾಗೆ ಪ್ರಯತ್ನ ವಿಶೇಷ ಪೂರ್ವಕವಾಗಿ ಧ್ಯಾನಿಸುವುದಕ್ಕಾಗಿಯೇ ಗುಣಗಳನ್ನು ಅಲ್ಲಿ ಅಲ್ಲಿ ಹೇಳಿದ್ದು. ಹೀಗೆ ನಾನಾಸ್ಥಾನಗಳಲ್ಲಿ ಹೇಳಿದ ಗುಣಗಳಿಗೆ ಉಪಪತ್ತಿಯು. (ಏವಂಚ ನಾನಾಸ್ಥಾನಗಳಲ್ಲಿ ಹೇಳಿದ ಉಕ್ತಿಯು ಅನ್ಯಥಾ ಸಿದ್ಧಿಸುವುದರಿಂದಲೂ ವಿಶೇಷ ಫಲವು ಇದ್ದ ಪ್ರಯುಕ್ತವೂ ಪ್ರಾಮಾಣಿಕವಾದ ಪ್ರಯುಕ್ತ ಉಪಸಂಹಾರವನ್ನು ಮಾಡಲೇ ಬೇಕು.) | ೮ ||

೯ನೇ ಆತ್ಮಗೃಹೀತ್ಯಧಿಕರಣದಲ್ಲಿ 'ಆನಂದಾದಯಃಪ್ರಧಾನಸ್ಯ' 'ಆತ್ಮಶಬ್ದಾಚ್ಚ' ಎಂದು ಎರಡು ಪ್ರಕಾರ ಉಕ್ತಿಯಿರುವುದರಿಂದ ಆನಂದಾದಿಗಳು ನಾಲ್ಕೂ ಕೂಡ ಸರ್ವಮುಮುಕ್ಷುಗಳಿಂದಲೂ ಉಪಾಸ್ಯಗಳೋ, ಆತ್ಮತ್ವ ಒಂದೇ ಉಪಾಸ್ಯವೋ, ಎಂದು ಸಂದೇಹವು ಬಂದರೆ-ಆತ್ಮತ್ವವೇ ಸರ್ವಮುಮುಕ್ಷೂಪಾಸ್ಯವು. ಎಂದು ಪೂರ್ವಪಕ್ಷವು. ಆನಂದಾದಿ ನಾಲ್ಕೂಕೂಡ ಉಪಾಸ್ಯಗಳೇ ಎಂದು ಸಿದ್ಧಾಂತವು. ಅದರಲ್ಲಿ ಆಶುತಾ=(ಅಪರೋಕ್ಷಜ್ಞಾನವು ಶೀಘ್ರವಾಗುವುದು,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾರೆ.

ಮೂ || (೧) ನ ಚಾತ್ಯಾಶ್ವಪರೋಕ್ಷ್ಯಾಯಾನಂದಾದೀನಾಮಪಿ ಲೋಪೇನಾತ್ಮೇತ್ಯೇತಾವತಾ ಪೂರ್ಯತೇ । (೨) ಆತ್ಮಶಬ್ದಾರ್ಥವಿಶೇಷಾರ್ಥತ್ವಾದಾನಂದಾದೀನಾಂ || ೯ ||

ಅ || ಆತ್ಮೇತ್ಯೇವೋಪಾಸೀತ ಎಂಬ ಶ್ರುತಿಯಿಂದ ಶೀಘ್ರದಲ್ಲಿ ಅಪರೋಕ್ಷಜ್ಞಾನವು ಆಗುವುದಕ್ಕಾಗಿ ಆನಂದ ಸತ್ ಜ್ಞಾನ ಇವುಗಳನ್ನು ಬಿಟ್ಟು ಆತ್ಮಾ ಎಂಬಿಷ್ಟರಿಂದಲೇ ಪೂರ್ತಿಯಾಗುತ್ತದೆ. (ಏವಂಚ ಆನಂದಾದಿಗಳನ್ನು ಬಿಟ್ಟು ಆತ್ಮತ್ವವನ್ನೇ ಉಪಾಸನ ಮಾಡಿದರೆ ಅಪರೋಕ್ಷ ಜ್ಞಾನವು ಶೀಘ್ರದಲ್ಲಿ ಉಂಟಾಗುವುದರಿಂದ ಆನಂದಾದಯಃ ಪ್ರಧಾನಸ್ಯ ಎಂಬುದಕ್ಕೆ ಬಾಧವು ಎಂದರೆ) ಹಾಗೆ ಹೇಳಕೂಡದು. (೨)

(ಏಕೆಂದರೆ—ವಿಶೇಷಃ (ಆನಂದಾದಿಗಳು ಆತ್ಮ ಶಬ್ದಾರ್ಥದ ಪ್ರಭೇದವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (**ಅತ್ರಹ್ಯೇತೇ ಸರ್ವಏಕೀಭವಂತಿ** ಎಂಬ ಶ್ರುತಿಯಿಂದ) ಆನಂದಾದಿಗಳೂ ಆತ್ಮ ಶಬ್ದಾರ್ಥದ ಪ್ರಭೇದವಾದ ಪ್ರಯುಕ್ತ ಆತ್ಮತ್ವ ಎಂಬ ಗುಣವನ್ನುಪಾಸನಾ ಮಾಡಿದರೆ ಆನಂದಾದಿಗಳೂ ಬಲಾತ್ ಪ್ರಾಪ್ತಗಳಾಗುತ್ತವೆ.) (ಈ ಶ್ರೌತವಾದ ಆತ್ಮಶಬ್ದವು ಸ್ವಾಮಿತ್ವವೆಂಬ ಅರ್ಥವನ್ನು ಮಾತ್ರ ಹೇಳತಕ್ಕದಲ್ಲ. ಆನಂದಾದಿಗಳೂ ಆತ್ಮತ್ವದ ಪ್ರಭೇದವೇ. ಆದ ಪ್ರಯುಕ್ತ ಆತ್ಮಶಬ್ದವು ಆನಂದಾದಿಗಳನ್ನು ಹೇಳುತ್ತದೆ. ಹೇಗೆಂದರೆ-**ಆನಂದಾನುಭವತ್ವಾಚ್ಚ ಭಣ್ಯತೇ । ನಿತ್ಯತ್ವಾಚ್ಚ ತಥಾಽಽತ್ಮೇತಿ** ಎಂಬ ಸ್ಮೃತಿಯಿಂದ ಸಿದ್ಧಿಸುತ್ತದೆ.) (ಏವಂಚ ಆನಂದಾದಿಗಳು ಆತ್ಮಶಬ್ದಾರ್ಥದ ಪ್ರಭೇದವಾದ ಪ್ರಯುಕ್ತ ಆತ್ಮೇತ್ಯೇವ ಎಂದು ಅವಧಾರಣವಿದ್ದರೂ ನಾಲ್ಕು ಗುಣಗಳನ್ನುಪಾಸನಾ ಮಾಡಬೇಕೆಂಬ ನಿಯಮಕ್ಕೆ ಭಂಗವಿಲ್ಲ.) ॥ ೯ ॥

೧೧ನೇ ಅನ್ವಯಾಧಿಕರಣದಲ್ಲಿ ಉಪಾಸ್ಯ ಅನುಪಾಸ್ಯ ಗುಣಗಳು ದೃಷ್ಟಗಳಾಗಿರುವುದರಿಂದ ಆತ್ಮ ಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳೋ, ಅಲ್ಲವೋ, ಎಂದು ಸಂದೇಹವು ಬಂದರೆ ಸರ್ವೋಪಾಸ್ಯಗಳಲ್ಲ ಎಂದು ಪೂರ್ವಪಕ್ಷವು. ಸರ್ವೋಪಾಸ್ಯಗಳೇ ಎಂದು ಸಿದ್ಧಾಂತವು. ಅದರಲ್ಲಿ ವಿಭ್ರಮಃ=(ಆತ್ಮಶಬ್ದವು ಆನಂದಾದಿ ನಾಲ್ಕುಗುಣಗಳನ್ನುಪಾಸನಾ ಮಾಡುವವನಿಗೆ ಭ್ರಾಂತಿಯನ್ನು ಹುಟ್ಟಿಸುತ್ತದೆ,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಸೂ ॥ (೧) ನ ಚಾತ್ಮ ಶಬ್ದೋ ವಿಭ್ರಮಕರಃ ॥ (೨) ಗುಣಾಧಿಕಾನಾಮಧಿಕಾರಿಣಾಂ ಭಗವದ್ಗುಣಾನಧಿಕಾನ್ ಪ್ರಕಾಶಯತೀತ್ಯವಧಾರಣೋಪಪತ್ತೇಃ** ॥ ೧೦ ॥

ಅ ॥ (೧) (ಆನಂದ ಮೊದಲಾದ ಎಗುಣಗಳೂ ಆತ್ಮತ್ವದಲ್ಲಿ ಅಂತರ್ಭೂತಗಳಾಗುವುದರಿಂದ ಆತ್ಮ ಶಬ್ದೋಕ್ತಗುಣಗಳೇ ಸರ್ವೋಪಾಸ್ಯಗಳೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ **ಅತ್ರವ್ಯಾಪ್ತೇರಾತ್ಮ ಶಬ್ದಃ ಪರಮಸ್ಮ ಪ್ರಯುಜ್ಯತೇ** ಎಂಬ ಪ್ರಮಾಣದಿಂದ ಆನಂದಾದಿಗಳಿಗಿಂತ ಇತರ ಗುಣಗಳೂ ಆತ್ಮತ್ವದಲ್ಲಿ ಸೇರುತ್ತವೆ. ಅದಕಾರಣ) ಆತ್ಮಶಬ್ದವು ನಾಲ್ಕುಗುಣಗಳನ್ನುಪಾಸನಾ ಮಾಡಬೇಕೆಂದು ಕೇಳಿದ ಪುರುಷನಿಗೆ ಭ್ರಾಂತಿಯನ್ನೇ ಹುಟ್ಟಿಸುತ್ತದೆ. ಹೀಗೆಯೇ ಉಪಾಸನಾ ಮಾಡಬೇಕೆಂದು ನಿಶ್ಚಯಕವಾಗುವುದಿಲ್ಲ. (ಏವಂಚ ಆತ್ಮಶಬ್ದದಿಂದ ಇಷ್ಟು ಗುಣಗಳು ಹೇಳಲ್ಪಡುತ್ತವೆ, ಎಂದು ನಿರ್ಣಯವಾಗದಿರುವುದರಿಂದ ಭ್ರಾಂತಿಯನ್ನು ಹುಟ್ಟಿಸುವುದರಿಂದ ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳಲ್ಲ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ-**ಗುಣಾಧಿಕ್ಯಂ**=(ಚತುರ್ಮುಖ ಮೊದಲಾದವರಿಗೆ ಹೆಚ್ಚು ಗುಣಗಳು,) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಹೆಚ್ಚು ಗುಣಗಳನ್ನುಪಾಸನಾ ಮಾಡತಕ್ಕ ಬ್ರಹ್ಮಾದ್ಯಧಿಕಾರಿಗಳಿಗೆ ಯೋಗ್ಯತಾನುಸಾರ ಹೆಚ್ಚು ಹೆಚ್ಚು ಭಗವದ್ಗುಣಗಳನ್ನು ಆತ್ಮಶಬ್ದವು ಪ್ರಕಾಶಗೊಳಿಸುತ್ತದೆ. (ತದಿತರರಿಗೆ ಅಲ್ಪಗುಣಗಳನ್ನೇ ಪ್ರಕಾಶಗೊಳಿಸುತ್ತದೆ.) ಆತ್ಮಶಬ್ದವು ಸಮಸ್ತಗುಣಗಳನ್ನು ಹೇಳುತ್ತದೆ, ಎಂಬುವುದು ಸತ್ಯವೇ. ಆದರೆ ಬಹು ಗುಣೋಪಾಸಕರಾದ ಬ್ರಹ್ಮಾದಿಗಳನ್ನು ಕುರಿತೇ ಸರ್ವಗುಣಗಳನ್ನು ಹೇಳುತ್ತದೆ. ಸಮಸ್ತ ಅಧಿಕಾರಿಗಳನ್ನು ಕುರಿತು ಅಲ್ಲ. ಹಾಗೆಯೇ ಅನುಭವವು. **'ಸರ್ವಾನ್ ಗುಣಾನಾತ್ಮ ಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ'** ಎಂದು ಶ್ರುತಿಯೂ ಇದೆ. ಹೀಗಾದರೆ) ಆತ್ಮೇತ್ಯೇವ ಎಂದು ಅವಧಾರಣವೂ ಕೂಡುತ್ತದೆ. (ಏವಂಚ ಚತುರ್ಮುಖಾದ್ಯಧಿಕಾರಿಗಳಿಗೆ ಹೆಚ್ಚು ಗುಣಗಳಿದ್ದುದರಿಂದ ಆತ್ಮಶಬ್ದವು ಚತುರ್ಮುಖಾದಿಗಳಿಂದ ಉಪಾಸ್ಯಗಳಾದ ಗುಣಗಳನ್ನು ಹೇಳುತ್ತದೆ ಎಂಬುವುದು ಯುಕ್ತವು.) ॥ ೧೦ ॥

೧೧ನೇ ಕಾರ್ಯಾಧಿಕರಣದಲ್ಲಿ ಧ್ಯೇಯ ಭಗವದ್ಗುಣಗಳು ಅಲೌಕಿಕಗಳೆಂದು ಹೇಳಿದುದರಿಂದಲೂ ಲೋಕ ದೃಷ್ಟಿಯಿಂದಲೂ ಭಗವದ್ಗುಣಗಳು ಲೌಕಿಕಗಳೋ ಅಲೌಕಿಕಗಳೋ, ಎಂದು ಸಂಶಯವು ಬಂದರೆ ಲೌಕಿಕಗಳನ್ನೇ ಧ್ಯಾನಿಸಬೇಕೆಂದು ಪೂರ್ವಪಕ್ಷವು. ಅಲೌಕಿಕಗಳನ್ನೇ ಧ್ಯಾನಿಸಬೇಕೆಂದು ಸಿದ್ಧಾಂತವು. ಅದರಲ್ಲಿ ಅಪ್ರಾಕೃತಿಃ=(ಧ್ಯಾನಾಭಾವವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ಅಲೌಕಿಕಗುಣಾನಾಮಪ್ರತೀತೇರಲೌಕಿಕಗುಣಾಧ್ಯಾನೇ ತದಪ್ರಾಕೃತಿರೇವ ಭವತೀತಿ ನ ಮಂತವ್ಯಂ ॥ (೨) ಲೌಕಿಕವಿಲಕ್ಷಣಾ ಅತ್ಯುತ್ತಮಾ ಇತಿ ಧ್ಯಾನಸ್ಯೈವ ಪ್ರಾಧಾನ್ಯಾತ್ ॥ ೧೧ ॥

ಅ ॥ (೧) ಅಲೌಕಿಕ ಗುಣಗಳು ಮೊದಲು ಅನುಭೂತಗಳಾಗದಿರುವುದರಿಂದ ಅವುಗಳಿಗೆ, ಧ್ಯಾನಕಾಲಗಳಾದಲ್ಲಿ ಸ್ಮರಣರೂಪವಾದ ಜ್ಞಾನವಿಲ್ಲದಿರುವುದರಿಂದ) ಅವುಗಳಿಗೆ ಧ್ಯಾನವು ಕೂಡುವುದಿಲ್ಲ. ಲೌಕಿಕಗುಣಗಳು ಧ್ಯೇಯವಲ್ಲವೆಂದಾದರೆ ಧ್ಯಾನವೇ ಇಲ್ಲವೆಂದಾಗುವುದು.(ಧ್ಯಾನವು ಆವಶ್ಯಕವೇ. ಆದಕಾರಣ ಲೌಕಿಕಗುಣಗಳನ್ನೇ ಧ್ಯಾನಿಸಬೇಕು, ಎಂದರೆ) ಹಾಗೆ ತಿಳಿಯ ಕೂಡದು. (೨)(ಏಕೆಂದರೆ ಪ್ರದಾನತಃ (ಅಲೌಕಿಕವಾದ ಮೋಕ್ಷರೂಪವಾದ ಕಾರ್ಯವನ್ನು ಹುಟ್ಟಿಸುವುದರಿಂದ ಅಲೌಕಿಕಗಳಾದ ಗುಣಗಳನ್ನು ಧ್ಯಾನಿಸುವುದು ಪ್ರಧಾನವು ) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)(ನಿರವಧಿಕ ಪ್ರೇಮಾಸ್ಪದತ್ವಮಾತ್ರವು ಸಮಾನವಾಗಿರುವುದರಿಂದ ಲೌಕಿಕಸುಖದಂತೆ ಅಲೌಕಿಕಸುಖಕ್ಕೂ ಪ್ರತೀತಿಯು ಕೂಡುವುದರಿಂದ) ಲೌಕಿಕಗುಣಗಳಿಗಿಂತ ವಿಲಕ್ಷಣಗಳಾದವುಗಳು ಅತ್ಯುತ್ತಮಗಳು ಎಂಬ ಧ್ಯಾನವೇ ಅಲೌಕಿಕವಾದ ಮೋಕ್ಷರೂಪವಾದ ಕಾರ್ಯವನ್ನು ಹುಟ್ಟಿಸುವುದರಿಂದ ಪ್ರಧಾನವಾದ ಪ್ರಯುಕ್ತ ಅಲೌಕಿಕ ಗುಣಗಳನ್ನೇ ಧ್ಯಾನಿಸಬೇಕು. ॥ ೧೧ ॥

೧೨ನೇ ಸಮಾನಾಧಿಕರಣದಲ್ಲಿ ಕೃಷಿ ಮೊದಲಾದ ಕ್ರಿಯೆಗಳಲ್ಲಿ ತಮಗೆ ಅನುಗುಣವಾದ ಫಲವೂ ಫಲಾಭಾವವೂ ಕಂಡದರಿಂದ ಭಗವದ್ಗುಣೋಪಾಸನವೂ ಸ್ವಾನುಗುಣವಾದ ಫಲವನ್ನು ಕೊಡುತ್ತದೋ, ಇಲ್ಲವೋ, ಎಂದು ಸಂದೇಹವು ಬಂದರೆ—ಇಲ್ಲವೆಂದು ಪೂರ್ವಪಕ್ಷವು. ಸ್ವಾನುಸಾರಿಯಾದ ಫಲವನ್ನು ಕೊಡುತ್ತದೆ, ಎಂದು ಸಿದ್ಧಾಂತವು. ಆದರಲ್ಲಿ ಲಿಂಗಂ=(ಸರಸ್ವತೀ ಬ್ರಹ್ಮರಿಗೆ ಸ್ಥಾನೈಕ್ಯ ಗುಣತಾರತಮ್ಯರೂಪವಾದ ಲಿಂಗ) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥(೧) ಬ್ರಹ್ಮಣಶ್ಚ ಬ್ರಹ್ಮಾಣ್ಯಾಃ ಸ್ಥಾನೈಕ್ಯಂ ಗುಣತಾರತಮ್ಯಂ ಚ ಯಥಾ ಗುಣೋಪಾಸನಂ ಮುಕ್ತಾವಾಧಿಕ್ಯಂ ನ ಭವತೀತ್ಯತ್ರ ಲಿಂಗಂ । ಸಮ ವಿಷಮೋಪಾಸನಾಯುಕ್ತೇರಿತಿ ನ ಮಂತವ್ಯಂ ।(೨) ಯಥಾಶಕ್ತಿ ಸ್ವಕೃತಾನ್ ಧಾತ್ರಾ ಗುಣಾನ್ವಿಷ್ಣೋಃ ಸರಸ್ವತೀ । ಸ್ಮರೇತ್ತ್ರ್ಯವಿಕ್ರಮಾದ್ಯಾಂಸ್ತು ನಿತ್ಯವಿಕ್ರಾಂತಿಪೂರ್ವಕೈಃ । ಕದಾಚಿಲ್ಲೋಪಯೇದ್ದೇವೀ ಸ್ಥಾನೈಕ್ಯಂ ನ ಗುಣೈಸ್ತತಃ । ಸಾಮ್ಯಂ ತಯೋರ್ಯಥಾ ವಿಷ್ಣೋರ್ಗುಣೋಪಾಸಾ ಫಲಂ ಭವೇದಿತ್ಯಧ್ಯಾತ್ಮವಚನಾದ್ಯಥಾಶಕ್ತಿಕ್ರಿಯಾ ದೇವ್ಯಾಃ॥೧೨॥

ಅ ॥ (೧) ಬ್ರಹ್ಮ ಸರಸ್ವತೀ ಇಬ್ಬರಿಗೂ ಸ್ಥಾನೈಕ್ಯವೂ ಆನಂದಾದಿ ಗುಣಗಳಿಂದ ತಾರತಮ್ಯವೂ ಎಂತ ಫಲ ವ್ಯತ್ಯಾಸವಿದ್ದರೂ ಉಪಾಸನಾದಲ್ಲಿ ವೈಷಮ್ಯವಿಲ್ಲದಿರುವ ಪ್ರಯುಕ್ತ ಫಲದಲ್ಲಿ ಸಮವಿಷಮತ್ವ

ಇದ್ದ ಹಾಗೆ ಉಪಾಸನಾದಲ್ಲಿ ಸಮವಿಷಮತ್ವವಿಲ್ಲದಕಾರಣ ಮುಕ್ತಿಯಲ್ಲಿ ಆಧಿಕ್ಯವು ಬರುವುದಿಲ್ಲ. ಎಂಬಲ್ಲಿ ಲಿಂಗವು. (ಚತುರ್ಮುಖನಿಗೂ ಸರಸ್ವತಿಗೂ ವೇದಗಳಲ್ಲಿ ಹೇಳಿದ ಸರ್ವಗುಣೋಪಸಂಹಾರವು ಇದ್ದೇ ಇದೆ. ಸರಸ್ವತಿಯು ಅವಾಂತರಾಭಿಮಾನಿನಿಯಾದುದರಿಂದ ಚತುರ್ಮುಖನು ವಿಚಿತ್ರ ಕ್ರಿಯೆಗಳುಳ್ಳವನು ಎಂದು ಸಾಮಾನ್ಯವಾಗಿ ಸಮಸ್ತ ಕ್ರಿಯೋಪಸಂಹಾರವೂ ಇಬ್ಬರಿಗೂ ಇದೆ. ಏವಂಚ ಇಬ್ಬರಿಗೂ ಉಪಾಸನೆಯು ಸಮವೇ ಆಗಿದೆ. ಆದಕಾರಣ ಮುಕ್ತಿಯಲ್ಲಿ ಇಬ್ಬರೂ ಒಟ್ಟಿಗೇನೇ ಶ್ರೀಹರಿಯ ಒಂದಂಗದಲ್ಲಿ ಸ್ಥಿತಿರೂಪವಾದ ಸ್ಥಾನೈಕ್ಯವೂ ಅದೇ ಸ್ಥಾನದಲ್ಲಿ ತಾನು ತಾನು ಮಾಡಿದ ಸಮೋಪಾಸನೆಗೆ ಫಲಭೂತವಾದ ಆನಂದಾನುಭವಸಾಮ್ಯವೂ ಇರಲಿ. ಇವೆಲ್ಲವೂ ಸಮ ಉಪಾಸನೆಗೇನೇ ಫಲವು. ಈ ಉಪಾಸನೆಗೇನೇ ಸಮತ್ವವೂ ವಿಷಮತ್ವವೂ ವಿರುದ್ಧವು, ಅಲ್ಲದೆ ವಿಷಮೋಪಾಸನವೂ ತೋರುವುದಿಲ್ಲ. ಹೀಗಾದರೂ ಚತುರ್ಮುಖನಿಗೆ ಸರಸ್ವತಿಗಿಂತ ಆನಂದಾದಿ ಗುಣಗಳಿಂದ ಆಧಿಕ್ಯರೂಪವಾದ ಯಾವುದು ಗುಣತಾರತಮ್ಯವು ಹೇಳಲ್ಪಡುತ್ತದೋ, ಅದು ಹೇಗೆ ಗುಣಗಳಿಂದ ಉಪಾಸನೆಯು ಇದೆಯೋ ಹಾಗೆ ಮುಕ್ತಿಯಲ್ಲಿ ಆಧಿಕ್ಯವು ಬರುವುದಿಲ್ಲ, ಎಂಬಲ್ಲಿ ಲಿಂಗವು. ಒಂದೇ ಉಪಾಸನೆಗೆ ಸಮಉಪಾಸನಾತ್ವ, ವಿಷಮಉಪಾಸನಾತ್ವವೂ,ಯುಕ್ತವಲ್ಲ.)ಏಕೆಂದರೆ ಗುಣಕ್ರಿಯೆಗಳು ಸಮಗಳಾದರೆವೈಷಮ್ಯವುಕೂಡಲಾರದು. ವಿಷಮಗಳಾದರೆ ಸಾಮ್ಯವು ಕೂಡಲಾರದು ಅವು ವಿರುದ್ಧವು.)(ಏವಂಚ ಸರಸ್ವತೀ ಬ್ರಹ್ಮರಿಗೆ ಸ್ಥಾನೈಕ್ಯ ಗುಣತಾರತಮ್ಯರೂಪವಾದ ಲಿಂಗದಿಂದ ಇತರರಿಗೂ ಕೂಡ ಉಪಾಸನಾನುಸಾರವಾಗಿ ಮುಕ್ತಿಯಲ್ಲಿ ಫಲವಾಗುವುದಿಲ್ಲ.ಎಂದರೆ ಹೀಗೆ ತಿಳಿಯಕೂಡದು.) (೨) (ಏಕೆಂದರೆ ಯಥಾಶಕ್ತಿಕ್ರಿಯಾ— ಸರಸ್ವತೀದೇವಿಗೆ ಶಕ್ತ್ಯನುಸಾರವಾಗಿ ಕ್ರಿಯೆಯು ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.)ಸರಸ್ವತೀದೇವಿಯು ಚತುರ್ಮುಖನಿಂದ ಧ್ಯಾನಿಸಲ್ಪಟ್ಟ ಶ್ರೀವಿಷ್ಣುವಿನ ಗುಣಗಳನ್ನು ಸಾಮಾನ್ಯ ಕ್ರಿಯೆಗಳಿಂದ ಶಕ್ತ್ಯನುಸಾರಧ್ಯಾನಿಸುವಳು. ತ್ರಿವಿಕ್ರಮನದ್ದಾದ ೩ ಹೆಜ್ಜೆಗಳಿಂದ ಸರ್ವಾಕ್ರಮಣ ಮೊದಲಾದ ಕ್ರಿಯಾ ವಿಶೇಷಗಳನ್ನಾದರೂ ತ್ರೈವಿಕ್ರಮತ್ವಾದಿ ವಿಶೇಷಾಕಾರವಾಗಿ ಕದಾಚಿತ್ ಧ್ಯಾನಿಸುವುದಿಲ್ಲ. ಆದಕಾರಣ ಸರಸ್ವತೀ ಬ್ರಹ್ಮರಿಗೆ ಸ್ಥಾನೈಕ್ಯವು. ಗುಣಗಳಿಂದ ಸಾಮ್ಯವಿಲ್ಲ. ಆದಕಾರಣ ಹೇಗೆಗುಣಗಳ ಉಪಾಸನೆಯೋ, ಅದಕ್ಕೆ ಅನುಗುಣವಾಗಿ ಫಲವು ಆಗುವುದು. ಹೀಗೆ ಅಧ್ಯಾತ್ಮವಚನದಿಂದ ಸರಸ್ವತೀದೇವಿಗೆ ಯಥಾಶಕ್ತಿಕ್ರಿಯೆಯು.

ವಿ ॥ (೧) ಸರಸ್ವತೀದೇವಿಗೆ ಸಾಮಾನ್ಯವಾಗಿ ಕ್ರಿಯೋಪಸಂಹಾರರೂಪವಾದ ಕ್ರಿಯೆಯೇ ಇದೆ. ವಿಶಿಷ್ಟಕ್ರಿಯೋಪಸಂಹಾರವು ಇಲ್ಲ. ಕದಾಚಿತ್ ಸ್ಮರಣವಿದ್ದರೂ ಅದು ಧ್ಯಾನವಲ್ಲ. (೨) ಬ್ರಹ್ಮನಿಗಾದರೂ ಜ್ಞಾನ ವಿಜ್ಞಾನಗಳು ಇದ್ದುದರಿಂದ ಸಾಮಾನ್ಯಕ್ರಿಯೋಪಸಂಹಾರವೂ, ವಿಶಿಷ್ಟ ತ್ರಿವಿಕ್ರಮತ್ವಾದಿ ಅನಂತ ಕ್ರಿಯೋಪಸಂಹಾರವೂ ಇದೆ. ಆದಕಾರಣ ವಿಷಮಉಪಾಸನೆಯೂ ಇದ್ದುದರಿಂದ ಗುಣತಾರತಮ್ಯವೂ ಇದೆ. ಸಮೋಪಾಸನೆಯು ಇದ್ದುದರಿಂದ ಸ್ಥಾನೈಕ್ಯವು, ಆದಕಾರಣ ಸ್ಥಾನೈಕ್ಯವಿದೆ. ಗುಣಸಾಮ್ಯವು ಇಲ್ಲ. ಶ್ರೀವಿಷ್ಣುವಿನ ಗುಣೋಪಾಸನಾನುಸಾರವಾಗಿಯೇ ಮುಕ್ತಿಯಲ್ಲಿ ಆಧಿಕ್ಯರೂಪವಾದ ಫಲವು ಆಗುತ್ತದೆ.

೧೩ನೇ ನ ವಾ ವಿಶೇಷಾಧಿಕರಣದಲ್ಲಿ ಸರ್ವೋಪಾಸ್ಯ ಅನುಪಾಸ್ಯ ಗುಣಗಳನ್ನು ಕಂಡದರಿಂದ ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳೋ, ಅಲ್ಲವೋ ಎಂದು ಸಂದೇಹವು ಬಂದರೆ ಸರ್ವೋಪಾಸ್ಯಗಳಲ್ಲ ಎಂದು ಪೂರ್ವಪಕ್ಷವು. ಸರ್ವೋಪಾಸ್ಯಗಳೆಂದು ಸಿದ್ಧಾಂತವು. ಅದರಲ್ಲಿ ಅನವಸ್ಥಾ=(ಆತ್ಮಶಬ್ದದಿಂದ ಪುರುಷನಿಗೆ ಇಷ್ಟು ಗುಣಗಳು ಹೇಳಲ್ಪಡುತ್ತವೆಂದು ಪ್ರತ್ಯೇಕ ನಿಯಮನರೂಪವಾದ ವ್ಯವಸ್ಥೆಯು ಇಲ್ಲದಿರುವಿಕೆಯು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚಾತ್ಮಶಬ್ದೇನಾಸ್ಯ ಪುರುಷಸ್ಯೈತಾವಂತೋ ಗುಣಾ ಉಚ್ಯಂತೇ ಇತಿ ವ್ಯವಸ್ಥಾಭಾವಃ ।(೨) ಯಸ್ಯ ಯಾವಂತೋಽರ್ಥಾಃ ಯುಗಪದ್ಧ್ಯಾತುಂ ಶಕ್ಯಂತೇ ತಸ್ಯ ತಾವಂತ ಇತಿ ಸಂಧೇಃ ॥ ೧೩ ॥

ಅ ॥ (೧) (ಆತ್ಮಶಬ್ದವು ಸಮಸ್ತಗುಣಗಳನ್ನು ಹೇಳತಕ್ಕದ್ದಾದರಿಂದ ಆತ್ಮಶಬ್ದೋಕ್ತಗುಣಗಳು ಸರ್ವೋಪಾಸ್ಯಗಳಲ್ಲ. ಸರ್ವಗುಣಗಳನ್ನು ಪಾಸನಾ ಮಾಡಲಿಕ್ಕೆ ಸರ್ವರಿಗೆ ಯೋಗ್ಯತೆಯು ಇಲ್ಲ.) (ಯದ್ಯಪಿ ಆತ್ಮಶಬ್ದವು ಉತ್ತಮಾಧಿಕಾರಿಗಳನ್ನು ಕುರಿತೇ ಸರ್ವಗುಣಗಳನ್ನು ಹೇಳುತ್ತದೆ. ಎಲ್ಲರನ್ನು ಕುರಿತು ಹೇಳುವುದಿಲ್ಲ. ಆದಾಗ್ಯೂ) ಈ ಪುರುಷನಿಗೆ ಇಷ್ಟು ಗುಣಗಳು ಆತ್ಮಶಬ್ದದಿಂದ ಹೇಳಲ್ಪಡುತ್ತವೆ ಎಂದು ಪ್ರತ್ಯೇಕ ನಿಯಮನರೂಪವಾದ ವ್ಯವಸ್ಥೆಯು ಇಲ್ಲ. (ಆದಕಾರಣ ಹೆಚ್ಚು ಕಡಿಮೆ ಗುಣಗಳನ್ನು ಹೇಳುತ್ತವೆಂದು ಇಟ್ಟುಕೊಂಡು ಆತ್ಮಶಬ್ದೋಕ್ತಗುಣಗಳಿಗೆ ಸರ್ವೋಪಾಸ್ಯತ್ವವು ಎಂತಹೇಳಿದ್ದು ಕೂಡುವುದಿಲ್ಲ. ಎಂದರೆ ಹಾಗೆ) ಹೇಳಕೂಡದು (೨) (ಏಕೆಂದರೆ—ಸಂಧಿಃ=(ಅಭಿಸಂಧಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಯಾವ ಪುರುಷನಿಗೆ ಎಷ್ಟು ಗುಣಗಳು ಧ್ಯಾನಿಸಲಿಕ್ಕೆ ಶಕ್ಯಗಳಾಗುತ್ತಾವೋ (ಧ್ಯಾನಕಾಲದಲ್ಲಿ ತೋರುತ್ತವೋ,) ಆತನಿಗೆ ಅಷ್ಟು ಗುಣಗಳು ಧ್ಯಾನಾರ್ಹಗಳು, ಎಂದು ಅಭಿಸಂಧಿಯು (ಅಪಾರವಾದುದಾಗ್ಯೂ ಸಮುದ್ರಜಲವು ಘಟದಲ್ಲಿ ಸ್ವಯೋಗ್ಯ ಜಲವೇ ಹೇಗೆ ಪ್ರಾಪ್ತವಾಗುತ್ತದೋ ಹಾಗೆಯೇ ಸವಿಾಚೀನವಾದ ಆಯಾಯ ಧ್ಯಾನಶಕ್ತಿಯೇ ಗುಣಗಳನ್ನು ಹೊಂದಿಸಿಕೊಡುತ್ತದೆ.) (ಏವಂಚ ಆತ್ಮಶಬ್ದದಿಂದ ಈ ಪ್ರಕಾರವಾಗಿಯೇ ಗುಣಗಳು ತೋರುತ್ತವೆಂದು ವಿವಕ್ಷಿತವಾದ ಪ್ರಯುಕ್ತ ಅಯೋಗ್ಯಗುಣಗಳ ಜ್ಞಾನವು ಉಪಾಸನೆಗೆ ಉಪಯುಕ್ತವಾಗದಿರುವುದರಿಂದ ಯೋಗ್ಯತಾನುಸಾರ ಅವರವರ ಉಪಾಸ್ಯಗುಣಗಳು ಮಾತ್ರ ತೋರುವುದರಿಂದ ಆತ್ಮಶಬ್ದೋಕ್ತ ಗುಣಗಳಿಗೆ ಸರ್ವೋಪಾಸ್ಯತ್ವ ಹೇಳಿದ್ದು ಯುಕ್ತವು. ॥ ೧೩ ॥

೧೧ನೇ ಸಂಭೃತ್ಯಧಿಕರಣದಲ್ಲಿ 'ಉಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' 'ಏಷ ಹಿ ಸರ್ವೇಷು ಲೋಕೇಷು ಭಾತಿ' ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಭಗವದ್ಗುಣಗಳಲ್ಲಿ ಅಂತರ್ಗತಗಳಾದ ಸಂಭೃತಿ ದ್ಯುವ್ಯಾಪ್ತಿಗಳು ಎಲ್ಲಾ ಮೋಕ್ಷೇಚ್ಛುಗಳಿಂದಲೂ ಉಪಾಸ್ಯಗಳೋ ಅಲ್ಲವೋ ಎಂದು ಸಂದೇಹವು ಬಂದರೆ ಸರ್ವಮುಮುಕ್ಷುಗಳಿಂದಲೂ ಉಪಾಸ್ಯಗಳೆಂದು ಪೂರ್ವಪಕ್ಷವು. ಸರ್ವಮುಮುಕ್ಷುಗಳಿಂದ ಉಪಾಸ್ಯಗಳಲ್ಲವೆಂದು ಸಿದ್ಧಾಂತವು. ಅದರಲ್ಲಿ ಅವಿಶೇಷಿತಾ=(ಮೋಕ್ಷೇಚ್ಛಾ ಫಲಾಪೇಕ್ಷಾ ಇವುಗಳಿಗೆ ವಿಶೇಷವಿಲ್ಲದಿರುವಿಕೆ,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥(೧) ನ ಚ ಮುಮುಕ್ಷುತ್ವ ಇತ್ಯವಿಶೇಷಾತ್ ಭರಣಸ್ಯ ದ್ಯುಕೇಶ್ಚ ಸರ್ವೇಷಾಮಪೇಕ್ಷಿತತ್ವಾತ್ಸಂಭೃತಿದ್ಯುವ್ಯಾಪ್ತೀ ಅಪಿ ಸಾಮಾನ್ಯೇ ॥ (೨) ಸತ್ಯೋ ಜ್ಞಾನಃ ಪರಮಾನಂದರೂಪಃ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್।ನಾನ್ಯತ್ಕಿಂಚಿತ್ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತೇ॥(೩)ಗುಣ್ಯಾಕಾರಸ್ಯೈತೇರೇವ ದ್ಯುತಿಮಾತ್ರಂ ಪ್ರತೀಯತೇ। ನ ವ್ಯಾಪ್ತಿರ್ಜಗದಸ್ಯೈತ್ಯಾ ನಾನಾತಶಕ್ತಿರ್ಯತೋ ಮತಾ।ದೇವಾನಾಂ ಯುಗಪಜ್ಜ್ಞಾನಂ।ಮಾನುಷಾಣಾಂ ಕಥಾ ನ ತು । ಪರ್ಯಾಯೇಣಾಪಿ ಸತ್ಯಾಸ್ಸ್ಯಾನ್ನೈವಾನ್ಯೇಷಾಂ ಕಥಂಚನೇತ್ಯಾದಿ ಪ್ರಮಾಣಬಲಾತ್ ॥ ೧೪ ॥

ಅ ॥ (೧) ಮೋಕ್ಷೇಚ್ಛೆಯೂ ಫಲಾಪೇಕ್ಷೆಯೂ ಸರ್ವರಿಗೂ ಸಮಾನವಾಗಿರುವುದರಿಂದ ಮೋಕ್ಷದಲ್ಲಿ ತಮಗಿಂತ ಅಧಮರಾದವರ ಭರಣ (ಪೋಷಣ)ವೂ ಪ್ರಕಾಶವೂ ಸರ್ವರಿಗೂ ಅಪೇಕ್ಷಿತವಾದ ಪ್ರಯುಕ್ತ

ಭರಣ ದ್ಯುವ್ಯಾಪ್ತಿಗಳೂ ಕೂಡ ಸಾಮಾನ್ಯಗಳು (ಅಂದರೆ ಸರ್ವೋಪಾಸ್ಯಗಳು.) ಎಂದರೆ ಹಾಗೆ ಹೇಳ ಕೂಡದು.(೨)(ಏಕೆಂದರೆ- ಪ್ರಮಾಣಬಲಂ (ಸತ್ಯೋಜ್ಞಾನಃ ಸತ್ಯಂಜ್ಞಾನಮನಂತಂ ಬ್ರಹ್ಮ ಇತ್ಯಾದಿ ಪ್ರಮಾಣ ಬಲವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಸತ್ಯಃ ಜ್ಞಾನಃ ಪರಮಾನಂದರೂಪಃ ಆತ್ಮಾ ಎಂದು ನಿತ್ಯದಲ್ಲಿಯೂ ಉಪಾಸನೆಯು ಆಗುವುದು. ಧೀರನಾಗಿ ಬೇರೆ ಸಂಭೃತ್ಯಾದಿಗಳನ್ನು ಉಪಾಸನಾ ಮಾಡಬಾರದು. ದೇವತೆಗಳು ಮಾತ್ರ ಸಂಭೃತಿ ಮೊದಲಾದ ಎಲ್ಲಾ ಗುಣಗಳಿಂದ ಉಪಾಸನಾ ಮಾಡುತ್ತಾರೆ. (ಇತ್ಯಾದಿ ಪ್ರಮಾಣಗಳಿಂದ ಸಂಭೃತ್ಯಾದಿಗಳು ಸರ್ವೋಪಾಸ್ಯಗಳಲ್ಲ) (೩) (ಹಾಗಾದರೆ ಮುಕ್ತರಿಗೆ ಕಿಂಚಿತ್ಪ್ರಕಾಶವೂ ಇಲ್ಲವೆಂದಾಗುವುದು ಎಂದರೆ) ಯಾವುದು ರಾಮಕೃಷ್ಣಾದ್ಯವತಾರವು ಇದೆಯೋ ಅದು ಇಂದ್ರನೀಲಮಣ್ಯಾದಿಗಳಿಗೆ ಸದೃಶವಾದ ಪ್ರಭಾಖ್ಯ ಗುಣವುಳ್ಳದ್ದು ಎಂದು ಮಹಾಪ್ರಕಾಶವಿರುವ ಭಗವದಂಗಗಳ ಸ್ಮರಣದಿಂದಲೇ ತನ್ನ ಅಂಗಗಳಿಗೂ ಯಥಾಯೋಗ್ಯವಾಗಿ ಪ್ರಭೆಯು ಮಾತ್ರ ತೋರುತ್ತದೆ. ಜಗದ್ವ್ಯಾಪ್ತನೆಂದು ಯುಗಪತ್ ಭಗವಂತನ ಸ್ಮರಣೆಯಿಲ್ಲದಿರುವುದರಿಂದ ದ್ಯುವ್ಯಾಪ್ತಿಯಿಲ್ಲ. (ಯುಗಪತ್ ಪ್ರತೀತಗಳಾದ ಗುಣಗಳೇ ಧ್ಯೇಯಗಳು. ಕ್ರಮದಿಂದ ಪ್ರತೀತಗಳಾದವುಗಳು ಜ್ಞೇಯಗಳು ಮಾತ್ರ ಧ್ಯೇಯಗಳಲ್ಲ ) (ಜಗತ್ತಿನ ಸ್ಮೃತಿಯು ಏಕೆ ಇಲ್ಲ ಎಂದರೆ ಅದಕ್ಕಾಗಿಯೇ) ನಾನಾ ಶಕ್ತಿಃ ಎಂದದ್ದು (ಅಂದರೆ ಯೋಗ್ಯತೆಯು ನಾನಾ ವಿಧವಾದುದು. ಅದೇ ಉಪಾಸನಾದಲ್ಲಿ ಪ್ರಯೋಜಕವು. ಫಲಾಪೇಕ್ಷಾ ಇಚ್ಛಾದಿಗಳಲ್ಲ.) ಅಂತಹ ಯೋಗ್ಯತೆಯು ದೇವತೆಗಳಿಗೆ ಇದೆ. ಮನುಷ್ಯರಿಗೆ ಇಲ್ಲ. (ಅಂದರೆ- ದೇವತೆಗಳಿಗೆ ಏಕಕಾಲದಲ್ಲಿ ಸಂಭೃತ್ಯಾದಿ ಗುಣಗಳ ಜ್ಞಾನವಿದೆ. ಮನುಷ್ಯರಿಗೆ ಏಕಕಾಲದಲ್ಲಿ ಇಲ್ಲ.) ಮತ್ತೆ ಕ್ರಮದಿಂದಲೂ ಇತರ ಅಧಿಕಾರಿಗಳಿಗೆ ಯಾವ ರೀತಿಯಿಂದಲೂ ಪ್ರಮಿತಗಳಲ್ಲ. ಇದು ಮೊದಲಾದ ಸತ್ಯಂ ಜ್ಞಾನಮನಂತಂ ಮೊದಲಾದ ಪ್ರಮಾಣಗಳ ಬಲದಿಂದ (ಸಂಭೃತ್ಯಾದಿಗಳು ಸರ್ವೋಪಾಸ್ಯಗಳಲ್ಲ.) ॥ ೧೪ ॥

೧೫ನೇ ಪುರುಷವಿದ್ಯಾಧಿಕರಣದಲ್ಲಿ ಕರ್ತವ್ಯ ಅಕರ್ತವ್ಯ ಕ್ರಿಯೆಗಳು ಕಂಡದರಿಂದ ಸಾರ್ವತ್ರಿಕ ಗುಣೋಪಸಂಹಾರವನ್ನು ಮಾಡಬೇಕೋ ಬೇಡವೋ ಎಂದು ಸಂಶಯವು ಬಂದರೆ ಮಾಡಕೂಡುದು ಎಂದು ಪೂರ್ವಪಕ್ಷವು ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಅಪ್ರಯೋಜನಕತಾ=ಉಪಸಂಹಾರಕ್ಕೆ ಪ್ರಯೋಜನವಿಲ್ಲದಿರುವಿಕೆ, ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.

ಮೂ ॥ (೧) ಕ್ವಚಿದ್ಬಹುಗುಣಾಃ ಕ್ವಚಿದಲ್ಪಗುಣಾಃ ಶ್ರುತಿಷ್ವೇವೋಚ್ಯಂತೇ ಇತ್ಯುಪಸಂಹಾರಸ್ಯಾಪ್ರಯೋಜನಕತೇತಿ ನ ವಾಚ್ಯಂ ॥ (೨) ಸರ್ವೇ ಗುಣಾ ಬ್ರಹ್ಮಣ್ಯೈವ ಹ್ಯುಪಾಸ್ಯಾ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ ಇತಿಶ್ರುತೇಃ। ಸರ್ವಗುಣೋಪಾಸನಸ್ಯಾಪ್ಯಧಿಕಾರಿಣೋಽಭಾವಾದೇಕತ್ರಾಪಿ ಸರ್ವಗುಣಾನುಕ್ತೇರ್ಬಲಾದುಪಸಂಹಾರಾಽನತೇಃ ॥ ೧೫ ॥

ಅ ॥ (೧) ಪುರುಷ ಸೂಕ್ತ ಮೊದಲಾದ ಕೆಲವು ಶ್ರುತಿಗಳಲ್ಲಿ ಬಹುಗುಣಗಳೂ, ಸತ್ಯಂ ಜ್ಞಾನಮನಂತಂ ಬ್ರಹ್ಮ ಇದು ಮೊದಲಾದ ಕೆಲವು ಶ್ರುತಿಗಳಲ್ಲಿ ಅಲ್ಪ ಗುಣಗಳೂ ಹೀಗೆ ಶ್ರುತಿಗಳಲ್ಲಿಯೇ ಹೇಳಲ್ಪಡುತ್ತವೆ. ಹೀಗೆ ಸರ್ವ ಗುಣಗಳ ಉಪಸಂಹಾರಕ್ಕೆ ಪ್ರಯೋಜನಾಭಾವರೂಪ ವೈಯರ್ಥ್ಯವೇ (ಅಂದರೆ ಬಹು ಗುಣಪ್ರತಿಪಾದಕ ಶ್ರುತಿಗಳ ದೆಸೆಯಿಂದ ಮಹಾಗುಣೋಪಾಸಕನಿಗೆ ಉಪಸಂಹಾರವು ಅಲ್ಪಗುಣೋಪಾಸಕನಿಗೆ ಅಲ್ಪಗುಣಪ್ರತಿಪಾದಕ ಶ್ರುತಿಗಳ ದೆಸೆಯಿಂದ ಉಪಸಂಹಾರವು, ಎಂದೇ ಸಾಕು. ಸರ್ವಗುಣೋಪಸಂಹಾರವು ಮಾಡಕೂಡದು. ಆದಕಾರಣ ಉಪಸಂಹಾರಕ್ಕೆ ಪ್ರಯೋಜನವಿಲ್ಲದಿರುವವುದರಿಂದ ಸರ್ವಪರಿಜ್ಞಾನದಿಂದ ಉಪಯೋಗವಿಲ್ಲ, ಎಂದರೆ ಹಾಗೆ ಹೇಳ ಕೂಡದು. (ಏಕೆಂದರೆ ಆನತಿಃ

(ಸರ್ವಗುಣೋಪಸಂಹಾರಕ್ಕೆ ಪ್ರಾಪ್ತಿಯು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಸಮಸ್ತ ಗುಣಗಳೂ ಬ್ರಹ್ಮನಿಂದಲೇ ಉಪಾಸ್ಯಗಳು. ಇತರ ದೇವತೆಗಳಿಂದಲೂ ಉಪಾಸ್ಯಗಳಲ್ಲ. ಎಲ್ಲಾ ಮನುಷ್ಯರಿಂದ ಉಪಾಸ್ಯಗಳಲ್ಲವೆಂದು ಸುತರಾಂ ಸಿದ್ಧ, ಇತ್ಯಾದಿ ಶ್ರುತಿಗಳ ದೆಸೆಯಿಂದ ಸರ್ವಗುಣೋಪಾಸನೆಗೆ ಯೋಗ್ಯನಾದ ಅಧಿಕಾರಿಯೇ ಇಲ್ಲದಿರುವುದರಿಂದ ಒಂದು ಕಡೆಯಲ್ಲಿಯೂ ಅ=ಚೆನ್ನಾಗಿ; ಪೃಥಕ್=ವಿಸ್ತಾರವಾಗಿ, ಸರ್ವ ಗುಣಗಳನ್ನು ಹೇಳದೆ ಇದ್ದುದರಿಂದಲೂ ಅನ್ಯಥಾ ಅನುಪಪತ್ತಿರೂಪವಾದ ಬಲದಿಂದ ಸರ್ವ ಶ್ರುತಿಗಳ ದೆಸೆಯಿಂದಲೂ ಗುಣೋಪಸಂಹಾರವು ಪ್ರಾಪ್ತವಾಗುವುದರಿಂದ (ಅದಕ್ಕಾಗಿ ಸರ್ವಗುಣೋಪಸಂಹಾರ ಜ್ಞಾನಕ್ಕೆ ಉಪಯೋಗವಿದೆ.) ॥ ೧೫ ॥

೧೬ನೇ ವೇಧಾಧಿಕರಣದಲ್ಲಿ ಉಪಾಸ್ಯ ಅನುಪಾಸ್ಯ ಭಗವದ್ಗುಣಗಳನ್ನು ಕಂಡುದರಿಂದ ಅಗ್ನೇತ್ವಚಂ ಯಾತುಧಾನಸ್ಯ ಭಿಂಧಿ' 'ತಂ ಪ್ರತ್ಯಂಚಮರ್ಚಿಷಾऽऽವಿಧ್ಯ ಮರ್ಮನ್'' 'ಪರಾಶೃಣುಹಿ ತಪಸಾ ಯಾತುಧಾನಾನ್' ಇತ್ಯಾದಿ ಶ್ರುತಿಗಳಲ್ಲಿ ಶ್ರುತಗಳಾದ ವೇಧ=(ಛೇದ) ಮೊದಲಾದ ಭಗವದ್ಗುಣಗಳು ಸರ್ವೋಪಾಸ್ಯಗಳೋ, ಅಲ್ಲವೋ ಎಂದು ಸಂದೇಹವು ಬಂದರೆ ಸರ್ವೋಪಾಸ್ಯಗಳೇ ಎಂದು ಪೂರ್ವಪಕ್ಷವು. ಅಲ್ಲವೆಂದು ಸಿದ್ಧಾಂತವು. ಅವಿಶೇಷಿತಾ ಎಂದು ಪೂರ್ವಪಕ್ಷ ನ್ಯಾಯವು. ಅದರಲ್ಲಿ ದುಷ್ಟ ನಿಗ್ರಹವು ಸರ್ವ ಸಜ್ಜನರಿಗೂ ಅಪೇಕ್ಷಿತವಾದ ಪ್ರಯುಕ್ತ ವೇಧಾದಿಗಳು ಸರ್ವರಿಂದಲೂ ಉಪಾಸ್ಯಗಳೆಂದರೆ ಪ್ರಮಾಣ ಬಲ ಎಂದು ಸಿದ್ಧಾಂತ ನ್ಯಾಯವನ್ನು ಭಿಂಧಿ ವಿದ್ಧಿ ಶೃಣುಹಿ ಇದು ಮೊದಲಾದ ಪ್ರಮಾಣ ಬಲದಿಂದ ವೇಧ ಮೊದಲಾಗ ಉಪಾಸನೆಯಿಂದುಂಟಾದ ಫಲವು ಯತ್ಯಾದಿಗಳಿಗೆ ಅಯೋಗ್ಯವಾಗಿರುವುದರಿಂದ ವೇಧಾದಿಗಳು ಸರ್ವೋಪಾಸ್ಯಗಳಲ್ಲ ಎಂದು ಸಿದ್ಧಾಂತವು ॥ ೧೬ ॥

೧೭ನೇ ಹಾನ್ಯಧಿಕರಣದಲ್ಲಿ ಪ್ರಾಪ್ತಫಲತ್ವ ಕ್ರಿಯಾಂತರ ಶ್ರುತಿ ಇವುಗಳಿಂದ ಮುಕ್ತನು ಭಗವದುಪಾಸನೆಯನ್ನು ಮಾಡುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ ಮಾಡುವುದಿಲ್ಲವೆಂದು ಪೂರ್ವಪಕ್ಷವು, ಮಾಡುತ್ತಾನೆಂದು ಸಿದ್ಧಾಂತವು. ಅದರಲ್ಲಿ ಅತಿಪ್ರಸಂಗಃ=(ಮೋಕ್ಷದಲ್ಲಿಯೂ ಉಪಾಸನೆಯು ಇರುವುದಾದರೆ ಅಲ್ಲಿಯೂ ಫಲಾದಿಗಳೂ ಕೂಡ ಬರಬೇಕಾಗುವದು,) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಪೂ ॥ (೧) ನ ಚ ಮುಕ್ತಾವುಪಾಸನಾಭಾವೇ ಫಲಾದಿಕಮಪಿ ಸ್ಯಾದಿತ್ಯತಿಪ್ರಸಂಗಃ ॥ (೨) ಉಪಾಸನಾಯಾಃ ಸಂಸ್ಕಾರಾಖ್ಯಕಾರಣಸ್ಯ ಸತ್ತ್ವಾತ್ ॥ (೩) ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ ॥ ಇತ್ಯವೃದ್ಧಿಪ್ರಮಾಣಭಾವಾಚ್ಚ. ॥ ೧೭ ॥

ಅ ॥ (೧)ಮುಕ್ತಿಯಲ್ಲಿಯೂ ಉಪಾಸನೆಯು ಇರುವುದಾದರೆ ಪ್ರಯೋಜನವೂ ಅಪೂರ್ಣತ್ವಾದಿಗಳೂ ಬರಬೇಕಾಗುವವು. (ಅಂದರೆ (1) ಉಪಾಸನೆಯು ವಿಹಿತವಾದ ಪ್ರಯುಕ್ತ ಮುಕ್ತನು ಮಾಡುವುದೋ, ವಿಹಿತವಾಗದೇನೇ ಮಾಡುವುದೋ, ಎರಡು ಕಲ್ಪಗಳೂ ಕೂಡುವುದಿಲ್ಲ. ಫಲವೂ ಪ್ರಾಪ್ತವಾಗಬೇಕಾಗುವುದು. ಅಂದರೆ ಮುಕ್ತಿಯಲ್ಲಿ ಉಪಾಸನಾ ಮಾಡುವುದಕ್ಕಿಂತ ಪೂರ್ವದಲ್ಲಿ ಅಂದರೆ ಮುಕ್ತಿ ಕಾಲದಲ್ಲಿಯೇ ಮುಂದೆ ಮಾಡುವ ಉಪಾಸನಾ ಫಲವಿಲ್ಲದಿದ್ದ ಪ್ರಯುಕ್ತ ಅಪೂರ್ಣತ್ವವು ಬರಬೇಕಾಗುವುದು. (2) ಮತ್ತು ವಿಹಿತವಾಗಿರುವುದರಿಂದ ಮುಕ್ತಿಯಲ್ಲಿಯೂ ಉಪಾಸನೆಯನ್ನು ಮಾಡುವುದೆಂದಾದರೆ ಮೋಕ್ಷದಲ್ಲಿಯೂ ವಿಧಿಬದ್ಧತ್ವವು ಬರಬೇಕಾಗಿರುವುದರಿಂದ ಮೋಕ್ಷಕ್ಕೂ ಸಂಸಾರ ಸಮಾನ ಧರ್ಮವು ಬರಬೇಕಾಗುವುದು. (3) ವಿಹಿತವಾಗದೇನೇ ಮಾಡುವುದೆಂದಾದರೆ ಅವಿಹಿತವಾದಪ್ರಯುಕ್ತವೇ ಉಪಾಸನಾಕ್ಕೆ ಕರ್ತವ್ಯತ್ವವು ಕೂಡುವುದಿಲ್ಲ ಏವಂಚ) ಅತಿಪ್ರಸಂಗವು ಬರುವುದರಿಂದ ಮುಕ್ತಿಯಲ್ಲಿ ಉಪಾಸನೆಯನ್ನು

ಮಾಡಕೂಡದು. ಎಂದರೆ ಹಾಗೆ ಹೇಳ ಕೂಡದು. (೨) (ಏಕೆಂದರೆ) **ಕಾರಣಂ**=(ಫಲವಿಲ್ಲದಿದ್ದರೂ ಸಂಸ್ಕಾರಾಖ್ಯ ಕಾರಣವು.) ಎಂದು ಹೇಳಿದ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಉಪಾಸನೆಗೆ ಸಂಸ್ಕಾರವೆಂಬ ಕಾರಣವು ಇದ್ದುದರಿಂದ ಮುಕ್ತಿಯಲ್ಲಿಯೂ ಉಪಾಸನೆಯು ಇದೆ. (ಅಂದರೆ-ಮೋಕ್ಷದಲ್ಲಿ ಉಪಾಸನೆಯು ವಿಹಿತವಾಗದಿದ್ದರೂ ಮುಕ್ತನು ಉಪಾಸನೆಯನ್ನು ಮಾಡುತ್ತಾನೆ. ಮೊದಲು ಕ್ಲೃಪ್ತವಾದ ಉಪಾಸನೆಯ ಸಂಸ್ಕಾರದಿಂದಲೇ ಉಪಾಸನವನ್ನು ಮಾಡುತ್ತಾನೆಂಬುವುದು ಉಪಪನ್ನವಾಗುತ್ತದೆ. ಇಲ್ಲಿ ಸಂಸ್ಕಾರವೆಂದರೆ— ಸ್ವಭಾವ ವಿಶೇಷವೇ, ಅನುಭವದಿಂದ ಹುಟ್ಟತಕ್ಕ ಸ್ಮೃತಿಯನ್ನು ಹುಟ್ಟಿಸುವ ಗುಣವಲ್ಲ. ಏಕೆಂದರೆ ಮುಕ್ತರಲ್ಲಿ ಅಂತಹುದು ಇರಲಾರದು.) (೩) (ಮುಕ್ತಿಯಲ್ಲಿ ಉಪಾಸನೆಯು ಇದ್ದರೆ ಫಲವಾಗಬೇಕಾಗುವುದು ಎಂದರೆ) ಮೋಕ್ಷವನ್ನು ಹೊಂದಿ ಕ್ಷೀಣನಾಗುವುದಿಲ್ಲ- ವೃದ್ಧಿಯನ್ನು ಹೊಂದುವುದಿಲ್ಲ,ಎಂದು ವೃದ್ಧಿಯಿಲ್ಲ, ಹಾನಿಯಿಲ್ಲ ಎಂದು ಪ್ರಮಾಣವಿದ್ದ ಪ್ರಯುಕ್ತ. ಮುಕ್ತಿಯಲ್ಲಿಯೂ ಉಪಾಸನೆಯು ಇದೆ. (ಆ ಉಪಾಸನೆಯು ಫಲರೂಪವಾದುದೇ ಸಾಧನರೂಪವಲ್ಲ, ಆದಕಾರಣ ಆಗಾಗ ಬರತಕ್ಕ ಅನಿಷ್ಟ ಪರಿಹಾರಕ್ಕಾಗಿ ಆಗಲೀ ಆನಂದಾಭಿವೃದ್ಧಿಗಾಗಿ ಆಗಲೀ ಅಲ್ಲ. ಏವಂಚ ಫಲವಿಲ್ಲದಿದ್ದರೂ ಸಂಸ್ಕಾರಾಖ್ಯ ಕಾರಣವಿದ್ದ ಪ್ರಯುಕ್ತ ಮುಕ್ತಿಯಲ್ಲಿಯೂ ಉಪಾಸನೆಯು ಕೂಡುತ್ತದೆ ) ॥ ೧೭ ॥

೧೮ನೇ ಛಂದಾಧಿಕರಣದಲ್ಲಿ ಮಾಡೋಣ, ಮಾಡದಿರೋಣ, ಇವುಗಳಿಗೆ ವಿರೋಧವಿದ್ದುದರಿಂದ ಮುಕ್ತರು ಉಪಾಸನಾದಂತೆ ನಿಯಮವಾಗಿ ಕರ್ಮವನ್ನು ಮಾಡುತ್ತಾರೋ ಇಲ್ಲವೋ ಎಂದು ಸಂದೇಹವು ಬಂದರೆ ನಿಯಮದಿಂದ ಕರ್ಮವನ್ನು ಮಾಡುತ್ತಾರೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ **ಅದೂರಸಂಶ್ರಯಃ**=(ಕರ್ಮವನ್ನು ಮಾಡುವ ಶಕ್ತಿಯು ಸನ್ನಿಹಿತವಾದ ಕಾರಣ ಕರ್ಮವನ್ನು ಮಾಡುವುದು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಕರ್ಮಕರಣಶಕ್ತೇರಪ್ಯದೂರತ್ವಾತ್ತತ್ಸಂಶ್ರಯನಿಯಮಃ । (೨) ಉಪಾಸನಾಖ್ಯಕಾರ್ಯೇ ನಿತ್ಯಕೃತಿಸಂಸ್ಕಾರೋ ನ ತಥಾ ಕರ್ಮಣೀತಿ ಕಾರ್ಯವೈಶೇಷ್ಯಾತ್** ॥ ೧೮ ॥

ಅ ॥ (೧) ಕರ್ಮವನ್ನು ಮಾಡುವ ಶಕ್ತಿಯು ಇದ್ದ ಪ್ರಯುಕ್ತ ಮುಕ್ತಿಯಲ್ಲಿಯೂ ಕರ್ಮವನ್ನು ನಿಯಮದಿಂದ ಮಾಡಲೇಬೇಕು. (ಶಕ್ತಿಯು ಇದ್ದರೂ ಕರ್ಮವನ್ನು ಮಾಡಲೇಬೇಕೆಂದು ನಿಯಮವಿಲ್ಲವಿದ್ದರೆ ಉಪಾಸನೆಗೂ ನಿಯಮವಿಲ್ಲವೆಂದಾಗಬೇಕಾಗುವುದು. ಆದಕಾರಣ ಕರ್ಮವನ್ನು ನಿಯಮದಿಂದ ಮಾಡಲೇಬೇಕು, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ- **ಕಾರ್ಯವೈಶೇಷ್ಯಂ** (ಉಪಾಸನಾಮಾಡಲಿಕ್ಕೆ ಸಂಸ್ಕಾರಾಖ್ಯ ಕಾರಣವಿದೆ, ಕರ್ಮಮಾಡಲಿಕ್ಕೆ ಅಂತಹ ಕಾರಣವಿಲ್ಲ, ಎಂಬ ಕಾರ್ಯವೈಶೇಷ್ಯ) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಉಪಾಸನೆಯನ್ನು ಸದಾ ಮಾಡುತ್ತಿದ್ದುದರಿಂದ ಉಪಾಸನಾಖ್ಯ ಕಾರ್ಯದಲ್ಲಿ ಸಂಸ್ಕಾರವಿದೆ. ಕರ್ಮದಲ್ಲಿ ಹಾಗೆ ಸಂಸ್ಕಾರವಿಲ್ಲ. (ಹೀಗೆ ಸಂಸ್ಕಾರಾಖ್ಯಕಾರಣ ಇರುವುದು, ಕಾರಣವಿಲ್ಲದಿರುವುದೆಂಬ ವಿಶೇಷವಿದ್ದುದರಿಂದ ಮುಕ್ತರಿಗೆ ಕರ್ಮಮಾಡಬೇಕೆಂಬ ನಿಯಮವಿಲ್ಲ.) ಸದ್ಬ್ರಾಹ್ಮಣನಿಗೆ ನಿತ್ಯದಲ್ಲಿಯೂ ಅಭ್ಯಾಸ ಮಾಡುತ್ತಿರುವ ವೇದದ ಸಂಸ್ಕಾರವಿದ್ದಂತೆ ಅಂಗಡಿಯ ವಾರ್ತಾ ಸಂಸ್ಕಾರದಲ್ಲಿಯೂ ನಿಯಮವು ಇಲ್ಲವಷ್ಟೆ.) ॥ ೧೮ ॥

೧೯ನೇ ಅನಿಯಮಾಧಿಕರಣದಲ್ಲಿ ಜ್ಞಾನಾದಿಗಳು ಜ್ಞಾನಸಾಧಕಪ್ರಾಪ್ಯಗಳಾಗಿಯೂ ಅಪ್ರಾಪ್ಯಗಳಾಗಿಯೂ ಕಂಡದರಿಂದ ಮೋಕ್ಷರೂಪವಾದ ಫಲವೂ ಸರ್ವಜ್ಞಾನಿಗಳಿಂದಲೂ ಪ್ರಾಪ್ಯವೋ, ಅಥವಾ ಕೆಲವರಿಗೆ ಮಾತ್ರ ಪ್ರಾಪ್ಯ, ಕೆಲವರಿಗೆ ಪ್ರಾಪ್ಯವಲ್ಲ, ಎಂಬ ನಿಯಮವಿದೆಯೋ, ಎಂದು ಸಂದೇಹವು ಬಂದರೆ

ಕೆಲವರಿಗೇನೇ ಹೊಂದಲು ಶಕ್ಯವು ಎಂದು ನಿಯಮವು ಎಂದು ಪೂರ್ವಪಕ್ಷವು. ಸರ್ವಜ್ಞಾನಿಗಳಿಗೂ ಹೊಂದಲು ಶಕ್ಯವೇ, ಎಂದು ಸಿದ್ಧಾಂತವು. ಅದರಲ್ಲಿ ವಿಶಿಷ್ಟಕಾರಣಂ=(ಅಯೋಗ್ಯತಾರೂಪವಾದ ವಿಶಿಷ್ಟ ಕಾರಣವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚಾ(ಚ)ಯೋಗ್ಯತಾಖ್ಯವಿಶಿಷ್ಟಕಾರಣಾಜ್ಜ್ಞಾನಿಷ್ವಪಿ ಕೇಷಾಂಚಿನ್ಮೋಕ್ಷೋ ನ ಭವತೀತಿ ನಿಯಮಃ | (೨) ಜ್ಞಾನಿನಾಂ ಮೋಕ್ಷಂ ದದಾತ್ಯೇವೇತೀಶಸ್ವಭಾವಾತ್ ಅಯೋಗ್ಯಾನಾಂ ಜ್ಞಾನಸ್ಯೈವಾನುತ್ಪತ್ತ್ಯುಪಪತ್ತೇಃ || ೧೯ ||

ಅ || (೧) ಅಯೋಗ್ಯತಾರೂಪವಾದ ವಿಶಿಷ್ಟಕಾರಣವು ಇದ್ದ ಪ್ರಯುಕ್ತ ಜ್ಞಾನಿಗಳಲ್ಲಿಯೂ ಕೂಡ ಕೆಲವರಿಗೆ ಮೋಕ್ಷವು ಆಗುವುದಿಲ್ಲ. (ಕೆಲವರಿಗೆ ಮೋಕ್ಷವಾಗುತ್ತದೆ. ಆದಕಾರಣ ನಿಶ್ಶಂಕೆಯಾಗಿ ಉಪಾಸನಾ ಮಾಡಕೂಡದು.) ಎಂದರೆ ಹಾಗೆ ಹೇಳಕೂಡದು. (೨)(ಏಕೆಂದರೆ-ಸ್ವಭಾವಃ=(ಶ್ರೀಹರಿಯುಜ್ಞಾನಿಗಳಿಗೆಲ್ಲಾ ಮೋಕ್ಷವನ್ನು ಕೊಡುತ್ತಾನೆನ್ನುವುದು ಸ್ವಭಾವವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಶ್ರೀಹರಿಯು ಜ್ಞಾನಿಗಳಿಗೆಲ್ಲಾ ಮೋಕ್ಷವನ್ನು ನಿಶ್ಚಯವಾಗಿಯೂ ಕೊಡುತ್ತಾನೆ. ಎನ್ನುವುದು ಶ್ರೀಹರಿಯ ಸ್ವಭಾವವು. (ಅಂದರೆ 'ಯಸ್ಯ ಪ್ರಸಾದಾತ್'ಎಂಬ ಶ್ರುತಿಯಿಂದ ಪ್ರಸನ್ನನಾದ ಶ್ರೀಹರಿಯೇ ಮೋಕ್ಷಕ್ಕೆ ಅಂತಿಮ ಕಾರಣನು. ಈಶ್ವರಪ್ರಸಾದವು ಅಪರೋಕ್ಷ ಜ್ಞಾನದಿಂದಲೇ ಉಂಟಾಗುತ್ತದೆ. ತಥಾಚ ಅಪರೋಕ್ಷ ಜ್ಞಾನಿಗಳಿಗೆಲ್ಲರಿಗೂ ಈಶ್ವರಪ್ರಸಾದರೂಪವಾದ ಅಂತಿಮಕಾರಣವಿದ್ದ ಪ್ರಯುಕ್ತ ಮೋಕ್ಷವಾಗಿಯೇ ಆಗುತ್ತದೆ.) ಸ್ವಭಾವತಃ ಮೋಕ್ಷವನ್ನು ಹೊಂದಲು ಅಯೋಗ್ಯರಾದವರಿಗೆ ಜ್ಞಾನವೇ ಹುಟ್ಟುವುದಿಲ್ಲ, ಎಂಬುವುದು ಉಪಪನ್ನವಾಗುತ್ತದೆ.(ತಥಾ ಚ ಶ್ರೀಹರಿಯು ಸ್ವಭಾವದಿಂದಲೇ ಎಲ್ಲಾ ಜ್ಞಾನಿಗಳಿಗೂ ಮೋಕ್ಷವನ್ನು ಕೊಡುವ ಕಾರಣ ಎಲ್ಲರೂ ಸಂದೇಹವಿಲ್ಲದೆ ಉಪಾಸನಾವನ್ನು ಮಾಡಲೇ ಬೇಕು. || ೧೯ ||

೨೦ನೇ ಯಾವದಧಿಕರಣದಲ್ಲಿ ಉಪಾಸನೆಗೆ ಅಧಿಕಾರಿ ನಿಯಮವನ್ನು ಹೇಳಿದೆ. ಲೌಕಿಕ ಕ್ರಿಯೆಯಲ್ಲಿ ಅಧಿಕಾರಿ ನಿಯಮವು ಕಾಣುವುದಿಲ್ಲ. ಆದಕಾರಣ ಪರಬ್ರಹ್ಮನನ್ನುಪಾಸನಾ ಮಾಡುವವರು ಉಪಾಸನಾಧಿಕಾರ ನಿಯಮವುಳ್ಳವರೋ, ಅಲ್ಲವೋ, ಎಂದು ಸಂದೇಹವು ಬಂದರೆ-ನಿಯಮವುಳ್ಳವರಲ್ಲವೆಂದು ಪೂರ್ವಪಕ್ಷವು. ಅಧಿಕಾರ ನಿಯಮವುಳ್ಳವರೆಂದು ಸಿದ್ಧಾಂತವು. ಅದರಲ್ಲಿ ಚೇಷ್ಟಾ=(ಪ್ರಯತ್ನಾನುಸಾರವಾಗಿಯೇ ಆನಂದತಾರತಮ್ಯವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಪ್ರಯತ್ನಾನುಸಾರಿಣೋ ಮುಕ್ತಾನಾಧಿಕಾರಿಕಾನಂದಾದಯಃ (೨)ಅಧಿಕಾರಾನುಸಾರಿತ್ವಾತ್ಪ್ರಯತ್ನಸ್ಯ ಕಥಂಚಿದಧಿಕ ಪ್ರಯತ್ನೇ ತತ್ಸಾಧನಾದಿವಸ್ತೂನಾಂ ದೂಷಣಪ್ರಾಪ್ತೇಃ || (೩)ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್ || ಇತಿ ವಚನಾಚ್ಚ || ೨೦ ||

ಅ || ಮುಕ್ತಿಯಲ್ಲಿ ಅಧಿಕಾರದಲ್ಲಿರತಕ್ಕ ಬ್ರಹ್ಮಾದಿಗಳ ಆನಂದ ಮೊದಲಾದವುಗಳು ಪ್ರಯತ್ನವನ್ನು ಅನುಸರಿಸಿಕೊಂಡಿರುವವುಗಳು. (ಅಂದರೆ—ಅಧಿಕಾರಿಗಳಾದ ಬ್ರಹ್ಮಾದಿಗಳಿಗೆ ಮುಕ್ತಿಯಲ್ಲಿ ಆನಂದಾದಿಗಳು ಉಪಾಸನಾದಿರೂಪವಾದ ಪ್ರಯತ್ನವನ್ನು ಅನುಸರಿಸಿಕೊಂಡೇ ಇರುವವುಗಳು. ಹೀಗೆ ಪ್ರಯತ್ನಾನುಸಾರವಾಗಿಯೇ ಆನಂದಾದಿಗಳ ತಾರತಮ್ಯವು ಕೂಡುವುದರಿಂದ ಅಧಿಕಾರಿ ನಿಯಮವಿಲ್ಲ. ಆದ ಪ್ರಯುಕ್ತ ಪ್ರಾಪ್ತೇಶ್ಚ ಸಮಂಜಸಂ ಇತ್ಯಾದಿಗಳು ಅಯುಕ್ತವು.ಆದುದರಿಂದ ಪ್ರಯತ್ನರೂಪವಾದ ಚೇಷ್ಟೆಯು ಅಧಿಕ

ಆನಂದ ಪ್ರಾಪ್ತಿಗೆ ಕಾರಣವುಎಂದರೆ ಹಾಗೆಹೇಳಕೂಡದು.(೨) (ಏಕೆಂದರೆ ವಸ್ತುದೂಷಣಂ=(ಪ್ರಯತ್ನದ ಸಾಧನಾದಿ ವಸ್ತುಗಳಿಗೆ ದೂಷಣವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಪ್ರಯತ್ನರೂಪವಾದ ಚೇಷ್ಟೆಯು ಅಧಿಕಾರವನ್ನನುಸರಿಸಿಕೊಂಡಿರುವುದು. (ಅಧಿಕಾರ ನಿಯಮವನ್ನಂಗೀಕರಿಸದಿದ್ದರೆ ಪ್ರಯತ್ನವೇ ಸಿದ್ಧವಾಗಲಾರದು. ಅಧಿಕಾರವನ್ನನುಸರಿಸಿರುವುದಾದರೆ—ಮುಕ್ತಿಯಲ್ಲಿ ಆನಂದ ತಾರತಮ್ಯವು ಸಿದ್ಧಿಸುವುದು.) ಕಥಂಚಿತ್ ಪ್ರಯತ್ನವು ಅಧಿಕವಾದರೆ—ಪ್ರಯತ್ನದ ಸಾಧನಾದಿ ವಸ್ತುಗಳಿಗೆ ದೋಷವು ಪ್ರಾಪ್ತವಾಗುವುದು. (೩) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ) ತಂತಮ್ಮ ಅಧಿಕಾರಕ್ಕಿಂತ ಹೆಚ್ಚು ಯತ್ನವು ಪ್ರಾಯಶಃ ಕೂಡುವುದಿಲ್ಲ. ಕಥಂಚಿತ್ ಯತ್ನವು ಅಧಿಕವಾದರೆ ಯಾವುದಾದರೂ ದೋಷವು, ಬರುವುದು, ಎಂಬ ಪ್ರಮಾಣದಿಂದ (ಅಧಿಕಾರಕ್ಕಿಂತ ಪ್ರಯತ್ನವು ಅಧಿಕವಾದರೆ ವಸ್ತುವು ದೂಷಿತವಾಗುವ ಪ್ರಯುಕ್ತ ಉಪಾಸನಾದಲ್ಲಿ ಅಧಿಕಾರನಿಯಮವಿದ್ದ ಕಾರಣ ಹಿಂದೆ ಹೇಳಿದ್ದು ಯುಕ್ತವು. ॥ ೨೦ ॥

೨೧ನೇ ಇಯದಾಮನನಾಧಿಕರಣದಲ್ಲಿ ಇದ್ದ ವಸ್ತುಗಳಲ್ಲಿಯೂ ಇಲ್ಲದಿದ್ದ ವಸ್ತುಗಳಲ್ಲಿಯೂ ಅನುಕ್ತಿಯು ಸಾಧಾರಣವಾಗಿ ಕಂಡುದರಿಂದ ಉಪಾಸನಾಧಿಕಾರಿಗಳು ಪ್ರಾಣಪರ್ಯಂತವಾಗಿಯೇ ಇರುವರೋ, ಅಲ್ಲವೋ ಎಂದು ಸಂದೇಹವು ಬಂದರೆ-ಅಲ್ಲವೆಂದು ಪೂರ್ವಪಕ್ಷವು. ಮುಖ್ಯಪ್ರಾಣ ಪರ್ಯಂತವಾಗಿಯೇ ಇರುವವರೆಂದು ಸಿದ್ಧಾಂತವು. ಅದರಲ್ಲಿ ದೃಷ್ಟವೈರೂಪ್ಯಂ=(ಒಬ್ಬರಿಂದೊಬ್ಬರು ಉತ್ತಮರು ಕಂಡುದರಿಂದ ಮುಖ್ಯಪ್ರಾಣನಿಗಿಂತ ಉತ್ತಮನಿಲ್ಲದಿದ್ದರೆ ಲೋಕದಲ್ಲಿ ದೃಷ್ಟವಾದುದಕ್ಕೆ ವಿರೋಧವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚೈಕಸ್ಮಾದೇಕೋ ವಿಶಿಷ್ಟೋ ದೃಷ್ಟ ಏವೇತಿ ಪ್ರಾಣಾದ್ವಿಶಿಷ್ಟಜೀವಾಭಾವೇ ದೃಷ್ಟವೈರೂಪ್ಯಮಿತಿ ದೋಷಃ ॥ (೨) ಯಸ್ಸರ್ವಮವಜಾನೀಯಾದ್ಯತೇ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಂ। ಸ ಪ್ರಾಣಾನವರುದ್ಧೇಮಂ ಮಂತ್ರಮಾವರ್ತಯೀತ ॥ ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ। ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈವಾತಾಯ ಹವಿಷಾ ವಿಧೇಮೇತಿ ॥ (೩) ಸ ಹ್ಯೇಷಾಂ ಭೂತಾನಾಂ ವರಿಷ್ಠೋ ನಹ್ಯಸ್ಮಾತ್ಕಶ್ಚನೋಪರಿ ವಿನಾ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಂ ಇತಿ ಪ್ರತಿಕ್ರಿಯಾ ವಿಧಾನಾದವಿರೋಧಾತ್ ॥ ೨೧ ॥**

ಅ॥ (೧) ಒಬ್ಬನ ದೆಸೆಯಿಂದ ಇನ್ನೊಬ್ಬನು ಉತ್ತಮನು ಕಾಣಲ್ಪಟ್ಟಿರುತ್ತಾನೆ. ಆದ ಕಾರಣ ಮುಖ್ಯಪ್ರಾಣನಿಗಿಂತ ಉತ್ತಮನಾದ ಜೀವನು ಇಲ್ಲದಿದ್ದರೆ ಲೋಕದಲ್ಲಿ ಕಂಡದ್ದಕ್ಕೆ ವಿರೋಧವು, ಎಂಬ ದೋಷವು ಬರುವುದು. (ಅಂದರೆ ಪ್ರಾಣಃ ಸ್ವೋತ್ತಮಾಧಿಕಾರಿಕಃ ಜೀವತ್ವಾತ್ ನಾಮಾದಿವತ್=ನಾಮ ವಾಗಾದಿಗಳಂತೆ ಮುಖ್ಯಪ್ರಾಣನೂ ಜೀವನಾದುದರಿಂದ ತನಗಿಂತ ಉತ್ತಮನಾದ ಅಧಿಕಾರಿಯುಳ್ಳವನು, ಏವಂಚ ಮುಖ್ಯಪ್ರಾಣನಿಗಿಂತ ಉತ್ತಮನಾದ ಅಧಿಕಾರಿಯು ಇಲ್ಲವಾದರೆ ದೃಷ್ಟವಾದುದು ವಿರುದ್ಧವಾಗುವುದರಿಂದ ಪ್ರಾಣನಿಗಿಂತ ಶ್ರೇಷ್ಠನಾದ ಜೀವನು ಇದ್ದಾನೆ ಆದಕಾರಣ ಪ್ರಾಣನೇ ಸರ್ವ ಗುಣಗಳ ಉಪಾಸನೆಗೆ ಯೋಗ್ಯನು ಎನ್ನುವುದು ಆಯುಕ್ತವು ಎಂದರೆ) ಹಾಗೆ ಹೇಳಕೂಡದು. (೨) ಏಕೆಂದರೆ **ಪ್ರತಿಕ್ರಿಯಾ ವಿರೋಧಃ** (ಪರಿಹಾರವನ್ನು ಮಾಡಬೇಕು ಎಂದು ಹೇಳತಕ್ಕ ಶ್ರುತ್ಯಾದಿಗಳಿಂದ ವಿರೋಧವು) ಎಂದು ಹೇಳತಕ್ಕ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಯಾವಾತನು ಶ್ರೀನಾರಾಯಣ ದೇವನನ್ನೂ, ಸರ್ವೋತ್ತಮಳಾದ ಶ್ರೀ ಲಕ್ಷ್ಮೀದೇವಿಯನ್ನೂ, ಹೊರತು ಇತರವಾದ ಮುಖ್ಯಪ್ರಾಣಾದಿ

ಜಗತ್ತನ್ನೂ ತಿರಸ್ಕರಿಸುವನೋ ಹೀಗೆ ಮುಖ್ಯಪ್ರಾಣನಿಗೆ ಅವಮಾನಮಾಡತಕ್ಕವನು ಪ್ರಾಣಾಯಾಮಮಾಡಿ ಮುಖ್ಯಪ್ರಾಣನನ್ನು ಅವಮಾನಮಾಡಿದ್ದಕ್ಕೆ ಪರಿಹಾರ ರೂಪವಾಗಿ ಈ ಮುಂದಿನ 'ಆತ್ಮಾದೇವಾನಾಂ ಎಂಬ ಮಂತ್ರವನ್ನು ಆವೃತ್ತಿಮಾಡಬೇಕು. 'ಈ ಮುಖ್ಯಪ್ರಾಣನು ಎಲ್ಲಾ ದೇವತೆಗಳಿಗೂ ಸ್ವಾಮಿಯು. ಲೋಕಗಳಲ್ಲಿ ಗರ್ಭದಂತೆ ಅಂತರ್ಗತನು. ಯಥೇಷ್ಟವಾಗಿ ಸರ್ವತ್ರ ಸಂಚರಿಸುತ್ತಾನೆ. ಇಂತಹ ವಾಯುವಿನ ಘೋಷಗಳು ಅಂದರೆ ಅಶರೀರವಾಗ್ರೂಪಗಳು ಕೇಳಲ್ಪಡುತ್ತವೆ. ಪ್ರತಿಮೆಯು ಕಾಣಲ್ಪಡುವುದಿಲ್ಲ. ಅಂತಹ ಮುಖ್ಯಪ್ರಾಣನಿಗೋಸ್ಕರ ಹವಿಸ್ಸಿನಿಂದ ಹೋಮಿಸುತ್ತೇವೆ, ಎಂಬ ಮಂತ್ರವು (೩) (ಮುಖ್ಯಪ್ರಾಣನನ್ನು ಅವಮಾನಿಸಿದ್ದಕ್ಕೆ ಪರಿಹಾರರೂಪವಾಗಿ ಈ ಮಂತ್ರವನ್ನು ಏತಕ್ಕೆ ಜಪಿಸುವುದೆಂದರೆ) ಆ ಮುಖ್ಯಪ್ರಾಣನೇ ಎಲ್ಲಾ ಜೀವರಿಗಿಂತಲೂ ಶ್ರೇಷ್ಠನು. ಶ್ರೀ ನಾರಾಯಣನನ್ನು ಶ್ರೀ ಲಕ್ಷ್ಮೀದೇವಿಯನ್ನು ಬಿಟ್ಟು ಈ ಮುಖ್ಯ ಪ್ರಾಣನಿಗಿಂತ ಯಾವನೊಬ್ಬನೂ ಶ್ರೇಷ್ಠನು ಇಲ್ಲವೇ ಇಲ್ಲ. ಎಂದು ಒಬ್ಬ ಜೀವನಿಂದ ಇನ್ನೊಬ್ಬ ಜೀವನು ಉತ್ತಮನು ಇದ್ದಾನೆನ್ನುವ ನ್ಯಾಯಕ್ಕೆ ಪರಿಹಾರವನ್ನು ವಿಧಿಸತಕ್ಕ ಶ್ರುತಿಗಳಿಂದಲೂ 'ಅನಾವೃತ್ತಿರ್ದೇಹಿನಾಂ ದೇಹಪಾತೇ ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ' ಎಂದು ಭಾರತೋಕ್ತನ್ಯಾಯ, 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಇತ್ಯಾದಿ ಶ್ರುತಿ ಇವುಗಳಿಂದ ವಿರೋಧವು ಬರುವುದು. (ಏವಂಚ ಪರಿಹಾರಾದಿಗಳನ್ನು ಮಾಡಬೇಕು, ಎಂದು ಹೇಳತಕ್ಕ ಶ್ರುತ್ಯಾದಿಗಳಿಂದ ವಿರೋಧವು ಬರುವುದರಿಂದ ಮುಖ್ಯಪ್ರಾಣನೇ ಸಮಸ್ತ ಅಧಿಕಾರಿಗಳಲ್ಲಿ ಉತ್ತಮನು, ಆತನೇ ಸಮಸ್ತ ಗುಣಗಳಿಂದಲೂ ಶ್ರೀಹರಿಯನ್ನುಪಾಸನಾ ಮಾಡಲಿಕ್ಕೆ ಯೋಗ್ಯನು.) ॥ ೨೧ ॥

೨೨ನೇ ವ್ಯತಿಹಾರಾಧಿಕರಣದಲ್ಲಿ ಶ್ರೀ ವಿಷ್ಣುವು ಪ್ರಾಣನಿಗಿಂತ ಉತ್ತಮನೋ ಅಲ್ಲವೋ ಎಂದು ಸಂದೇಹವು ಬಂದರೆ ಅಲ್ಲವೆಂದು ಪೂರ್ವಪಕ್ಷವು ಉತ್ತಮನೇ ಎಂದು ಸಿದ್ಧಾಂತವು. ಅದರಲ್ಲಿ ಉನ್ನತಿಃ =(ಸರ್ವೋತ್ಕೃಷ್ಟತ್ವ ಪ್ರತೀತಿಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ಅಸ್ತಿ ಭಗವಃ ಪ್ರಾಣಾದ್ಭೂಯ ಇತಿ ಪ್ರಶ್ನಾದ್ಯಭಾವಾತ್ ಪ್ರಾಣಸ್ಯೈವೋನ್ನತಿಪ್ರತೀತೇರ್ನವಿಷ್ಣೋರಪಿ ತತಃ ಪರತ್ವಮಿತಿ ನ ಮಂತವ್ಯಂ ॥ (೨) ಏಷ ತು ವಾ ಅತಿವದತೀತಿ ವಿಶೇಷಣಾತ್ಪ್ರಶ್ನಪ್ರತಿವಚನ ಪ್ರತಿಸಂಧಾನೋಪಪತ್ತೇಃ ॥ ೨೨ ॥**

ಅ ॥ (೧) ನಾಮವಾಗಾದಿ ಪ್ರಕರಣಗಳಂತೆಯೇ 'ಅಸ್ತಿ ಭಗವಃ ಪ್ರಾಣಾದ್ಭೂಯಃ' ಎಂದು 'ಪ್ರಾಣಾದ್ವಾವ ಭೂಯೋಽಸ್ತಿ' ಎಂದು 'ತನ್ಮೇ ಭಗವಾನ್ ಬ್ರವೀತು' ಎಂದು 'ಸತ್ಯಂ ವಾವ ಪ್ರಾಣಾದ್ಭೂಯಃ=' ಎಂದು ಪ್ರಕರಣ ಭೇದಗಳನ್ನು ಹುಟ್ಟಿಸುವ ಪ್ರಶ್ನಾದಿಗಳು ಇಲ್ಲದಿರುವುದದಿಂದ ಛಾಂದೋಗ್ಯೋಪನಿಷತ್ತಿನಲ್ಲಿ ನಾಮವಾಗಾದಿಗಳಲ್ಲಿ ಆಶಾ ಪರ್ಯಂತ ತಾರತಮ್ಯವನ್ನು ಹೇಳಿ ಆ ಮೇಲೆ ಪ್ರಾಣನಿಗೇನೇ ಅವಳಿಂದಲೂ ಉತ್ತಮತ್ವವನ್ನು ಹೇಳಿದುದರಿಂದಲೂ ಪ್ರಾಣನಿಗಿಂತ ಉತ್ತಮನನ್ನು ಹೇಳದಿರುವುದರಿಂದಲೂ ಪ್ರಾಣನಿಗೇನೇ ಸರ್ವೋತ್ಕೃಷ್ಟತ್ವವು ತೋರುವುದರಿಂದ ಶ್ರೀ ವಿಷ್ಣುವಿಗೂ ಪ್ರಾಣನಿಗಿಂತ ಉತ್ತಮತ್ವವು ಇಲ್ಲ, ಆದಕಾರಣ ಪ್ರಾಣನೇ ಸರ್ವೋತ್ತಮನಾದ ಪ್ರಯುಕ್ತ ಸರ್ವರೂ ಶ್ರೀ ವಿಷ್ಣುವಿನ ಉಪಾಸನೆಯನ್ನು ಮಾಡಕೂಡದು, ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಪ್ರತಿಸಂಧಿಃ= (ಪ್ರಶ್ನೆ ಉತ್ತರಾದಿಗಳ ಅಧ್ಯಾಹಾರವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನಃ ಏವಂ ವಿಜಾನನ್ನತಿವಾದೀ ಭವತಿ ಎಂದು ಹಿಂದಿನ ವಾಕ್ಯದಲ್ಲಿ ಪ್ರಾಣನನ್ನು ಹೇಳುವವನು ಶ್ರೇಷ್ಠ ವಸ್ತುವನ್ನು ಹೇಳತಕ್ಕವನಾದುದರಿಂದ ಆತನಿಗೆ ಅತಿವಾದಿತ್ವವನ್ನು ಮಾತ್ರ ಹೇಳಿ ಏಷ ತು ವಾ ಅತಿ ವದತಿ ಯಸ್ಸತ್ಯೇನಾತಿ ವದತಿ ಎಂದು ಸತ್ಯಾಖ್ಯ ವಿಷ್ಣುರೂಪ ವಸ್ತುವನ್ನು

ಹೇಳುವವನಿಗೆ ಪ್ರಾಣಾತಿವಾದಿಗಿಂತಲೂ ಉತ್ತಮತ್ವದ್ಯೋತಕವಾದ ತು ಶಬ್ದದಿಂದ ವಿಶೇಷಣವಿದ್ದ ಪ್ರಯುಕ್ತ ಪ್ರಶ್ನ ಪ್ರತಿವಚನಾದಿಗಳನ್ನು ಅಧ್ಯಾಹಾರ ಮಾಡಿಕೊಂಡು ಸತ್ಯ ಪದದಿಂದ ಉಕ್ತನಾದ ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳಬೇಕೆಂಬುವುದು ಉಪಪನ್ನವಾಗುತ್ತದೆ. (ಆದಕಾರಣ ಪ್ರಾಣವಾದಿ ಸತ್ಯವಾದಿಗಳಿಗೆ ಭೇದವಿದ್ದ ಪ್ರಯುಕ್ತ ಪ್ರಾಣ ಸತ್ಯರು ಭಿನ್ನರೇ. ಆದುದರಿಂದ ಸತ್ಯ ಪದದಿಂದ ಹೇಳಲ್ಪಟ್ಟ ವಿಷ್ಣುವೇ ಸರ್ವೋತ್ತಮನಾದುದರಿಂದ ಆತನ ಉಪಾಸನೆಯೇ ಯುಕ್ತವು) ॥ ೨೨ ॥

೨೩ನೇ ಸತ್ಯಾಧಿಕರಣದಲ್ಲಿ ಪ್ರಾಣನಿಗಿಂತ ವಿಷ್ಣುವು ಉತ್ತಮನು ಎನ್ನುವಾಗ ಶ್ರೀ ವಿಷ್ಣುವು ಮಾತ್ರ ಉತ್ತಮನು, ವಿಷ್ಣುವಿಗಿಂತ ಇತರರೂ ಉತ್ತಮರು, ಈ ಎರಡಕ್ಕೂ ವಿರೋಧವು ಇಲ್ಲದಿರುವುದರಿಂದ ಪ್ರಾಣನಿಗಿಂತ ಶ್ರೀವಿಷ್ಣು ಒಬ್ಬನೇ ಉತ್ತಮನೋ, ಅಥವಾ ಇತರರೂ ಉತ್ತಮರು ಇದ್ದಾರೋ, ಎಂದು ಸಂದೇಹವು ಬಂದರೆ — ಇತರರೂ ಉತ್ತಮರು ಇದ್ದಾರೆಂದು ಪೂರ್ವಪಕ್ಷವು. ವಿಷ್ಣುವೊಬ್ಬನೇ ಉತ್ತಮನು ಎಂದು ಸಿದ್ಧಾಂತವು. ಅದರಲ್ಲಿ ಅನುಕ್ತೇಃ= (ಸತ್ಯಾದಿಗಳಿಗೆ ಅಭೇದವನ್ನು ಹೇಳದಿರುವಿಕೆ,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಸತ್ಯಾದೀನಾಮಭೇದಾನುಕ್ತೇರನ್ಯತ್ವಂ॥ (೨) ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಂ ಕೃತಿಃ ಪೂರ್ಣಾ, ನಿಷ್ಠಾ ಪೂರ್ಣಾ, ಮತಿಃ ಪೂರ್ಣಾ, ಶ್ರದ್ಧಾ ಪೂರ್ಣಾ, ಸುಖಂ ಪೂರ್ಣಂ ಭೂಮಾ ಪೂರ್ಣೋಽಹಂಪೂರ್ಣ ಆತ್ಮಾಪೂರ್ಣೋನಾತ್ರ ಕಿಂಚಿದೂನಂ ಪೂರ್ಣಮೇವಾಧಸ್ತಾತ್ ಪೂರ್ಣಮುಪರಿಷ್ಟಾತ್ ಪೂರ್ಣಂ ಮಧ್ಯತಃ ಪೂರ್ಣಂ ಸರ್ವತಃ । ತದೇಷ ಶ್ಲೋಕೋ ಭವತಿ । ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥ ಇತಿ ಶ್ರುತೇಃ ಸರ್ವೇಷಾಮನೂನತ್ವಾತ್ ॥ (೩) ಸತ್ಯಾದ್ಯಾಃ ಅಪಮಾತ್ಮಾಂಶಾಃ ಯದ್ಗುಣಾಸ್ಸಮುದೀರಿತಾಃ । ತಸ್ಮೈ ನಮೋ ಭಗವತೇ ಯಸ್ಮಾದೇವ ವಿಮುಚ್ಯತೇ ॥ ಇತಿ ವಚನಾಚ್ಚ ॥ ೨೩ ॥

ಅ ॥ (೧) ಸತ್ಯ ವಿಜ್ಞಾನ ಮತಿ ಶ್ರದ್ಧಾ ನಿಷ್ಠಾ ಕೃತಿ ಸುಖ ಭೂಮಾ ಅಹಂಕಾರ ಆತ್ಮಾ ಇವುಗಳಿಗೆ ಪರಸ್ಪರ ಅಭೇದವನ್ನು ಹೇಳದಿರುವುದರಿಂದ ಪರಸ್ಪರ ಭೇದವೇ ಇದೆ. (ಆದುದರಿಂದ ಸತ್ಯ ಪದದಿಂದ ಮೇಲೆ ಹೇಳಲ್ಪಟ್ಟ ಜ್ಞಾನಾದಿಗಳಿಗೆ ಸತ್ಯಪದವಾಚ್ಯನಾದ ಶ್ರೀವಿಷ್ಣುವಿಗಿಂತ ಉತ್ತಮತ್ವವು ಪ್ರಾಪ್ತವಾಗುವುದರಿಂದ ಪ್ರಾಣನಿಗೆ ಸರ್ವೋತ್ತಮತ್ವವೂ ಶ್ರೀವಿಷ್ಣುವಿಗೆ ನಿರುಪಚರಿತ ಸರ್ವೋತ್ತಮತ್ವವೂ ಯುಕ್ತವಲ್ಲ) ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ— ಅನೂನತಾ= (ಸತ್ಯಾದಿಗಳಿಗೆ ಊನತ್ವವಿಲ್ಲದಿರುವಿಕೆ)ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) 'ಸತ್ಯಂ ಭಗವೋ ವಿಜಿಜ್ಞಾಸೇ' ಎಂದು ಹೇಳಿದ ಸತ್ಯಾಖ್ಯವಿಷ್ಣುವು ಗುಣಪರಿಪೂರ್ಣನು, (ಆ ಗುಣಗಳು ಯಾವವೆಂದರೆ— ಆತನ) ವಿಜ್ಞಾನ ರೂಪವೂ ಪೂರ್ಣವು. ಜಗತ್ಸೃಷ್ಟ್ಯಾದಿ ಕರ್ಮವೂ ಪೂರ್ಣವು. ಸ್ಥಿತಿಯೂ ಪೂರ್ಣವು. ಜ್ಞಾನವೂ ಪೂರ್ಣವು. ಶ್ರದ್ಧೆಯೂ ಪೂರ್ಣವು. ಸುಖವೂ ಪೂರ್ಣವು. ಪೂರ್ಣಸುಖಸ್ವರೂಪವೂ ಪೂರ್ಣವು. ಅಹಮರ್ಥವೂ ಪೂರ್ಣವು. ಆತ್ಮ ಪದಾರ್ಥವೂ ಪೂರ್ಣವು. ಇವುಗಳಲ್ಲಿ ಯಾವುದೊಂದೂ ಅಪೂರ್ಣವಾದುದು ಇಲ್ಲವೇ ಇಲ್ಲ....ಕೆಳಗೂ ಪೂರ್ಣವೇ. ಮೇಲೆಯೂ ಪೂರ್ಣವೇ. ಮಧ್ಯದಲ್ಲಿಯೂ ಪೂರ್ಣವೇ. ಸರ್ವತ್ರಾಪಿ ಪೂರ್ಣವೇ. ಆ ವಿಷಯದಲ್ಲಿ ಮುಂದಿನ ಶ್ಲೋಕವು ಸಂಮತಿಯಾಗುತ್ತದೆ ಮೂಲ ರೂಪವೂ ಪೂರ್ಣವು. ಅವತಾರ ರೂಪವೂ ಪೂರ್ಣವು. ಆತನ ಗುಣಗಳೂ ಪೂರ್ಣಗಳೇ. ಆತ

ನಿಗೂ ಆತನ ಗುಣಗಳಿಗೂ ಅಭೇದವೇ. ಪೂರ್ಣವಾದ ಮೂಲ ರೂಪದಿಂದ ಪೂರ್ಣವೇ ಆದ ಅವತಾರ ರೂಪವೂ ಅಭಿವ್ಯಕ್ತವಾಗುತ್ತದೆ. ಪೂರ್ಣವಾದ ಮೂಲ ರೂಪದಿಂದ ಪೂರ್ಣವಾದ ಅವತಾರ ರೂಪವನ್ನು ಅಭಿವ್ಯಕ್ತೀಕರಿಸಿಕೊಂಡರೂ ಮೂಲರೂಪವೂ ಪೂರ್ಣವಾಗಿಯೇ ಇರುತ್ತದೆ, ಎಂಬ ಶ್ರುತಿಯಿಂದ ಎಲ್ಲಾ ಭಗವದ್ರೂಪಗಳೂ ಗುಣಗಳೂ ಅಪೂರ್ಣಗಳು ಅಲ್ಲ, ಪೂರ್ಣಗಳೇ. ಆದಕಾರಣ ಅಭೇದವೇ. (ಅಪೂರ್ಣಗಳು ಅಲ್ಲದಿದ್ದರೆ ಸಮಾನಗಳಾಗಲಿ, ಅಭೇದವೆಂದು ಏಕೆ ಹೇಳಬೇಕು, ಎಂದರೆ— ಪೂರ್ಣಗಳಾದವುಗಳು ಅನೇಕಗಳಿವೆ, ಎಂಬುವುದು ಯುಕ್ತಿವಿರುದ್ಧವಾದ ಪ್ರಯುಕ್ತ ಅವುಗಳಿಗೆ ಅಭೇದವೇ ನ್ಯಾಯ ಪ್ರಾಪ್ತವಾಗಿದೆ. ಪೂರ್ಣಮೇವಾವಶಿಷ್ಯತೇ ಎಂದು ಸ್ಪಷ್ಟವಾಗಿ ಐಕ್ಯವನ್ನು ಶ್ರುತಿಯಲ್ಲಿ ಹೇಳಿದೆ) (೩) (ಸತ್ಯಾದಿಗಳು ಶ್ರೀ ವಿಷ್ಣುವಿನ ಸ್ವರೂಪಗಳೆಂಬ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ಸತ್ಯ ಮೊದಲಾದುದನ್ನು ಆರಂಭಿಸಿ ಅಹಮರ್ಥ, ಆತ್ಮ ಪರ್ಯಂತಗಳಾದುವುಗಳು ಯಾವ ಶ್ರೀ ಹರಿಯ ಗುಣಗಳೆಂದು ಹೇಳಲ್ಪಟ್ಟವೆಯೋ, ಅಂತಹ ಶ್ರೀ ಭಗವಂತನಿಗೆ ನಮಸ್ಕಾರವು. ಯಾವಕಾರಣದಿಂದ 'ಸವಾ ಏಷ ಏವಂ ಪಶ್ಯನ್ನೇವಂ ವಿಜಾನನ್ನಾತ್ಮರತಿಃ' ಇತ್ಯಾದಿಗಳಿಂದ ಅಹಮರ್ಥ ಆತ್ಮಜ್ಞಾನದಿಂದ ಮೋಕ್ಷವು ಶ್ರುತವಾಗುತ್ತದೆ. ಮೋಕ್ಷವು ಭಗವತ್ಪ್ರಸಾದದಿಂದಲೇ. ಆದಕಾರಣದಿಂದಲೂ ಈ ಪ್ರಮಾಣದಲ್ಲಿ ಸ್ಪಷ್ಟವಾಗಿ ಭಗವದ್ಗುಣಗಳೆಂದು ಹೇಳದುದರಿಂದಲೂ ಅಭೇದವೇ ಸಿದ್ಧವಾಗುತ್ತದೆ. (ಏವಂಚ ಸತ್ಯಾದಿಗಳು ಪೂರ್ಣಗಳಾದುದರಿಂದ ಅವುಗಳಿಗೆ ಅಭೇದವೇ. ಆ ಶ್ರೀಹರಿಯು ಪ್ರಾಣನಿಂದ ಉತ್ತಮನೇ) ॥ ೨೩ ॥

೨೪ನೇ ಕಾಮಾಧಿಕರಣದಲ್ಲಿ ಭಗವದುಪಾಸನೆಯಲ್ಲಿ ಅಧಿಕಾರಿಚೇತನರೂ ಅನಧಿಕಾರಿಚೇತನರೂ ಕಂಡದರಿಂದ ಲಕ್ಷ್ಮೀದೇವಿಯು ಅಧಿಕಾರಿಣಿಯೋ, ಅಲ್ಲವೋ, ಎಂದು ಸಂದೇಹವು ಬಂದರೆ–ಅಧಿಕಾರಿಣಿಯು ಎಂದು ಪೂರ್ವಪಕ್ಷವು. ಅಲ್ಲವೆಂದು ಸಿದ್ಧಾಂತವು ಅದರಲ್ಲಿ ಅಪ್ರಯತ್ನತ್ವಂ=(ಲಕ್ಷ್ಮೀದೇವಿಗೆ ಪ್ರಯತ್ನವಿಲ್ಲದಿರುವಿಕೆ,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಶ್ರಿಯೋಽಪ್ರಯತ್ನತ್ವಾದನುಪಾಸನಂ ! ಸಂಸಾರೋವಾ ॥ ನಿತ್ಯಂ ಭಗವದುಪಸ್ಥಿತೇರತಿಪ್ರಿಯತ್ವಾತ್ಸಂಸ್ಕಾರಪಾಟವಾನ್ನಿತ್ಯೋಪಾಸೋಪಪತ್ತೇಶ್ಚ ॥೨೪॥**

ಅ ॥ (೧) ಲಕ್ಷ್ಮೀದೇವಿಯು ನಿತ್ಯಮುಕ್ತಳಾದಪ್ರಯುಕ್ತ ಉಪಾಸನಾದಿಗಳಲ್ಲಿಪ್ರಯತ್ನವಿಲ್ಲದಿರುವುದರಿಂದ ಪ್ರಮಾಣಸಿದ್ಧ ಭಗವದುಪಾಸನೆಯು ಇಲ್ಲವೆಂದಾಗುವುದು. ಪ್ರಯತ್ನವಿದ್ದರೆ ಸಂಸಾರವು ಇರಬೇಕಾಗುವುದು. (ಏವಂಚ ಲಕ್ಷ್ಮೀದೇವಿಗೆ ಪ್ರಯತ್ನವಿಲ್ಲದಿದ್ದರೆ ಭಗವದು ಪಾಸನೆಯು ಇಲ್ಲದೆ ಹೋಗುವುದು. ಹೀಗೆ ಕೃತಾರ್ಥಳಾಗದೆ ಇದ್ದ ಕಾರಣ ಸಂಸಾರವುಳ್ಳವಳಾದುದರಿಂದ ಅಧಿಕಾರವು ಇದ್ದೇ ಇದೆ. ಪ್ರಾಣಪರ್ಯಂತವೇ ಅಧಿಕಾರಿಗಳೆಂದು ಹೇಳಿದ್ದು ಯುಕ್ತವಲ್ಲ, ಎಂದರೆ— ಹಾಗೆ ಹೇಳಕೂಡದು.) (೨) (ಏಕೆಂದರೆ ಸಂಸ್ಕಾರಪಾಟವಂ=(ಸಂಸ್ಕಾರಕ್ಕೆ ಪಟುತ್ವವೂ ನಿತ್ಯಮುಕ್ತತ್ವವೂ.)ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಲಕ್ಷ್ಮೀದೇವಿಯು ಅಸ್ವತಂತ್ರಳಾದಾಗ್ಯೂ ಶ್ರೀ ಪರಮಾತ್ಮನ ಸಮೀಪದಲ್ಲಿಯೇ ಸರ್ವದಾ ಇದ್ದ ಪ್ರಯುಕ್ತ ಶ್ರೀಪರಮಾತ್ಮನಿಗೆ ಅತಿ ಪ್ರೀತಿಪಾತ್ರಳಾಗಿದ್ದಾಳೆ. (ಅತಿಪ್ರಿಯವಾದ ವಸ್ತುವನ್ನು ಸದಾ,ಧ್ಯಾನಿಸುತ್ತಿರುವುದು ಲೋಕದಲ್ಲಿ ಕಂಡದೆ ಲಕ್ಷ್ಮೀದೇವಿಯು ಅನಾದಿಕಾಲಾರಭ್ಯ ಭಗವಂತನನ್ನು ಧ್ಯಾನಿಸಿಕೊಂಡೇ ಇರುತ್ತಾಳೆ. ಆ ಕಾರಣದಿಂದ) ಧ್ಯಾನ ಸಂಸ್ಕಾರವು ಪಟುವಾಗಿರುವುದರಿಂದ ಸರ್ವದಾ ಉಪಾಸನೆಯು ಕೂಡುತ್ತದೆ (ಏವಂಚ ಅತಿ ಪ್ರಿಯಳಾದುದರಿಂದ ನಿತ್ಯ ಮುಕ್ತತ್ವವೂ, ಧ್ಯಾನ ಸಂಸ್ಕಾರಪಾಟವದಿಂದ ಸರ್ವದಾ ಉಪಾಸನೆಯೂಕೂಡುತ್ತದೆ. ಆದಕಾರಣ ಲಕ್ಷ್ಮೀದೇವಿಯು ಅಧಿಕಾರಿಣಿಯು ಅಲ್ಲ. ಅಧಿಕಾರಿಗಳಲ್ಲಿ ಪ್ರಾಣಾವಸಾನವು ಯುಕ್ತವು. ॥ ೨೪ ॥

೨೫ನೇ ನಿರ್ಧಾರಣಾಧಿಕರಣದಲ್ಲಿ ಶ್ರೋತವ್ಯೋ ಮಂತವ್ಯ: ಇತ್ಯಾದಿ ಶ್ರವಣ ವಿಧಿಯು, ಶ್ರವಣ ಮನನ ನಿದಿಧ್ಯಾಸನ ರೂಪವಾದ ಸಮಸ್ತಉಪಾಸನಾ, ವ್ಯಸ್ತೋಪಾಸನಾ ಇವುಗಳಲ್ಲಿ ಸಾಧಾರಣವಾಗಿರುವುದರಿಂದ ಸಮಸ್ತ ಉಪಾಸನೆಯನ್ನು ಮಾಡಬೇಕೋ, ವ್ಯಸ್ತೋಪಾಸನೆಯನ್ನು ಮಾಡಬೇಕೋ, ಎಂದು ಸಂಶಯವು ಬಂದರೆ—ವ್ಯಸ್ತೋಪಾಸನೆಯನ್ನು ಮಾಡಬೇಕೆಂದು ಪೂರ್ವಪಕ್ಷವು. ಸಮಸ್ತೋಪಾಸನೆಯನ್ನು ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿದೃಢಬಂಧಃ=(ಧ್ಯಾನವಿಲ್ಲದೆ ಶ್ರವಣಮನನಮಾತ್ರದಿಂದ ನಿವರ್ತ್ಯವಾಗದಿರುವಜ್ಞಾನಪ್ರತಿಬಂಧವು,)ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾನಿರಾಕರಿಸುತ್ತಾರೆ.

ಮೂ || (೧) ನ ಚ ಬಂಧದಾರ್ಢ್ಯೇ ಶ್ರವಣಾದೀನಾಮಫಲತಾ || ಅನ್ಯಥೋಪಾಸಾಂ ವಿನೈವ ಶ್ರವಣಾದಿಜ್ಞಾನಮಾತ್ರೇಣ ಮುಕ್ತಿರಿತಿ ದೋಷಃ || (೨) ಶ್ರವಣಾದಿತ್ರಯೋತ್ಪನ್ನ ದೃಷ್ಟ್ಯೈವ ಸ್ವೇಚ್ಛಯಾ ಹರಿಃ | ಪ್ರಸನ್ನೋ ಮುಕ್ತಿದೋ ನಿತ್ಯಮನ್ಯಥಾ ನ ಕಥಂಚನೇತಿ ಈಶ್ವರೇಚ್ಛಾನಿಯತಿ ಶ್ರುತೇಃ || ೨೫ ||

ಅ || (೧) ಧ್ಯಾನವಿಲ್ಲದೆ ಕೇವಲಶ್ರವಣ ಮನನಗಳಿಂದ ಅನಿವರ್ತ್ಯವಾದ ಬಂಧವು (ಜ್ಞಾನಪ್ರತಿಬಂಧವು) ದೃಢವೆಂದಂಗೀಕರಿಸೋಣ ಆವಶ್ಯಕವಾದ ಧ್ಯಾನದಿಂದಲೇ ಬಂಧವು ನಿವೃತ್ತಿಯಾಗಿ ಅಪರೋಕ್ಷ ಜ್ಞಾನವು ಹುಟ್ಟುವುದರಿಂದ ಶ್ರವಣಾದಿಗಳಿಗೆಲ್ಲಾ ವೈಯರ್ಥ್ಯವೇ. ಬಂಧವು ದೃಢವಾಗದಿದ್ದರೆ ಧ್ಯಾನ ರೂಪವಾದ ಉಪಾಸನಾವಿಲ್ಲದೇನೇ ಶ್ರವಣಾದಿಗಳ ಜ್ಞಾನಮಾತ್ರದಿಂದಲೇ ಮುಕ್ತಿಯಾಗಬೇಕಾಗುವುದು. (ಆದಕಾರಣ ಬಂಧವು ದೃಢವೆಂದು ಅವಶ್ಯವಾಗಿ ಹೇಳಬೇಕು. ದೃಢವೆಂದಾದರೆ ಯಾವುದರಿಂದಲೂ ಭೇದಿಸಲಿಕ್ಕೆ ಅಶಕ್ಯವು. ಏವಂಚ ಸ್ಥಿರಬಂಧವು ದೃಢವಾಗಿರುವುದರಿಂದ ಧ್ಯಾನದಿಂದಲೇ ಅಪರೋಕ್ಷಜ್ಞಾನವು ಹುಟ್ಟುವುದರಿಂದ ಶ್ರವಣಾದಿಗಳು ವ್ಯರ್ಥಗಳಾಗಿರುವುದರಿಂದ ಉಪಾಸನೆಯು ವ್ಯರ್ಥವೇ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ-ಸ್ವೇಚ್ಛಾನಿಯತಿಃ=(ಈಶ್ವರೇಚ್ಛೆಗೆ ನಿಯಮನವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಶ್ರೀಹರಿಯು ಶ್ರವಣ ಮನನ ನಿದಿಧ್ಯಾಸನಗಳೆಂಬ ಮೂರರಿಂದ ಹುಟ್ಟಿದ ಅಪರೋಕ್ಷ ಜ್ಞಾನದಿಂದಲೇ ತನ್ನ ಇಚ್ಛೆಯಿಂದ ಪ್ರಸನ್ನನಾಗಿ ಮೋಕ್ಷವನ್ನು ಕೊಡುತ್ತಾನೆ. ಬೇರೆ ಯಾವ ಪ್ರಕಾರದಿಂದಲೂ ಮೋಕ್ಷವನ್ನು ಕೊಡಲಾರನು, ಎಂಬ ಶ್ರುತಿಯಿಂದ ಬಂಧವು ಅದೃಢವೇ. ಆದರೂ ಶ್ರವಣ ಮಾತ್ರದಿಂದ ಭೇದಿಸಲಿಕ್ಕೆ ಸರ್ವಥಾ ಅಶಕ್ಯವೇ. ಮತ್ತೆ ಶ್ರವಣಾದಿ ಮೂರರಿಂದ ಹುಟ್ಟಿದ ಅಪರೋಕ್ಷ ಜ್ಞಾನದಿಂದಲೇ ಏನಂ ಮೋಚಯಾಮಿ ಎಂದು ಈಶ್ವರೇಚ್ಛಾನಿಯತಿಯು ಉಕ್ತವಾಗಿರುವುದರಿಂದ ಶ್ರವಣಾದಿಗಳು ಮೂರೂ ಕೂಡ ಅಪೇಕ್ಷಿತವೇ ಆಗಿದೆ (ಶ್ರೋತವ್ಯೋ ಮಂತವ್ಯಃ ಎಂಬ ಶ್ರುತ್ಯರ್ಥ ಪರಿರಕ್ಷಣವೇ ಈಶ್ವರೇಚ್ಛಾನಿಯತಿಗೆ ಮೂಲವು) || ೨೫ ||

೨೬ನೇ ಪ್ರದಾನಾಧಿಕರಣದಲ್ಲಿ ಸಚ್ಛಾಸ್ತ್ರ ಶ್ರವಣಾದಿಗಳನ್ನು ಯಾವ ರೀತಿ ಮಾಡಿದರೂ ಜ್ಞಾನವು ಹುಟ್ಟುತ್ತದೋ, ಅಥವಾ ಗುರುಗಳು ಅನುಗ್ರಹ ಪೂರ್ವಕವಾಗಿ ಉಪದೇಶ ಕೊಟ್ಟರೇನೇ ಜ್ಞಾನವಾಗುತ್ತದೋ ಎಂದು ಸಂದೇಹವು ಬಂದರೆ- ಯಾವ ರೀತಿ ಮಾಡಿದರೂ ಜ್ಞಾನವು ಹುಟ್ಟುತ್ತದೆಂದು ಪೂರ್ವಪಕ್ಷವು. ಗುರುಗಳು ಅನುಗ್ರಹ ಪೂರ್ವಕವಾಗಿ ಉಪದೇಶಕೊಟ್ಟರೇನೇ ಜ್ಞಾನವು ಹುಟ್ಟುತ್ತದೆಂದು ಸಿದ್ಧಾಂತವು. ಅದರಲ್ಲಿ ಪರಾಭವಃ (ಗುರುಗಳ ಅಧೀನವಾದ ಜ್ಞಾನಕ್ಕೆ ತಿರಸ್ಕಾರವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ತಿರಸ್ಕರಿಸುತ್ತಾರೆ.

ಮೂ || (೧) ನ ಚ ಗುರ್ವಧೀನತ್ವೇ ಜ್ಞಾನಮೋಕ್ಷಯೋರ್ಜ್ಞಾನಿನೋsಪಿ ಕದಾಚಿತ್ ಗುರುಕೋಪಾಜ್ಜ್ಞಾನಪರಾಭವೇನಾಮುಕ್ತಿಪ್ರಸಂಗಾನ್ನ ಗುರ್ವಧೀನತ್ವಮಿತಿ || (೨) ಜ್ಞಾನಿನೋ ಗುರುಶಾಪೇsಪಿ ನಾಮುಕ್ತಿಸ್ಸಂಸೃತೇಃ ಕ್ವಚಿತ್ । ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಕೃತೀತಿ ವಚನಾನ್ಮುಕ್ತಿದೂಷಕೇನೈವ ಗುರುಕೋಪಾದೇಃ ಕೃತಾರ್ಥತ್ವಾತ್ || (೩) ಜ್ಞಾನಿನೋ ಬ್ರಹ್ಮವಸ್ತುವೈಭವೇನ ಮುಕ್ತಿಸ್ಸ್ಯಾದಿತಿ ಗುರೋರ್ವರೇಣವಾsಮುಕ್ತ್ಯನುಪಪತ್ತೇಃ || ೨೬ ||

ಅ || (೧) ಜ್ಞಾನ ಉಪಾಸನ ಮೋಕ್ಷಗಳು ಗುರುಗಳ ಅಧೀನಗಳೆಂದಾದರೆ-ಜ್ಞಾನಿಯಾದವನಿಗೂ ಉಪಾಸಕನಿಗೂ ಕದಾಚಿತ್ ಗುರುಗಳ ಕೋಪದಿಂದ ಜ್ಞಾನವು ನಷ್ಟವಾಗಿ ಜ್ಞಾನವು ಇಲ್ಲವೆಂದೂ ಮೋಕ್ಷವಿಲ್ಲವೆಂದೂ ಆಗಬೇಕಾಗಿರುವುದರಿಂದ ಜ್ಞಾನ ಮೋಕ್ಷಗಳು ಗುರುಗಳ ಅಧೀನಗಳಲ್ಲ. (ಏವಂಚ ಜ್ಞಾನಕ್ಕೆ ಗುರುಗಳ ಅಪೇಕ್ಷೆಯಿಲ್ಲದಿರುವುದರಿಂದ ಅವರು ಹೇಳಿದ ಪ್ರಕಾರ ಉಪಾಸನಾ ಮಾಡಕೂಡದು. ಎಂದರೆ— ಹಾಗೆ ಹೇಳಕೂಡದು.) (೨) (ಏಕೆಂದರೆ-ವಸ್ತುವೈಭವಂ=(ಸಾಕ್ಷಾತ್ಕೃತವಾದ ಪರಬ್ರಹ್ಮಾಖ್ಯ ವಸ್ತುವಿನ ಸಾಮರ್ಥ್ಯವೆಂಬ) ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಜ್ಞಾನಿಯಾದವನಿಗೆ ಗುರುವಿನ ಶಾಪವಿದ್ದರೂ ಯಾವಾಗಲೂ ಎಲ್ಲಿಯೂ ಸಂಸಾರದಿಂದ ಬಿಡುಗಡೆಯಿಲ್ಲವೆಂಬುದು ಸರ್ವಥಾ ಇಲ್ಲ. (ಮುಕ್ತಿಯು ಇದ್ದೇ ಇದೆ.) ಆ ಮುಕ್ತಿಯೇ ಆನಂದಹ್ರಾಸರೂಪವಾದ ದೋಷದಿಂದ ದುಷ್ಟವಾಗುತ್ತದೆ. (ಅಂದರೆ ಸ್ವಲ್ಪ ಆನಂದ ಹ್ರಾಸವಾಗುತ್ತದೆ.) ಎಂಬ ವಚನದಿಂದ ಮುಕ್ತಿಯಲ್ಲಿ ಆನಂದಹ್ರಾಸವನ್ನು ತಂದುಕೊಡೋಣದರಿಂದಲೇ ಗುರುಗಳ ಕೋಪಾದಿಗಳು ಚರಿತಾರ್ಥಗಳಾಗುತ್ತವೆ. (೩) ಜ್ಞಾನಿಯಾದವನಿಗೆ ಜ್ಞಾನಾಖ್ಯವಸ್ತುವಿನ ಸಾಮರ್ಥ್ಯದಿಂದ ಸಾಕ್ಷಾತ್ಕೃತನಾದ ಪರಬ್ರಹ್ಮನ ಸಾಮರ್ಥ್ಯದಿಂದ ನಿನಗೆ ಮುಕ್ತಿಯಾಗಲಿ, ಎಂದು ಶಿಷ್ಯನಿಗೆ ಗುರುಗಳ ವರದಿಂದಲಾಗಲೀ, ಅಮುಕ್ತಿಯು ಕೂಡಲಾರದು. (ಮುಕ್ತಿಯು ಆಗುತ್ತದೆ.) (ಏವಂಚ ಬ್ರಹ್ಮಾಖ್ಯ ವಸ್ತುವಿನ ಸಾಮರ್ಥ್ಯದಿಂದ ಜ್ಞಾನಿಗಳಿಗೆ ಮೋಕ್ಷವು ಕ್ಲೃಪ್ತವಾದ ಪ್ರಯುಕ್ತ ಗುರು ಶಾಪಾದಿಗಳು ಅನ್ಯಥಾ ಸಿದ್ಧಗಳಾದರೂ ಫಲದಲ್ಲಿ ಸ್ವಲ್ಪ ಹ್ರಾಸದೋಷವನ್ನು ತಂದು ಕೊಡುವುದರಿಂದ ಗುರೂಪದೇಶವು ಆವಶ್ಯಕವು) || ೨೬ ||

೨೭ನೇ ಲಿಂಗಭೂಯಸ್ತ್ವಾಧಿಕರಣದಲ್ಲಿ ಸಾಧನಗಳಲ್ಲಿ ಕೆಲವು ಕಡೆ ಇತಿಕರ್ತವ್ಯತಾಪ್ರಾಬಲ್ಯವೂ, ಕೆಲವು ಕಡೆ ಸಾಧನ ಪ್ರಾಬಲ್ಯವೂ, ಕೆಲವು ಕಡೆ ಎರಡಕ್ಕೂ ಸಾಮ್ಯವು ಕಂಡದರಿಂದ ಗುರುಪ್ರಸಾದವು ಬಲಿಷ್ಠವೋ, ಅಥವಾ ಶಾಸ್ತ್ರ ಶ್ರವಣಾದಿ ರೂಪವಾದ ಶಿಷ್ಯ ಪ್ರಯತ್ನವು ಬಲಿಷ್ಠವೋ, ಅಥವಾ ಎರಡೂ ಸಮವೋ ಎಂದು ಸಂದೇಹವು ಬಂದರೆ ಶಿಷ್ಯ ಪ್ರಯತ್ನವೇ ಬಲಿಷ್ಠವು, ಅಥವಾ ಎರಡೂ ಸಮಾನವೇ, ಎಂದು ಪೂರ್ವಪಕ್ಷವು. ಗುರು ಪ್ರಸಾದವೇ ಬಲಿಷ್ಠವೆಂದು ಸಿದ್ಧಾಂತವು. ಆದರಲ್ಲಿ ಪುಂಸಾಮ್ಯಂ= (ಪುರುಷತ್ವದಿಂದ ಸಾಮ್ಯವು,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ಶಿಷ್ಯಸ್ಯಾಪಿ ಪುರುಷತ್ವಸಾಮ್ಯಾದ್ಧಾರಣಾದೇಸ್ತತ್ಪ್ರಯತ್ನಸ್ಯ ನ ದೌರ್ಬಲ್ಯಮಿತಿ ನ ಮಂತವ್ಯಂ । (೨) ಗುರುಪ್ರಸಾದೋ ಬಲವಾನಿತ್ಯಾದಿ ವಿಶೇಷೋಪಪತ್ತೇಃ||೨೭||

ಅ || (೧) ಶಿಷ್ಯನಿಗೂ ಪುರುಷತ್ವವು ಸಮಾನವಾದುದರಿಂದ ಧಾರಣಾದಿರೂಪವಾದ ಶಿಷ್ಯಪ್ರಯತ್ನಕ್ಕೆ ದೌರ್ಬಲ್ಯವಿಲ್ಲ. (ಪ್ರಾಬಲ್ಯವು, ಅಥವಾ ಸಾಮ್ಯವು ಬರುವುದು) (ಆದಕಾರಣ ಗುರುಗಳ ಅನುಗ್ರಹ ಪೂರ್ವಕವಾದ ಉಪದೇಶವು ಆವಶ್ಯಕವಲ್ಲ) ಎಂದರೆ ಹಾಗೆ ತಿಳಿಯ ಕೂಡದು. (೨) (ಏಕೆಂದರೆ

ವಿಶೇಷೋಕ್ತಿಃ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) **ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಂ । ತಥಾಹಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ** ॥ ಗುರುಗಳ ಅನುಗ್ರಹವೇ ಬಲಿಷ್ಠವು. ಅದಕ್ಕಿಂತ ಬಲಿಷ್ಠವಾದುದು ಯಾವುದೂ ಇಲ್ಲ. ಆದರೂ ಮೋಕ್ಷಸಿದ್ಧಿಗಾಗಿ ಸಚ್ಛಾಸ್ತ್ರ ಶ್ರವಣಾದಿಗಳನ್ನು ಮಾಡಬೇಕು, ಎಂದು ವಿಶೇಷ ಪ್ರಮಾಣವಿದ್ದ ಪ್ರಯುಕ್ತ ಗುರುಪ್ರಸಾದವೇ ಪ್ರಬಲವು. ಆದಕಾರಣ ಗುರುಗಳ ಉಪದೇಶವು ಆವಶ್ಯಕವು ಎನ್ನುವುದು ಉಪಪನ್ನವು ॥ ೨೭ ॥

೨೮ನೇ ವಿಕಲ್ಪಾಧಿಕರಣದಲ್ಲಿ ಪ್ರಥಮತಃ ಪ್ರಾಪ್ತರಾದ ಗುರುಗಳನ್ನು ಬಿಟ್ಟು ಬೇರೆ ಗುರುಗಳ ಸ್ವೀಕಾರವೂ, ಸ್ವೀಕಾರ ಮಾಡದಿರುವುದೂ ಕಂಡುದರಿಂದ ಪ್ರಥಮತಃ ಪ್ರಾಪ್ತರಾದ ಗುರುಗಳೇ ಎಂದು ನಿಯಮವಿದೆಯೋ ಅಥವಾ ಮೊದಲಿನ ಗುರುಗಳನ್ನು ಬಿಟ್ಟು ಇನ್ನೊಬ್ಬರನ್ನು ಸ್ವೀಕರಿಸಬಹುದೋ ಎಂದು ಸಂದೇಹವು ಬಂದರೆ ಪ್ರಥಮತಃಪ್ರಾಪ್ತರಾದ ಗುರುಗಳೇ ಎಂದು ಪೂರ್ವಪಕ್ಷವು. ಪ್ರಥಮತಃ ಪ್ರಾಪ್ತರಾದ ಗುರುಗಳೇ ಎಂದು ನಿಯಮವಿಲ್ಲ ಎಂದು ಸಿದ್ಧಾಂತವು. ಅದರಲ್ಲಿ ಪ್ರಾಪ್ತಸಂತ್ಯಾಗಃ (ಪ್ರಥಮತಃ ಪ್ರಾಪ್ತರಾದ ಗುರುಗಳ ಪರಿತ್ಯಾಗ ನಿಮಿತ್ತ ದೋಷವು)ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ** ॥ (೧) **ನಚೋತ್ತಮಗುರುಸ್ವೀಕಾರಾರ್ಥತ್ವೇನ ಪ್ರಾಪ್ತಸಂತ್ಯಾಗನಿಮಿತ್ತದೋಷಃ** ॥
(೨) **ತತ್ರ ದೋಷೇ ಮಾನಾಭಾವಾತ್** ॥ ೨೮ ॥

**ಅ** ॥ (೧) ಉತ್ತಮರಾದ ಗುರುಗಳನ್ನು ಸ್ವೀಕಾರ ಮಾಡಬೇಕಾದರೆ ಪೂರ್ವದಲ್ಲಿ ಪ್ರಾಪ್ತರಾದ ಗುರುಗಳನ್ನು ಬಿಡದೆ ಬೇರೆ ಗುರುಗಳನ್ನು ಸ್ವೀಕಾರ ಮಾಡಲಾಗದಿರುವುದರಿಂದ '**ಗುರು ಮಂತ್ರ ಪರಿತ್ಯಾಗೀ ರೌರವಂ ನರಕಂ ವ್ರಜೇತ್** ಎಂಬ ಪ್ರಮಾಣಸಿದ್ಧವಾದ ದೋಷವು ಬರುವುದು. (ಆದುದರಿಂದ ಪ್ರಥಮತಃ ಪ್ರಾಪ್ತರಾದವರೇ ಗುರುಗಳು. ಹೀಗೆ ಸರ್ವಜ್ಞರಾದ ಗುರುಗಳು ಲಭಿಸಿದರೂ ಪ್ರಥಮತಃ ಪ್ರಾಪ್ತರಾದವರನ್ನು ಬಿಡಕೂಡದು. ಆದುದರಿಂದ ಹಿಂದ ಹೇಳಿದ್ದು ಕೂಡುವುದಿಲ್ಲ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ **ಅಮಾನತ್ವಂ**=(ಉತ್ತಮ ಗುರುಗಳನ್ನು ಸ್ವೀಕಾರ ಮಾಡಿದರೆ ದೋಷವದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಥಮತಃ ಪ್ರಾಪ್ತರಾದ ಗುರುಗಳನ್ನು ಬಿಟ್ಟು ಅವರಿಗಿಂತ ಪೂರ್ಣಾನುಗ್ರಹವನ್ನು ಮಾಡತಕ್ಕ ಮೊದಲಿನವರಿಗಿಂತ ಉತ್ತಮರಾದ ಅಥವಾ ಸಮಾನರಾದ ಗುರುಗಳನ್ನು ಸ್ವೀಕಾರ ಮಾಡಿದರೆ ದೋಷವಿದ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ (ಗುರುಮಂತ್ರ ಪರಿತ್ಯಾಗೀ ಎಂಬ ವಚನವು ಅಧಮ ಗುರುಗಳನ್ನು ಸ್ವೀಕಾರಮಾಡಬಾರದು, ಮತ್ತು ಪ್ರಥಮತಃ ಪ್ರಾಪ್ತರಾದ ಗುರುಗಳ ಅನುಜ್ಞೆಯನ್ನು ಪಡೆದುಕೊಳ್ಳದೆ ಸಮಾನ ಗುರುಗಳನ್ನು ಸ್ವೀಕಾರ ಮಾಡಬಾರದು ಎಂದು ವಿಷಯಾಂತರವನ್ನು ಪ್ರತಿಪಾದಿಸುವುದು.) (ಏವಂಚ ಪ್ರಥಮತಃ ಪ್ರಾಪ್ತರಾದ ಗುರುಗಳನ್ನು ಬಿಟ್ಟರೆ ದೋಷವಿದೆ ಎಂಬುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಸರ್ವಜ್ಞ ಗುರುಗಳನ್ನು ಸ್ವೀಕಾರ ಮಾಡುವುದು ಯುಕ್ತವಾದ ಪ್ರಯುಕ್ತ ಅವರ ಉಪದೇಶ ಪ್ರಕಾರ ಉಪಾಸನವು ಯುಕ್ತವು) ॥ ೨೮ ॥

೨೯ನೇ ವಿದ್ಯಾಧಿಕರಣದಲ್ಲಿ ಮಾಡಲರ್ಹ ಕ್ರಿಯೆಗಳೂ ಮಾಡಲು ಅನರ್ಹ ಕ್ರಿಯೆಗಳೂ ಕಂಡದರಿಂದ ಭಗವದುಪಾಸನವನ್ನು ಮಾಡಬೇಕೋ. ಬೇಡವೋ ಎಂದು ಸಂದೇಹವು ಬಂದರೆ ಭಗವದುಪಾಸನೆಯನ್ನು ಮಾಡಕೂಡದೆಂದು ಪೂರ್ವಪಕ್ಷವು. ಮಾಡಲೇಬೇಕೆಂದು ಸಿದ್ಧಾಂತವು. ಅದರಲ್ಲಿ **ಕಾರಣಾನಿರ್ಣಯಃ** (**ಮೋಕ್ಷ ಕಾರಣವು ನಿರ್ಣಯವಾಗದಿರುವಿಕೆ,**) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ವಿದ್ಯಾ ಕರ್ಮವಾ ಸಂಸಾರವೃತ್ತಿಕಾರಣಮಿತಿ ಕಾರಣಾನಿರ್ಣಯಃ ॥ (೨) ನಾನ್ಯಃ ಪಂಥಾ ಅಯನಾಯ ವಿದ್ಯತೇ ಇತ್ಯವಧಾರಣಾತ್ ವಿದ್ಯಾವಚನಸ್ಯ ಪ್ರಾಧಾನ್ಯಾತ್ ॥ ೨೯ ॥

ಅ ॥ (೧) 'ವಿದ್ವಾನಮೃತೋ ಭವತಿ' 'ತರತಿ ಶೋಕಮಾತ್ಮವಿತ್' ಎಂಬ ಶ್ರುತಿಯಿಂದ ವಿದ್ಯೆಯಾಗಲೀ, ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ಎಂಬ ಸ್ಮೃತಿಯಿಂದ ಕರ್ಮವಾಗಲೀ ಸಂಸಾರ ನಿವೃತ್ತಿಗೆ ಕಾರಣವು. ಆದಕಾರಣ ಮೋಕ್ಷಕ್ಕೆ ಇಂತಹುದೇ ಕಾರಣವು ಎಂದು ನಿರ್ಣಯವಾಗದಿರುವುದರಿಂದ (ಜ್ಞಾನಕ್ಕಾಗಿ ಉಪಾಸನೆಯನ್ನು ಮಾಡಬೇಕಾಗಿಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಪ್ರಾಧಾನ್ಯಾತ್=(ವಿದ್ಯಾ ವಚನಕ್ಕೆ ಪ್ರಾಧಾನ್ಯವು)ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ನಾನ್ಯಃ ಪಂಥಾ ಅಯನಾಯ ವಿದ್ಯತೇ ಮೋಕ್ಷಕ್ಕೆ ವಿದ್ಯೆಯು ಹೊರತು ಬೇರೆ ಯಾವ ಮಾರ್ಗವೂ ಇಲ್ಲ, ಎಂದು ಅವಧಾರಣವು ಇದ್ದುದರಿಂದ ವಿದ್ಯೆಯೇ ಮೋಕ್ಷಕ್ಕೆ ಸಾಧನವು, ಎಂಬುವ ವಚನವು ಪ್ರಬಲವಾದ ಕಾರಣ (ವಿದ್ಯೆಯೇ ಮೋಕ್ಷಕ್ಕೆ ಸಾಧನವು ಎಂದು ನಿರ್ಣಯವು ಆಗುವುದರಿಂದ ಕಾರಣವು ನಿರ್ಣಯವಾಗುವುದಿಲ್ಲ ಎಂದು ಇಲ್ಲ. (ಏವಂಚ ಜ್ಞಾನವೇ ಮೋಕ್ಷಕ್ಕೆ ಸಾಧನವಾದ ಕಾರಣ ಅದಕ್ಕಾಗಿ ಉಪಾಸನೆಯನ್ನು ಮಾಡಬೇಕು) ॥ ೨೯ ॥

ಇಂನೇ ಶ್ರುತ್ಯಧಿಕರಣದಲ್ಲಿ ವಾದಿಗಳ ವಿವಾದದಿಂದ ಮೋಕ್ಷವು ಕರ್ಮದಿಂದ ಲಭ್ಯವೋ, ಜ್ಞಾನದಿಂದ ಲಭ್ಯವೋ, ಎಂದು ಸಂದೇಹವು ಬಂದರೆ — ಕರ್ಮದಿಂದ ಲಭ್ಯವೆಂದು ಪೂರ್ವಪಕ್ಷವು. ಜ್ಞಾನದಿಂದಲೇ ಲಭ್ಯವೆಂದು ಸಿದ್ಧಾಂತವು. ಅದರಲ್ಲಿ ಭ್ರಮಃ=(ವಿದ್ಯಾ ವಚನವು ಪ್ರಧಾನವೆಂಬುವುದು ಭ್ರಾಂತಿಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ವಿದ್ಯಾವಚನಸ್ಯ ಪ್ರಾಧಾನ್ಯಂ ಭ್ರಮಃ ॥ (೨) ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ। ಇತಿ ಭಗವತಸ್ತಸ್ಮಿನ್ನೇವಾಧಿಕಪ್ರೀತಿವಚನಾತ್ ॥ (೩) ಯಮೇವೈಷ ವೃಣುತೇ ತೇನ ಲಭ್ಯ ಇತಿ ತತ್ಪ್ರೀತೇರೇವ ಮೋಕ್ಷವಚನಾಚ್ಚ ॥ ೩೦ ॥

ಅ ॥ (೧) (ಶ್ರುತಿ ಸ್ಮೃತಿ ಎರಡರಲ್ಲಿಯೂ ಸಾವಧಾರಣತ್ವವು ಸಮಾನವಾದುದರಿಂದಲೂ ತತ್ರಾಪಿ ಕರ್ಮಣೈವ ಎಂಬ ಸ್ಮೃತಿಯು ಭಗವಂತನ ವಚನವಾದುದರಿಂದ ಪ್ರಬಲವಾದ ಪ್ರಯುಕ್ತವೂ) ನಾನ್ಯಃ ಪಂಥಾಃ ಎಂಬ ವಿದ್ಯಾ ವಚನವು ಪ್ರಧಾನವು ಎಂಬುವುದು ಭ್ರಾಂತಿ ವಿಷಯವು, (ಆದಕಾರಣ ಜ್ಞಾನವು ಮೋಕ್ಷಕ್ಕೆ ಸಾಧನವು ಎಂಬುವುದು ನಿರ್ಣಯವಾಗದಿರುವುದರಿಂದ ಅದಕ್ಕಾಗಿ ಉಪಾಸನ ಮಾಡಕೂಡದು. ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಪ್ರೀತಿಃ=(ಶ್ರೀ ಹರಿಗೆ ಅಧಿಕವಾದ ಪ್ರೀತಿಯು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ,) ಜ್ಞಾನಿಯಾದವನಿಗೆ ನಾನು ಅತಿಶಯವಾಗಿ ಪ್ರಿಯನು, ಆ ಜ್ಞಾನಿಯು ನನಗೆ ಪ್ರಿಯನು, ಎಂದು ಭಗವಂತನಿಗೆ 'ಸ ಚ ಮಮ ಪ್ರಿಯಃ' ಎಂದು ಜ್ಞಾನಿಯಾದವನಲ್ಲಿಯೇ ಅಧಿಕವಾಗಿ ತನಗೆ ಪ್ರೀತಿಯು ಇದೆ ಎಂದು ಹೇಳಿದೆ. (೩) (ಜ್ಞಾನವು ಪ್ರೀತಿ ಸಾಧನವು ಎಂಬುವುದು ಪ್ರಕೃತಕ್ಕೆ ಅನುಪಯುಕ್ತವು ಎಂದರೆ) ಇಚ್ಛಾರೂಪನಾದ ಶ್ರೀ ಹರಿಯು ಪ್ರಸನ್ನನಾಗಿ ಯಾರನ್ನು ಭಕ್ತನೆಂದು ಸ್ವೀಕರಿಸುತ್ತಾನೋ, ಅಂತಹವನಿಂದಲೇ ಶ್ರೀ ಹರಿಯು ಲಭ್ಯನು, ಎಂದು ಭಗವಂತನ ಪ್ರೀತಿಯಿಂದಲೇ ಮೋಕ್ಷವಾಗುತ್ತದೆ, ಎಂದು ಹೇಳುವ ವಚನವಿದ್ದುದರಿಂದಲೂ (ಜ್ಞಾನವೇ ಮೋಕ್ಷ ಸಾಧ

ನವು.) (ಏವಂಚ ಪ್ರಿಯೋ ಹಿ ಎಂಬ ವಾಕ್ಯವು ಭಗವದ್ವಾಕ್ಯವು. ಅದರಲ್ಲಿ ಅತ್ಯರ್ಥಂ ಎಂದು ಇದ್ದ ಪ್ರಯುಕ್ತ ವಿಶೇಷ ವಾಕ್ಯವು. ತಪೋವಂ ವಿದಿತ್ವಾ ಇತ್ಯಾದಿ ಶ್ರುತಿ ಸಾಹಾಯ್ಯವೂ ಇದೆ. ಆದಕಾರಣ ಕರ್ಮಣ್ಯೇವ ಎಂಬುವುದಕ್ಕಿಂತ ಪ್ರಬಲವು. ಕೇವಲ ಕರ್ಮದಿಂದ ಮೋಕ್ಷವಾಗಲಾರದು. ಕರ್ಮ ಸಹಿತವಾದ ಜ್ಞಾನದಿಂದ ಮೋಕ್ಷದಲ್ಲಿ ಅತಿಶಯವುಂಟಾಗುತ್ತದೆ ಎಂದು ತಿಳಿದುಕೊಳ್ಳಬೇಕು.) (ಏವಂಚ ಶ್ರೀಹರಿಗೆ ಜ್ಞಾನಿಯಾದವನಲ್ಲಿಯೇ ಅಧಿಕ ಪ್ರೀತಿಯು ಇರುವುದರಿಂದ ಜ್ಞಾನವೇ ಮೋಕ್ಷ ಸಾಧನವು. ಅದಕ್ಕಾಗಿ ಉಪಾಸನಾ ಮಾಡಲೇಬೇಕು.) ॥ ೩೦ ॥

೩೧ನೇ ಅನುಬಂಧಾಧಿಕರಣದಲ್ಲಿ ಭಗವಂತನ ಜ್ಞಾನಕ್ಕೆ ಭಕ್ತ್ಯಾದಿಗಳ ಅಪೇಕ್ಷೆಯು ಇದೆಯೋ ಇಲ್ಲವೋ ಎಂದು ಸಂದೇಹವು ಬಂದರೆ ಭಕ್ತ್ಯಾದಿಗಳ ಅಪೇಕ್ಷೆಯು ಇಲ್ಲವೆಂದು ಪೂರ್ವಪಕ್ಷವು. ಭಕ್ತ್ಯಾದಿಗಳ ಅಪೇಕ್ಷೆಯು ಇದೆ ಎಂದು ಸಿದ್ಧಾಂತವು. ಅದರಲ್ಲಿ ವಿಶೇಷದರ್ಶಿತಾ=(ಭಕ್ತಿಯಿಲ್ಲದೆ ದ್ವೇಷದಿಂದ ಧ್ಯಾನ ಮಾಡುವವರಿಗೂ ವಿಶೇಷ ಜ್ಞಾನವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಕಸ್ಯಚಿದ್ವಿಶೇಷ ಜ್ಞಾನೋಪಪತ್ತೇರ್ಭಕ್ತ್ಯಾದಿಕಂ ವಿನಾ ಮುಕ್ತಿಃ ॥ (೨) ಭಕ್ತ್ಯೈವೈನಂ ಜಾನಾತಿ ಭಕ್ತ್ಯೈವೈನಂ ಪಶ್ಯತಿ ಭಕ್ತ್ಯೈವ ಬಂಧಾದ್ವಿಮುಚ್ಯತೇ 'ಭಕ್ತ್ಯೈವಾನಂದೀಭವತಿ'(೩) 'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ' '(೪) ಭಿನತ್ತಿ ಕರ್ಮಸಂಘಾತಂ ಪ್ರಸನ್ನೋ ಭಗವಾನ್ ಹರಿಃ' ಇತ್ಯಾದ್ಯಾಗಮಾತ್ ॥ ೩೧ ॥

ಅ ॥ (೧) ಒಬ್ಬಾನೊಬ್ಬ ಶಿಷ್ಯನಿಗೆ ಭಕ್ತ್ಯಾದಿಗಳು ಇಲ್ಲದೇನೇ ಸರ್ವಜ್ಞರಾದ ಗುರುಗಳ ಅನುಗ್ರಹದಿಂದ ಇತರ ಸಾಧನಗಳ ಅಪೇಕ್ಷೆಯಿಲ್ಲದೇನೇ ಮುಕ್ತಿಯನ್ನು ಕೊಡುವ ಜ್ಞಾನವಿಶೇಷವು ಅಪರೋಕ್ಷ ಜ್ಞಾನವು ಹುಟ್ಟಬಹುದಾದುದರಿಂದ ಭಕ್ತ್ಯಾದಿಗಳು ಇಲ್ಲದೇನೇ ಮುಕ್ತಿಯು. (ಏವಂಚ ಭಕ್ತಿಯು ಇಲ್ಲದೆ ದ್ವೇಷದಿಂದ ಧ್ಯಾನಿಸುವವರಿಗೂ ಅಪರೋಕ್ಷ ಜ್ಞಾನವು ಹುಟ್ಟುವುದರಿಂದ ಭಕ್ತ್ಯಾದಿಗಳು ವ್ಯರ್ಥವು. ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಆಗಮಾತ್=(ಭಕ್ತ್ಯೈವೈನಂ ಇತ್ಯಾದ್ಯಾಗಮವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಭಕ್ತಿಯಿಂದಲೇ ಶ್ರೀಹರಿಯನ್ನು ಪರೋಕ್ಷತಃ ತಿಳಿಯುತ್ತಾನೆ. ಭಕ್ತಿಯಿಂದಲೇ ಈತನನ್ನು ಪ್ರತ್ಯಕ್ಷೀಕರಿಸಿಕೊಳ್ಳುತ್ತಾನೆ. ಭಕ್ತಿಯಿಂದಲೇ ಬಂಧದಿಂದ ಬಿಡುಗಡೆ ಹೊಂದುತ್ತಾನೆ. (ಅನಿಷ್ಟ ನಿವೃತ್ತಿಯಾಗುತ್ತದೆ.) ಭಕ್ತಿಯಿಂದಲೇ ಆನಂದವುಳ್ಳವನಾಗುತ್ತಾನೆ. (ಇಷ್ಟ ಪ್ರಾಪ್ತಿಯಾಗುತ್ತದೆ.) (೩) ಶ್ರೀಹರಿಯು ಯಾರಿಗೆ ಪ್ರಸನ್ನನಾಗುತ್ತಾನೋ, ಆ ಅಧಿಕಾರಿಯಿಂದಲೇ ಶ್ರೀಹರಿಯು ಲಭ್ಯನು. ಆತನಿಗೇನೇ ತನ್ನ ಸ್ವರೂಪವನ್ನು ಪ್ರಕಾಶಗೊಳಿಸುತ್ತಾನೆ. (ಇಲ್ಲಿ ಪ್ರಸಾದವು ಭಕ್ತಿಸಾಧ್ಯವಾದ ಪ್ರಯುಕ್ತ ವೃಣುತೇ ಎಂಬುವುದರಿಂದ ಭಕ್ತಿಯಿದ್ದವನಾಗಬೇಕೆಂದು ಸೂಚಿತವಾಯ್ತು) (೪) ಪ್ರಸನ್ನನಾದ ಶ್ರೀಹರಿಯು ಕರ್ಮಸಮೂಹವನ್ನು ನಾಶಗೊಳಿಸುತ್ತಾನೆ, ಇತ್ಯಾದ್ಯಾಗಮಗಳಿಂದ (ಭಕ್ತ್ಯೈವ ಎಂದು ಸಾವಧಾರಣತ್ವವನ್ನು ಹೇಳಿದುದರಿಂದ ಭಕ್ತಿಯಿಲ್ಲದೆ ಅಪರೋಕ್ಷಜ್ಞಾನವು ಹುಟ್ಟದಿರುವುದರಿಂದ ಭಕ್ತಿಯೇ ಪ್ರಧಾನಸಾಧನವು. ಆದಕಾರಣ ಆ=ಚೆನ್ನಾಗಿ ಗಮಯತಿ=ಭಕ್ತಿಗೇನೇ ಪ್ರಾಧಾನ್ಯವನ್ನು ತಿಳಿಸಿಕೊಡುತ್ತದೆ, ಎಂಬ ವ್ಯುತ್ಪತ್ತಿಯಿಂದ ಆಗಮ ಎನಿಸಿಕೊಂಡ ಭಕ್ತ್ಯೈವ ಇತ್ಯಾದಿ ಆಗಮಗಳಿಂದ ಭಕ್ತ್ಯಾದಿಗಳು ಜ್ಞಾನಕ್ಕಾಗಿ ಅಪೇಕ್ಷಿತವು. ಎಂದುಕ್ತವಾಯ್ತು.) ॥ ೩೧ ॥

೩೨ನೇ ಪ್ರಜ್ಞಾಂತರಾಧಿಕರಣದಲ್ಲಿ ಪದಾರ್ಥಧರ್ಮಗಳಲ್ಲಿ ವೈಚಿತ್ರ್ಯ ಅವೈಚಿತ್ರ್ಯಗಳು ಕಂಡದರಿಂದ ಭಗವದ್ದರ್ಶನವು ಸರ್ವರಿಗೂ ಏಕಪ್ರಕಾರವೋ, ಅನೇಕಪ್ರಕಾರವೋ, ಎಂದು ಸಂಶಯವು ಬಂದರೆ ಏಕ ಪ್ರಕಾರವೆಂದು ಪೂರ್ವಪಕ್ಷವು. ಅನೇಕಪ್ರಕಾರವೆಂದು ಸಿದ್ಧಾಂತವು. ಅದರಲ್ಲಿ ಆಲಾಪಃ=(ದೃಷ್ಟ್ವೈವ ಇತ್ಯಾದಿ ಪ್ರಕಾರ ಸಾಮಾನ್ಯವಚನವು,) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.)

ಮೂ ॥ (೧) **(1)** ನ ಚ ದೃಷ್ಟ್ವೈವ ತಂ ಮುಚ್ಯತೇ ನಾಪರೇಣ**(2)** ಯಾವಾನ್ಯಶ್ಚಾಸ್ಮಿ ತತ್ವತಃ । ತತೋ ಮಾಂ ತತ್ವ ತೋಜ್ಞಾತ್ವಾ ಇತ್ಯಾದಿ ಸಾಮಾನ್ಯಾಲಾಪಮಾತ್ರೇಣ ದರ್ಶನಸ್ಯಾವಿಶೇಷಃ । (೨) ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ ಯಥಾಧಿಕಾರಂ ದೇವೇಭ್ಯೋऽತೋ ಬ್ರಹ್ಮೈವೈನಮಭಿಪಶ್ಯತ್ಯಥಾತ್ಮೈವಾತ್ಮಾನಮಭಿಪಶ್ಯತಿ ಸುಸ್ಥಿರೋ ಹ್ಯೇಷ ನಿಯಮಃ ಇತಿ ದರ್ಶನವಿಶೇಷನಿಯಮಸ್ಯ ಸುಸ್ಥಿರತ್ವವಚನಾತ್ ॥ (೩) ಯಾವಾನ್ಯಶ್ಚಾಸ್ಮೀತಿ ಬ್ರಹ್ಮಣ ಏವ ಜ್ಞಾನೋಪಪತ್ತೇಃ । (೪) ಯಾವಾನಿತ್ಯತ್ರಾಪಿ ಸಾಮಾನ್ಯವಿಶೇಷಜ್ಞಾನೋಪಪತ್ತೇಶ್ಚ ॥ ೩೨ ॥

ಅ ॥ (೧) (1) ಶ್ರೀಪರಮಾತ್ಮನನ್ನು ನೋಡಿಯೇ ಮುಕ್ತನಾಗುತ್ತಾನೆ: ಬೇರೆ ಯಾವುದರಿಂದಲೂ ಮುಕ್ತನಾಗಲಾರನು. (ಇಲ್ಲಿ ದರ್ಶನದಲ್ಲಿ ವಿಶೇಷ ಹೇಳದಿರುವುದರಿಂದ ಸಾಮಾನ್ಯ ವಚನವಾಯ್ತು.) (೩) (ದೃಷ್ಟ್ವೈವ ಎಂಬುವ ಶ್ರುತಿಯ ದೆಶೆಯಿಂದ ಶ್ರೀಹರಿಯು ಸ್ವಲ್ಪ ದರ್ಶನಕ್ಕೆ ಗೋಚರನು ಎಂಬ ಅರ್ಥವನ್ನು ನಿವಾರಿಸುವುದಕ್ಕಾಗಿ ಯಾವಾನ್ ಎಂಬ ಸ್ಮೃತಿಯು.) ಯಥಾರ್ಥವಾಗಿ ನಾನು ಎಷ್ಟು ಪರಿಪೂರ್ಣವುಳ್ಳವನಾಗಿರುತ್ತೇನೋ ಯಾವ ಪ್ರಕಾರ ಇರುತ್ತೇನೋ ಹಾಗೆ ನನ್ನನ್ನು ತಿಳಿದು ನನ್ನನ್ನು ಹೊಂದುತ್ತಾನೆ. (ಇದರಿಂದ ಸರ್ವರಿಗೂ ಭಕ್ತ್ಯಾದಿಗಳಿಂದ ಪೂರ್ಣಜ್ಞಾನವು ಹುಟ್ಟುತ್ತದೆಂದುಕ್ತವಾಯ್ತು.) (ಹೀಗೆ ಸಂಪೂರ್ಣ ಜ್ಞಾನದಿಂದಲೇ ಮೋಕ್ಷವನ್ನು ಹೇಳಿದುದರಿಂದ ಸಾಮಾನ್ಯ ವಚನವಾಯ್ತು) ಹೀಗೆ ಸಾಮಾನ್ಯ ವಚನ ಮಾತ್ರದಿಂದ ಸರ್ವಾಧಿಕಾರಿಗಳು ನೋಡುವುದರಲ್ಲಿಯೂ ವಿಶೇಷವಿಲ್ಲ. (ಏವಂಚ ಸರ್ವರಿಗೂ ಸಂಪೂರ್ಣ ಭಗವಂತನ ಸ್ವರೂಪಜ್ಞಾನದಿಂದಲೇ ಮೋಕ್ಷವೆಂದುಕ್ತವಾಯ್ತು. ಸರ್ವರಿಗೂ ಏಕಪ್ರಕಾರವೇ ಆದ ಜ್ಞಾನವು ಮೋಕ್ಷಸಾಧನವು.) ಆದಪ್ರಯುಕ್ತ ಮುಕ್ತಿಯಲ್ಲಿ ತಾರತಮ್ಯವು ಅಯುಕ್ತವು. ಎಂದರೆ ಹಾಗೆ ಹೇಳಕೂಡದು (೨) (ಏಕೆಂದರೆ-ಸುಸ್ಥಿರತ್ವಂ=(ದರ್ಶನದಲ್ಲಿ ತಾರತಮ್ಯಕ್ಕೆ ಅತಿಸ್ಥಿರತ್ವವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಈ ಶ್ರೀಹರಿಯು ಅವರವರ ಯೋಗ್ಯತಾನುಸಾರವಾಗಿಯೇ ತನ್ನನ್ನು (ಶ್ರೀಪರಮಾತ್ಮನನ್ನು) ತೋರಿಸುತ್ತಾನೆ. ಅಧಿಕಾರಾನುಸಾರವಾಗಿಯೇ ದೇವತೆಗಳಿಗೆ ತೋರಿಸುತ್ತಾನೆ. ದೇವತೆಗಳಿಗಿಂತಲೂ ಚತುರ್ಮುಖ ಬ್ರಹ್ಮನೇ ಅಧಿಕವಾಗಿ ಚೆನ್ನಾಗಿ ತಿಳಿಯುತ್ತಾನೆ. (ಆತನೂ ಸಹ ಸರ್ವಾತ್ಮನಾ ತಿಳಿಯುವುದಿಲ್ಲ.ಆದುದರಿಂದ ಶ್ರೀ ಪರಮಾತ್ಮನೊಬ್ಬನೇ ತನ್ನ ರೂಪವನ್ನು ಸರ್ವಪ್ರಕಾರದಿಂದಲೂ ತಿಳಿಯುತ್ತಾನೆ. ಈ ನಿಯಮವು ಅತಿಸ್ಥಿರವಾದುದು, ಎಂದು ದರ್ಶನ ವಿಶೇಷ ನಿಯಮವು ಸುಸ್ಥಿರವೆಂದು ವಚನವು. (3) ಭಕ್ತ್ಯಾ ಮಾಮಭಿಜಾನಾತಿ, ವಿಶತೇ ತದನಂತರಂ, ಎಂದು ಹೇಳಿದುದರಿಂದ ಯಾವಾನ್ ಯಶ್ಚಾಸ್ಮಿ ಎಂಬುವುದೂ ಚತುರ್ಮುಖನಿಗೇನೇ ಅಧಿಕ ಜ್ಞಾನವು ಹುಟ್ಟುತ್ತದೆಂದು ಹೇಳಿದುದರಿಂದ ಸರ್ವರಿಗೆ ಸಂಪೂರ್ಣಜ್ಞಾನವಿಲ್ಲ. (4) (ಸಾಧಾರಣ ವಚನವೆಂದು ಇಟ್ಟುಕೊಂಡರೂ) ಯಾವಾನ್ ಎಂಬುವಲ್ಲಿಯೂ ಯಾರಿಗೆ ಎಷ್ಟು ದರ್ಶನಕ್ಕೆ ಯೋಗ್ಯನಾಗಿರುತ್ತೇನೋ ಅಷ್ಟು ಮಾತ್ರ ನನ್ನನ್ನು ಯಥಾರ್ಥವಾಗಿ ತಿಳಿದು ನನ್ನನ್ನು ಹೊಂದುತ್ತಾನೆ, ಎಂದು ಸಾಮಾನ್ಯರೂಪದಿಂದ ವಿಶೇಷ ಜ್ಞಾನವು ಸರ್ವರಿಗೂ ಕೂಡುತ್ತದೆ. (ದೃಷ್ಟ್ವೈವ ಎಂಬ ಶ್ರುತಿಗೂ ಯಥಾಯೋಗ್ಯವಾಗಿ ನೋಡಿಯೇ

ಎಂದರ್ಥವು.) (ವಿವಂಚ ದರ್ಶನ ತಾರತಮ್ಯವು ಅತಿಸ್ಥಿರವಾದ ಪ್ರಯುಕ್ತ ತಾರತಮ್ಯವು ಯುಕ್ತವು)॥೩೨॥

೩೩ನೇ ನಸಾಮಾನ್ಯಾಧಿಕರಣದಲ್ಲಿ ಬ್ರಹ್ಮವಿದಾಪ್ನೋತಿ ಪರಂ ಇದು ಮೊದಲಾದ ಶ್ರುತಿಯು ಬಿಂಬರೂಪ ಅಬಿಂಬರೂಪಗಳಲ್ಲಿ ಸಾಧಾರಣವಾಗಿರುವುದರಿಂದಬಿಂಬರೂಪ ವಿಷಯಕವಾದಭಗವದ್ದರ್ಶನ ದಿಂದ ಮೋಕ್ಷವೋ, ಅಥವಾ ಯತ್ಕಿಂಚಿದ್ರೂಪ ವಿಷಯಕವಾದ ಭಗವದ್ದರ್ಶನದಿಂದ ಮೋಕ್ಷವೋ, ಎಂದು ಸಂದೇಹವು ಬಂದರೆ—ಯತ್ಕಿಂಚಿದ್ರೂಪ ವಿಷಯಕ ಭಗವದ್ದರ್ಶನದಿಂದ ಮೋಕ್ಷವೆಂದು ಪೂರ್ವಪಕ್ಷವು. ಬಿಂಬರೂಪ ಭಗವದ್ದರ್ಶನದಿಂದಲೇ ಮೋಕ್ಷವೆಂದು ಸಿದ್ಧಾಂತವು. ಅದರಲ್ಲಿ ಗುಣಸಾಮ್ಯಂ (ಶ್ರೀಹರಿಗೆ ಅವತಾರಾದಿಗಳಲ್ಲಿಯೂ ಮೋಕ್ಷದಾತೃತ್ವ ಮೊದಲಾದ ಗುಣಗಳ ಸಾಮ್ಯವು) ಎಂಬ ಪೂರ್ವಪಕ್ಷನ್ಯಾಯ ವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ॥(೧)ನ ಚ ಭಗವತಸ್ಸರ್ವತ್ರ ಗುಣಸಾಮ್ಯಾದ್ಯಸ್ಯಕಸ್ಯಾಪಿ ರೂಪಸ್ಯ ದರ್ಶನಾತ್ಸರ್ವೇಷಾಂ ಮುಕ್ತಿಃ ॥ (೨) ಸರ್ವೋಽಪಿ ಭಗವಾನ್ಸ್ವಬಿಂಬದರ್ಶನ ಏವೈನಂ ಮೋಚಯತಿ ಯಥಾ ಸಮೇಷ್ವಪಿ ಕರ್ಮಸು ಸ್ವಕೃತಮೇವೈನಂ ಭೋಜಯತೀತಿ ಶ್ರುತ್ಯುಕ್ತ ಸ್ವಕೃತಪ್ರಾಪ್ತಿದೃಷ್ಟಾಂತಾತ್ ॥ ೩೩ ॥

ಅ ॥ (೧) ಶ್ರೀ ಹರಿಗೆ ಎಲ್ಲಾ ಅವತಾರಾದಿಗಳಲ್ಲಿಯೂ ಮೋಕ್ಷದಾತೃತ್ವ ಮೊದಲಾದ ಗುಣಗಳು ಸಮಾನಗಳಾಗಿರುವುದರಿಂದ ಯಾವುದಾದರೊಂದು ಭಗವದ್ರೂಪದ ದರ್ಶನದಿಂದಲೂ ಸರ್ವರಿಗೂ ಮುಕ್ತಿ ಯಾಗುವುದು. (ಆದಕಾರಣ ಬಿಂಬೋಪಾಸನವನ್ನೇ ಮಾಡಬೇಕೆಂದು ನಿಯಮವಿಲ್ಲ, ಎಂದರೆ ಹಾಗೆ ಹೇಳಕೂಡದು. (೨) ಏಕೆಂದರೆ ಕೃತಪ್ರಾಪ್ತಿಃ=(ತಾನುಮಾಡಿದ ಕರ್ಮದಿಂದಲೇ ತನಗೆಫಲಪ್ರಾಪ್ತಿಯು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಶ್ರೀ ಭಗವಂತನು ರಾಮಕೃಷ್ಣಾದಿ ಅವತಾರ ರೂಪಗಳ ಲ್ಲಿಯೂ ಜ್ಞಾನಾನಂದ ಮೋಕ್ಷದಾತೃತ್ವ ಮೊದಲಾದ ಗುಣಗಳಿಂದ ಸಮನೇ ಆದಾಗ್ಯೂ ತಂತಮ್ಮ ಬಿಂಬ ರೂಪದ ದರ್ಶನವಾದರೇನೇ ಈ ಭಕ್ತನನ್ನು ಸಂಸಾರದಿಂದ ಬಿಡುಗಡೆ ಮಾಡುತ್ತಾನೆ. ಹೇಗೆಂದರೆ ಇತ ರರು ಮಾಡಿದ ಕರ್ಮಗಳಲ್ಲಿಯೂ ತಾನು ಮಾಡಿದ ಕರ್ಮಗಳಲ್ಲಿಯೂ ಕರ್ಮತ್ವವು ಸಮಾನವಾದುದಾಗ್ಯೂ ಕರ್ಮಕರ್ತನಿಗೇನೇ ಆತನು ಮಾಡಿದ ಕರ್ಮಫಲವನ್ನೇ ಉಣ್ಣಿಸುತ್ತಾನೆ, ಹೀಗೆ ಶ್ರುತಿಯಲ್ಲಿ ಹೇಳದ ಅವರವರು ಮಾಡಿದ ಕರ್ಮಫಲ ಪ್ರಾಪ್ತಿ ದೃಷ್ಟಾಂತದಿಂದ (ತಂತಮ್ಮ ಬಿಂಬರೂಪ ಭಗವಂತನ ದರ್ಶನ ದಿಂದಲೇ ಮೋಕ್ಷವು. ಯಾವುದಾದರೊಂದು ಭಗವದ್ರೂಪವನ್ನು ಕಂಡುದರಿಂದ ಮೋಕ್ಷವಾಗಲಾರದು. ಅನೇಕಾನೇಕ ಜನರು ಮಾಡಿದ ಎಲ್ಲಾ ಅಶ್ವಮೇಧ ಯಾಗಗಳು ಸಮಗಳಾದಾಗ್ಯೂ ತಾನು ಮಾಡಿದ ಅಶ್ವ ಮೇಧಯಾಗವೇ ತನಗೆ ಫಲವನ್ನು ಕೊಡುತ್ತದೆ. ಹಾಗೆಯೇ ಭಗದ್ರೂಪಗಳು ಎಲ್ಲವೂ ಸಮಗಳಾದಾಗ್ಯೂ ತಮ್ಮ ಬಿಂಬಮೂರ್ತಿಯೇ ತಮಗೆ ಮೋಕ್ಷರೂಪಫಲವನ್ನು ಕೊಡತಕ್ಕದು. ಆದಕಾರಣ ಬಿಂಬೋ ಪಾಸನೆಯನ್ನು ಮಾಡಬೇಕೆಂದು ನಿಯಮವಿದೆ.) ॥ ೩೩ ॥

೩೪ನೇ ಪರೇಣಾಧಿಕರಣದಲ್ಲಿ ಕೃಷ್ಯಾದಿಗಳಲ್ಲಿ ಸಾಧನಸಾಮರ್ಥ್ಯದಿಂದಲೂ ರಾಜಸೇವಾದಿಗಳಲ್ಲಿ ಸೇವ್ಯ ಪುರುಷನ ಸಾಮರ್ಥ್ಯದಿಂದಲೂ ಫಲವು ಸಿಗುವುದರಿಂದ ಶ್ರೀಭಗವಂತನ ಜ್ಞಾನವು ಭಕ್ತಿಯ ಸಾಮರ್ಥ್ಯದಿಂದುಂಟಾಗುತ್ತದೋ, ಶ್ರೀ ಪರಮಾತ್ಮನಿಂದಲೇ ಆಗುತ್ತದೋ, ಎಂದು ಸಂದೇಹವು ಬಂದರೆ- ಭಕ್ತಿಯ ಸಾಮರ್ಥ್ಯದಿಂದಲೇ ಎಂದು ಪೂರ್ವಪಕ್ಷವು. ಶ್ರೀ ಪರಮಾತ್ಮನಿಂದಲೇ ಎಂದು ಸಿದ್ಧಾಂತವು. ಅದರಲ್ಲಿ ಪೃಥಗ್ಘ್ಯತಿಃ=(ಭಕ್ತಿಯೇ ಸಂಸಾರದಿಂದ ಬಿಡುಗಡೆ ಮಾಡುತ್ತದೆ, ಎಂದು ಈಶ್ವರಾದಿಗಳಿಗಿಂತ ಪ್ರತ್ಯೇಕವಾಗಿ ತೋರುವಿಕೆಯು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ಭಕ್ತಿರೇವೈನಮಿತಿ ಭಕ್ತೇರೇವ ಪೃಥಕ್ ಮೋಚಕತ್ವದರ್ಶನಾತ್ ನೇಶಕೃತ್ಯ ಮಿತಿ ನ ಮಂತವ್ಯಂ|| (೨) ಅನಾದಿತೋ ಗುಣಾಃ ಸಂತೋ ಭಕ್ತ್ಯಾದ್ಯಾಃ ನಹ್ಯಮೂಮ ಮುಚನ್ | ಜೀವಂ ತದ್ಗುಣಸುವ್ಯಕ್ತಿಂ ಕೃತ್ವೈನಂ ಮೋಚಯೇದ್ಧರಿಃ || ಕಂಚಿನ್ನ ಮೋಚಯೇದ್ವ್ಯಾಸೌ ಸ್ವಾತಂತ್ರ್ಯಂ ತಸ್ಯ ತೇನ ಹಿ | ಭಕ್ತಿರ್ವಾಕ್ಕರಣ ತ್ವೇನ ಸಾವಕಾಶೇಶವಾಗಥ | ಭಕ್ತ್ಯೈನಂ ಮೋಚಯೇದ್ವಿಷ್ಣುರಿತಿ ಮಾನತ್ವಮೇಷ್ಯತೀತಿ ಬ್ರಹ್ಮತರ್ಕವಚನಾದನಾದಿಗುಣವಿಸ್ತರೇ ಸತ್ಯಪಿ ಅವ್ಯಕ್ತ್ಯಾದಿನಾ ತದಿಚ್ಛಾಂ ವಿನಾ ಮೋಕ್ಷಾಪ್ರಾಪ್ತೇಃ || ೩೪ ||

ಅ || (೧) ಭಕ್ತಿಯೇ ಈ ಅಧಿಕಾರಿಯನ್ನು (ನಯತಿ=) ಮೋಕ್ಷಕ್ಕೆ ಒಯ್ಯುತ್ತದೆ, ಇತ್ಯಾದಿ ಶ್ರುತಿಗಳಿಂದ ಭಕ್ತಿಯೇ ಈಶ್ವರಾದಿಗಳಿಗಿಂತ ಬೇರೆಯಾಗಿ ಸಂಸಾರದಿಂದ ಬಿಡುಗಡೆ ಮಾಡುತ್ತದೆ, ಎಂದು ಕಾಣುವುದರಿಂದ ಶ್ರೀಹರಿಯಿಂದ ಪ್ರಯೋಜನವಿಲ್ಲ(ಏವಂಚ ಭಕ್ತಿಗೇನೇ ಮೋಚಕತ್ವವು, ಪ್ರತ್ಯೇಕವಾಗಿ ಕಾಣುವುದರಿಂದ ಸಾಧನ ಸಾಮರ್ಥ್ಯದಿಂದಲೇ ಭಗವದ್ದರ್ಶನವು ಕೂಡುವುದರಿಂದ ಶ್ರೀಹರಿಗೆ ಅವ್ಯಕ್ತತ್ವವು ಇಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ-ಅನಾದಿಗುಣವಿಸ್ತರಃ=(ಅನಾದಿಗಳಾದ ಗುಣಗಳ ವಿಸ್ತಾರವು)ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಭಕ್ತಿ ಮೊದಲಾದ ಗುಣಗಳು ಅನಾದಿಲಾಗ್ಯಾತು ಇದ್ದವುಗಳಾದಾಗ್ಯೂ ಅವ್ಯಕ್ತಗಳಾಗಿರುವುದರಿಂದ ಜೀವನಿಗೆ ಮೋಕ್ಷವನ್ನು ಕೊಡಲಿಲ್ಲ. ಆದಕಾರಣ ಆವರಣಾದಿ ಸರ್ವಗಳಲ್ಲಿಯೂ ಸಮರ್ಥನಾದ ಶ್ರೀಹರಿಯು ಭಕ್ತ್ಯಾದಿಗುಣಗಳ ಅಭಿವ್ಯಕ್ತಿಯನ್ನು ಮಾಡಿ ಜೀವನನ್ನು ಸಂಸಾರ ಬಂಧದಿಂದ ಬಿಡಿಸುವನು. ಕೆಲವು ಜೀವರ ಸಮುದಾಯವನ್ನು ಸಂಸಾರಬಂಧದಿಂದ ಬಿಡುಗಡೆ ಮಾಡದೇನೇ ಇರುವನು. ಅದುದರಿಂದಲೇ ಶ್ರೀಹರಿಗೆ ಸರ್ವಸ್ವಾತಂತ್ರ್ಯವು. ಸಾವಧಾರಣವಾದ 'ಭಕ್ತಿರೇವೈನಂ' ಎಂಬ ಶ್ರುತಿಯು (ಹಂತಾ ರಾಮಶರಃ ಇತ್ಯಾದಿಗಳಂತೆಯೇ) ಭಕ್ತಿಯು ಕರಣವಾಗಿರುವುದರಿಂದ ಸಾವಕಾಶವಾಗುತ್ತದೆ. ಅಥವಾ ಸರ್ವಶಬ್ದಗಳೂ ಪರಬ್ರಹ್ಮನಲ್ಲಿಯೇ ಮುಖ್ಯವಾಗಿರುವುದರಿಂದ ಭಕ್ತಿಶಬ್ದವೂ ಸರ್ವರಿಂದ ಸೇವಿಸಲ್ಪಡುವವನು, ಎಂಬವ್ಯುತ್ಪತ್ತಿಯಿಂದ ಭಗವದ್ವಾಚಕವು. (ತಥಾಚ ಪರಬ್ರಹ್ಮನೇ ಈ ಜೀವನನ್ನು ಮುಕ್ತಿಗೆ ಒಯ್ಯುತ್ತಾನೆ ಎಂದೇ ಶ್ರುತ್ಯರ್ಥವು) (ಭಕ್ತಿಯು ಕರಣವು ಎಂದು ಹೇಳಿದುದನ್ನು ಪಪಾದಿಸುತ್ತಾರೆ.) ಶ್ರೀಹರಿಯು ಭಕ್ತಿಯಿಂದಲೇ ಈ ಜೀವನನ್ನು ಸಂಸಾರದಿಂದ ಬಿಡುಗಡೆ ಮಾಡುವನು, ಎಂಬ ವಾಕ್ಯಕ್ಕೂ ಪ್ರಾಮಾಣ್ಯವು ಕೂಡುವುದು. (ಸಾಧನಗಳಲ್ಲಿ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಭಕ್ತಿರೇವ ಎಂದು ಏವ ಶಬ್ದವು) ಹೀಗೆ ಬ್ರಹ್ಮತರ್ಕ ವಚನದಿಂದ ಅನಾದಿಗಳಾದ ಗುಣಗಳ ವಿಸ್ತಾರವಿದ್ದರೂ ಅಭಿವ್ಯಕ್ತವಾಗದಿರುವುದರಿಂದಲೂ ಬರತಕ್ಕ ಸಾಧನಾಂತರಗಳಿಂದಲೂ ಅನಾದಿಯಾದ ಭಗವದಿಚ್ಛೆಯಿಲ್ಲದೆ ಮೋಕ್ಷವು ಪ್ರಾಪ್ತವಾಗುದಿಲ್ಲ. (ಏವಂಚ ಭಕ್ತಿವ್ಯಕ್ತಿಗೆ ಕಾರಣೀಭೂತನಾದ ಈಶ್ವರನನ್ನು ಬಿಟ್ಟು ಭಕ್ತಿಗೇನೇ ಸ್ವಾತಂತ್ರ್ಯವನ್ನು ಅಂಗೀಕರಿಸಿದರೆ ಆ ಭಕ್ತ್ಯಾದಿಗಳು ಅನಾದಿ ಕಾಲತಃ ಇರುವುದರಿಂದ ಮೊದಲೇ ಮುಕ್ತಿಯಾಗಬೇಕಿತ್ತು.) (ಆದಕಾರಣ ಅನಾದಿಗಳಾದ ಗುಣಗಳ ವಿಸ್ತಾರವಿದ್ದರೂ ಈವರೇಗೆ ಭಗವದ್ದರ್ಶನವಾಗದಿರುವುದರಿಂದ ಅತನು ಅವ್ಯಕ್ತನೆಂಬುವುದು ಯುಕ್ತವು.) || ೩೪ ||

೩೫ನೇ ಏಕಾಧಿಕರಣದಲ್ಲಿ ಯೋಗ್ಯ ಕ್ರಿಯೆಗಳೂ ಅಯೋಗ್ಯ ಕ್ರಿಯೆಗಳೂ ಕಂಡುದರಿಂದ ಉಪಾಸನಾದಿಗಳು ಯೋಗ್ಯತೆಯನ್ನಪೇಕ್ಷಿಸುತ್ತವೋ, ಇಲ್ಲವೋ ಎಂದು ಸಂಶಯವು ಬಂದರೆ ಇಲ್ಲವೆಂದು ಪೂರ್ವಪಕ್ಷವು. ಯೋಗ್ಯತೆಯನ್ನು ಅಪೇಕ್ಷಿಸುತ್ತವೆ, ಎಂದು ಸಿದ್ಧಾಂತವು. ಅದರಲ್ಲಿ ಅಗವ್ಯಾವರ್ತ್ಯ=(ಅಂಶದಿಂದ ಹೊಂದಲಸಾಧ್ಯವಾದುದು ಅಂಶಿಯ ಮಾರ್ಗವು.) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧)ನ ಚಾಂಶಿಮಾರ್ಗಸ್ಯಾಂಶೇನಾಗಮ್ಯತ್ವಾತ್ತ್ವಯೋರ್ಭೇದಃ॥ (೨)ಸಾಧನೋತ್ತಮಸ್ಯಾದೃಷ್ಟಸ್ಯಾಂಶಿಕೃತಸ್ಯಾಂಶೇನ ಭುಜ್ಯಮಾನತ್ವಾತ್ । ಅನ್ಯಥಾಽದೃಷ್ಟಂ ವಿನಾ ಶರೀರಾದ್ಯನುಪಪತ್ತೇಃ ॥ ೩೫ ॥

ಅ ॥ (೧) (ಅಂಶಿಯು ಜ್ಞಾನಿಯಾಗುತ್ತಿರಲು, ಸುಖಿಯಾಗುತ್ತಿರಲು, ದುಃಖಿಯಾಗುತ್ತಿರಲು ಅಂಶದಲ್ಲಿ ಜ್ಞಾನಾದಿಗಳು ಇಲ್ಲದಿರುವುದರಿಂದ) ಅಂಶಿಯ ಮಾರ್ಗವು ಅಂಶದಿಂದ ಹೊಂದಲ್ಪಡದಿರುವುದರಿಂದ ಅಂಶಿಯಂತೆ ಸುಖದುಃಖಗಳು ಅಂಶಕ್ಕೆ ಆಗದಿರುವ ಕಾರಣ (ಅಂಶವು ಉತ್ಪನ್ನವಿನಷ್ಟವಾಗುವ ಪ್ರಯುಕ್ತ ಅಂಶಿಯು ಯಾವಾಗ ಮುಕ್ತಿಯನ್ನು ಹೊಂದುತ್ತದೋ, ಅಂತಹ ಅಂಶಿಮಾರ್ಗವು ಅಂಶದಿಂದ ಅಗಮ್ಯವಾದಪ್ರಯುಕ್ತ ಅಂಶಾಂಶಿಗಳಿಗೆ ಭೇದವು. ಅಂಶಾಂಶಿಗಳಿಗೆ ಭೇದವು ಇಲ್ಲವಾದರೆ ಜ್ಞಾನಾದಿಗಳಿಗೆ ಭೇದವೇ ಇಲ್ಲದೆ ಹೋಗುವುದು. ಹೀಗೆ ಅಂಶಾಂಶಿಗಳಿಗೆ ಭೇದವು ಇದ್ದ ಪ್ರಯುಕ್ತ ಅಂಶಿಯು ಅನಾದಿಯಾದಾಗ್ಯೂ ಅಂಶಕ್ಕೆ ಉತ್ಪತ್ತಿಯೂ ಕೂಡುವುದರಿಂದ ಇಂದ್ರಾದಿಗಳ ಅಂಶನಾದ ಅರ್ಜುನಾದಿಗಳೇ ಹುಟ್ಟಿರುವುದರಿಂದ ಅವರ ಧರ್ಮಭೂತವಾದ ಯೋಗ್ಯತೆಗೆ ಅನಾದಿತ್ವವು ಕೂಡದಿರುವುದರಿಂದ ಅವರ ಅಪೇಕ್ಷೆಯು ಇಲ್ಲ ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಸಾಧನೋತ್ತಮತ್ವಾ=(ಅದೃಷ್ಟಕ್ಕೆ ಸಾಧನಗಳಲ್ಲಿ ಉತ್ತಮತ್ವವು.) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಅಂಶಿಯು ಮಾಡಿರುವ ಸಾಧನೋತ್ತಮವಾದ ಅದೃಷ್ಟವನ್ನು ಅಂಶವು ಅನುಭವಿಸುತ್ತದೆ. (ಅಂದರೆ (1) ಅಂಶಃ ಅಂಶಿನೋ ಭಿನ್ನೋನ ಭವತಿ ತದ್ಗತಸುಖದುಃಖಾದ್ಯನುಸಂಧಾತೃತ್ವಾತ್ ಯೋ ಯದ್ಗತಸುಖದುಃಖಾದ್ಯನುಸಂಧಾತಾ ಸಃತದಭಿನ್ನಃ ಯಥಾ ಸಂಪ್ರತಿಪನ್ನಃ=ಅಂಶವು ಅಂಶಿಯಿಂದ ಭಿನ್ನವಲ್ಲ. ಅಂಶಿಯಲ್ಲಿರುವ ಸುಖದುಃಖಾದಿಗಳನ್ನು ಅನುಸಂಧಾನ ಮಾಡುವುದರಿಂದ ಯಾರು ಯಾರಲ್ಲಿರುವ ಸುಖ ದುಃಖಾದಿಗಳನ್ನು ಅನುಸಂಧಾನ ಮಾಡುತ್ತಾನೋ, ಆತನು ಅವನಿಂದ ಅಭಿನ್ನನು, ನಿಶ್ಚಿತನಂತೆ, ಎಂದನುಮಾನವು. (2) ಯದ್ಯಪಿ ಅಂಶವು ಮಾಡಿರುವ ಅಲ್ಪಸಾಧನಗಳಿಂದುಂಟಾದ ಜ್ಞಾನಾದಿ ಫಲಗಳಲ್ಲಿ ಅಂಶಿಗೆ ಅನುಸಂಧಾನವಿಲ್ಲ, ಆದಾಗ್ಯೂ ಪ್ರಧಾನವಾದ ಉಪಾಸನಾದಿ ಫಲಗಳ ಅನುಸಂಧಾನವು ಇದ್ದೇ ಇದೆ. ಅಂಶದಲ್ಲಿರುವ ಜ್ಞಾನಾದಿಗಳು ಅಂಶಿಯಿಂದ ಅನುಭವಿಸಲ್ಪಡುತ್ತವೆ. ಶ್ರೀಹರಿಯ ಅಚಿಂತ್ಯವಾದ ಶಕ್ತಿಯ ಅಧೀನವಾಗಿರುವುದರಿಂದ ಅಂಶಿಯಲ್ಲಿರತಕ್ಕುದು ಎಲ್ಲಾ ಸುಖಾದಿಗಳ ಅನುಸಂಧಾನವಿಲ್ಲ. (3) (ನಾವು ಅಂಶಿಯಲ್ಲಿರತಕ್ಕ ಎಲ್ಲಾ ಸುಖಾದಿಗಳ ಅನುಸಂಧಾನವಿದೆ ಎಂದು ಹೇಳುವುದಿಲ್ಲ. ಅನುಸಂಧಾನಮಾತ್ರವಿದೆ ಎನ್ನುತ್ತೇವೆ.) (೩) ಅಂಶಾಂಶಿಗಳಿಗೆ ಭೇದವಿದ್ದರೆ (ಅಂಶಗಳು ಶರೀರದಿಂದ ಕೂಡಿ ಹುಟ್ಟುವಾಗ ಆ ಶರೀರವನ್ನು ಹುಟ್ಟಿಸುವ ಅದೃಷ್ಟಕ್ಕೆ ಮೊದಲು ಆಶ್ರಯವಿಲ್ಲದಿರುವಾಗ) ಅದೃಷ್ಟಾಖ್ಯ ಕಾರಣ ಹೊರತು ಶರೀರ ಇಂದ್ರಿಯಾದಿಗಳ ಉತ್ಪತ್ತಿಯೇ ಕೂಡಲಾರದು. (ಅಂದರೆ ದೇಹಾಂತರಕ್ಕೆ ಉತ್ಪತ್ತಿಯಾದರೂ ಅಂಶಕ್ಕೆ ಉತ್ಪತ್ತಿಯಿಲ್ಲ. ಚೇತನಕ್ಕೆ ಸ್ವರೂಪತಃ ಉತ್ಪತ್ತಿಯಿಲ್ಲದಿರುವುದರಿಂದ ದೇಹನಾಶವಾದರೂ ಚೇತನಕ್ಕೆ ನಾಶವಿಲ್ಲ. ಮತ್ತೆ ಅಂಶಿಯಿಂದ ಐಕ್ಯವೇ. ಆದಕಾರಣ ಉತ್ಪತ್ತಿಯುಳ್ಳ ನಿಮಿತ್ತ ಕಾರಣವಾದ ಅಂಶಿಯಿಂದ ಕೃತವಾದ ಅದೃಷ್ಟದಿಂದ ಅಂಶದ ಶರೀರ ಸುಖದುಃಖ ಭೋಗಾದಿಗಳೂ ಹುಟ್ಟುವುದರಿಂದ ಅಂಶಾಂಶಿಗಳಿಗೆ ಅಭೇದವೇ. ಒಬ್ಬನು ಮಾಡಿದ ಕರ್ಮದಿಂದ ಇನ್ನೊಬ್ಬನಿಗೆ ಉತ್ಪತ್ತಿಯಾಗಲಾರದು; ಆದಕಾರಣ ಅದೃಷ್ಟವೇ ಸಾಧನಗಳಲ್ಲಿ ಶ್ರೇಷ್ಠವು. ಆದಕಾರಣ ಉಪಾಸನಾದಿಗಳಲ್ಲಿ ಅನಾದಿಯಾದ ಯೋಗ್ಯತಾಪೇಕ್ಷೆಯು ಇದ್ದೇ ಇದೆ.) ॥ ೩೫ ॥

೩೬ನೇ ಅಂಗಾವಬದ್ಧಾಧಿಕರಣದಲ್ಲಿ ಭಗವದುಪಾಸನೆಯನ್ನು ಅಂಗದೇವತೆಗಳ ಉಪಾಸನೆಯಿಂದ ಕೂಡಿ ಮಾಡಬೇಕೋ, ಕೇವಲವಾಗಿ ಮಾಡಬೇಕೋ ಎಂದು ಸಂದೇಹವು ಬಂದರೆ-ಕೇವಲವಾಗಿ ಮಾಡ

ಬೇಕೆಂದು ಪೂರ್ವಪಕ್ಷವು. ಅಂಗದೇವತೆಗಳ ಉಪಾಸನೆಯಿಂದ ಕೂಡಿಯೇ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿಯೂ ಅಂಗದೇವತೆಗಳ ಉಪಾಸನೆಯಿಂದ ಕೂಡಿ ಭಗವದುಪಾಸನೆಯನ್ನು ಮಾಡತಕ್ಕದೆಂದಾದರೆ ಉಪಾಸನೆಯನ್ನು ಗುಣೋಪಸಂಹಾರ ಪೂರ್ವಕವಾಗಿ ಮಾಡಬೇಕಾಗಿರುವುದರಿಂದ ಶ್ರುತಿ ಪ್ರತಿಪಾದಿತಗಳಾದ ಒಬ್ಬನ ಗುಣಗಳನ್ನು ಸರ್ವರಲ್ಲಿಯೂ ಉಪಸಂಹಾರಮಾಡಬೇಕೋ, ಬೇಡವೋ, ಎಂದು ಸಂದೇಹವು ಬಂದರೆ ಸರ್ವರಲ್ಲಿಯೂ ಉಪಸಂಹಾರ ಮಾಡಬೇಕು, ಎಂದು ಪೂರ್ವಪಕ್ಷವು. ಬೇಡವೆಂದು ಸಿದ್ಧಾಂತವು. ಅದರಲ್ಲಿ ಸಂಧಾನಂ (ದೇವತ್ವಾದಿಗಳ ಅನುಸಂಧಾನವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವಂಸಿಕೊಂಡು ನಿರಾಕರಿಸುತ್ತಾರೆ.

ಮೂ || ನ ಚ ಗುಣಾಂತರಸಂಧಾನಸ್ಯ ಕ್ವಚಿತ್‌ದರ್ಶನಮಾತ್ರೇಣ ಸಮಾಧಿಕಾಂಗದೇವತಾಂತರಗುಣಾಃ ಅಪ್ಯಂಗದೇವತಾಂತರೇ ಉಪಸಂಹರ್ತವ್ಯಾಃ || (೨) ನಾನಾಗುಣತ್ವೇನ ತೇಷಾಂ ಶ್ರುತಿಷು ದೃಷ್ಟೇಃ|| (೩)ಅನಿಷಿದ್ಧಗುಣಾನಾಂ ವಾಕ್ಯಾನ್ವಯನ್ಯಾಯೇನೋಪಸಂಹಾರಾತ್ 'ನ ಶಾಖಾಸ್ವಿತ್ಯಾದಿ ವಿಶೇಷಃ || (೪) ಉತ್ತಮೋಪ್ಯಧಮಗುಣಾಪೇಕ್ಷಯಾ ಮಂತ್ರಾದಿವದ್ವೇತಿ || ೩೬ ||

ಅ || (೧) (ಅಂಗದೇವತೆಗಳಿಂದೊಡಗೂಡಿ ಬ್ರಹ್ಮೋಪಾಸನವನ್ನು ಮಾಡಬೇಕೆಂದಾದರೆ ಉಪಾಸನೆಯು ಗುಣೋಪಸಂಹಾರಪೂರ್ವಕವಾಗಿರುವುದರಿಂದ) ಅಸಾಧಾರಣ ಗುಣದಿಂದ ಬೇರೆಯಾದ ಗುಣದ ಉಪಸಂಹಾರವು ಕ್ವಚಿತ್ ನಾಮಮಾತ್ರದಿಂದ. ಕೆಲವು ಉತ್ತಮದೇವತೆಗಳಲ್ಲಿ ಇರತಕ್ಕ ದೇವತ್ವರೂಪ ಗುಣಾಂತರದ ಉಪಸಂಹಾರವೂ, ಕೆಲವು ನೀಚ ದೇವತೆಗಳಲ್ಲಿಯೂ ದರ್ಶನಮಾತ್ರದಿಂದ, ಸಮ, ಅಥವಾ ಅಧಿಕರಾದ ಶ್ರೀ ವಿಷ್ಣುವಿನ ಪರಿವಾರಭೂತರಾದ ಇತರದೇವತೆಗಳ ಅಸಾಧಾರಣಗುಣಗಳೂ ಕೂಡ ಸಮರು ಅಥವಾ ನೀಚರಾದ ಇತರ ದೇವತೆಗಳಲ್ಲಿ ಉಪಸಂಹಾರಾರ್ಹಗಳು. (ಅಂದರೆ ಚತುರ್ಮುಖನ ಗುಣಗಳು ಅಧಮನಾದ ಶೇಷನಲ್ಲಿಯೂ, ಸಮನಾದ ಶೇಷನ ಸಹಸ್ರವದನತ್ವಾದಿಗುಣಗಳು ಗರುಡನಲ್ಲಿಯೂ ಹೀಗೆಯೇ ಬೇರೆಕಡೆಗಳಲ್ಲಿಯೂ ಸಮಾಧಿಕಗುಣಗಳನ್ನುಪಸಂಹಾರ ಮಾಡಬೇಕು,) (ಏವಂಚ ಒಂದು ದೇವತೆಯ ಗುಣವು ಇನ್ನೊಂದು ದೇವತೆಯಲ್ಲಿ ಉಪಸಂಹಾರವು ಬರಬೇಕಾಗುವುದರಿಂದ ಅಂಗ ದೇವತೆಗಳು ಉಪಾಸ್ಯರಾಗದಿರುವುದರಿಂದ ಅವರನ್ನು ಹೇಳತಕ್ಕ ವೇದಗಳಿಗೆ ವೈಯರ್ಥ್ಯವು ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ-ನಾನಾದೃಷ್ಟೇಃ=(ಅಂಗದೇವತೆಗಳುಪರಸ್ಪರ ವಿಲಕ್ಷಣ ಗುಣಗಳುಳ್ಳವರೆಂದು ಶ್ರುತಿಗಳಲ್ಲಿ ದರ್ಶನವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಬ್ರಹ್ಮನು ಚತುರ್ಮುಖನೆಂದೂ, ಶೇಷನು ಸಹಸ್ರಫಣಗಳುಳ್ಳವನೆಂದೂ, ಗರುಡನು ವಕ್ರತುಂಡವುಳ್ಳವನೆಂದೂ, ಇಂದ್ರನು ಸಹಸ್ರಾಕ್ಷನೆಂದೂ ಇತ್ಯಾದಿ ಪ್ರಕಾರ ಆ ಅಂಗದೇವತೆಗಳಿಗೆ ಪರಸ್ಪರ ವಿಲಕ್ಷಣ ಗುಣಗಳವೆ ಎಂದು ಶ್ರುತಿಗಳಲ್ಲಿ ಕಂಡಿವೆ. (ಏವಂಚ ಅವರವರಲ್ಲಿ ಅಸಾಧಾರಣಗಳಾದ ಗುಣಗಳನ್ನು ಅವರವರಲ್ಲಿ ಉಪಸಂಹಾರ ಮಾಡಬೇಕು. ಅಂದರೆ ಬ್ರಹ್ಮರುದ್ರಾದಿ ದೇವತೆಗಳಿಗೆ ಸೂರ್ಯಾದಿಗಳಲ್ಲಿ ಸರ್ವಥಾ ಇಲ್ಲದಿರುವ ಗುಣಗಳಿರುವುದರಿಂದ ಉತ್ತಮರಾದ ಪ್ರಯುಕ್ತ ಉತ್ತಮರ ಗುಣಗಳು ಅಧಮರಲ್ಲಿ ಅಯೋಗ್ಯಗಳಾಗಿರುವುದರಿಂದ ಬ್ರಹ್ಮಾದ್ಯಂಗ ದೇವತೆಗಳ ಗುಣಗಳನ್ನು ಅಧಮರಾದ ಸೂರ್ಯಾದಿಗಳಲ್ಲಿ ಉಪಸಂಹಾರ ಮಾಡಕೂಡದು. ಮತ್ತೆ ಯೋಗ್ಯಗುಣಗಳನ್ನೇ ಉಪಸಂಹಾರ ಮಾಡಬೇಕು), (೩) (ಬ್ರಹ್ಮರುದ್ರಾದಿಗಳ ಗುಣಗಳಿಗೆ ಸೂರ್ಯಾದಿಗಳಲ್ಲಿ ಅಯೋಗ್ಯತ್ವವಿದ್ದರೂ ಸೂರ್ಯಾದಿಗಳಲ್ಲಿ ಅನಿಷಿದ್ಧಗಳಾದ ದೇವತ್ವಯಜ್ಞಭೋಕ್ತೃತ್ವ ಮೊದಲಾದ ಗುಣಗಳಿಗೆ ವಾಕ್ಯಾನ್ವಯನ್ಯಾಯದಿಂದ (ಅಂದರೆ-ಹೇಗೆ ಕೇವಲ ಭಗವತ್ಪ್ರತಿಪಾದಕಗಳಾದ ಸಹಸ್ರ

ಶೀರ್ಷಾ ಪುರುಷಃ' ಏಕೋ ನಾರಾಯಣ ಆಸೀತ್ ಇತ್ಯಾದಿ ಎಲ್ಲಾ ವಾಕ್ಯಗಳಿಗೆ ಚತುರ್ಮುಖಾದಿಗಳಲ್ಲಿ ಸಂಬಂಧವಿಲ್ಲದಿದ್ದರೂ 'ಹಿರಣ್ಯಗರ್ಭಃ ಸಮವರ್ತತಾಗ್ರೇ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇಂದ್ರೋ ವೃತ್ರಂ ಹತ್ವಾ ಮಹಾನಭವತ್ ಇದು ಮೊದಲಾದ ಯೋಗ್ಯ ಗುಣಗಳಿಗೆ ಸಂಬಂಧವಿದೆಯೋ, ಹಾಗೆಯೇ ಉಪಸಂಹಾರವಿದ್ಧ ಪ್ರಯುಕ್ತ ನ ಶಾಖಾಸು ಹಿ ಪ್ರತಿವೇದಂ ಇತ್ಯಾದಿ ವಿಶೇಷವನ್ನು ಉಪಸಂಹಾರ ಮಾಡಬೇಕು. (ಅಂದರೆ ಅಯೋಗ್ಯಗುಣೋಪಸಂಹಾರರೂಪವಾದ ವಿಶೇಷವು ನಿಷೇಧ ವಿಷಯವು.) (೪) ಉತ್ತಮರಾದ ಬ್ರಹ್ಮಾದಿಗಳಲ್ಲಿ ಅಧಮರಾದ ರುದ್ರಾದಿದೇವತೆಗಳ ಗುಣಗಳನ್ನು ಉಪಸಂಹಾರ ಮಾಡಬೇಕು ಎಂಬ ಅಭಿಪ್ರಾಯದಿಂದ ಮಂತ್ರಾದಿವದ್ವಾ ಎಂಬ ಸೂತ್ರವು ಪ್ರವೃತ್ತವಾಗಿದೆ. (ಆದಕಾರಣ ಅಗ್ನ್ಯಾದಿ ಅಧಮ ದೇವತೆಗಳ ಗುಣಗಳನ್ನು ಬ್ರಹ್ಮಾದ್ಯುತ್ತಮದೇವತೆಗಳಲ್ಲಿ ಉಪಸಂಹಾರ ಮಾಡಬೇಕು.) (ಏವಂಚ ಯಥಾಯೋಗ್ಯವಾಗಿಯೇ ಅಂಗದೇವತೆಗಳ ಉಪಾಸನೆಯನ್ನು ಮಾಡಬೇಕು.) ॥ ೨೭ ॥

೨೭ನೇ ಭೂಮಜ್ಯಾಯಸ್ತ್ವಾಧಿಕರಣದಲ್ಲಿ ಸರ್ವೋಪಾಸ್ಯ ಸರ್ವಾನುಪಾಸ್ಯ ಗುಣಗಳು ಉಂಟು ಎಂದು ಶ್ರೀಹರಿಯ ಭೂಮಗುಣವು ಸರ್ವರಿಂದ ಉಪಾಸ್ಯವೋ ಅಲ್ಲವೋ, ಎಂದು ಸಂದೇಹವು ಬಂದರೆ ಸರ್ವೋಪಾಸ್ಯವಲ್ಲವೆಂದು ಪೂರ್ವಪಕ್ಷವು. ಸರ್ವೋಪಾಸ್ಯವೆಂದು ಸಿದ್ಧಾಂತವು. ಆದರಲ್ಲಿ ಇಷ್ಟಫಲಂ=(ಇಷ್ಟವಾದ ಗುಣದ್ದೆಶೆಯಿಂದುಂಟಾಗತಕ್ಕಫಲವು,) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಭೂಮಗುಣಸ್ಯೋಪಾಸಕಂ ಪ್ರತಿ ವಿಶೇಷಾಭಾವೇಽಪಿ ತತ್ತದಿಷ್ಟಗುಣಾನುಸಾರೇಣ ಫಲೋಪಪತ್ತಿರಿತ್ಯವಿಶೇಷಃ ॥ (೨) ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ ॥ ಇತ್ಯಾದಿ ಶಿಷ್ಟೇಃ ॥ ೩೭ ॥

ಅ ॥ (೧) ಉಪಾಸಕನನ್ನು ಕುರಿತು ಭೂಮ ಎಂಬ ಗುಣವು ಉಪಾಸನೆಗೆ ಅರ್ಹವಾಗದಿರುವುದರಿಂದ ಸಂಭೃತ್ಯಾದಿ ಗುಣಗಳಗಿಂತ ವಿಶೇಷವಿಲ್ಲವಾದರೂ (ಅಂದರೆ ಭೂಮಾಖ್ಯಗುಣವು ಸಂಭೃತ್ಯಾದಿಗಳಂತೆಯೇ ಸಮಸ್ತ ಉಪಾಸಕರಿಂದ ಉಪಾಸನೆಗೆ ಅರ್ಹವಾಗಿದ್ದರೂ) ಆಯಾಯ ಉಪಾಸಕರಿಗೆ ಅಪೇಕ್ಷಿತಗಳಾದ ಆನಂದಾದಿ ಗುಣಗಳ ಉಪಾಸನಾನುಸಾರವಾಗಿ ಮುಕ್ತಿಯಲ್ಲಿ ಇಷ್ಟವಾದ ಆನಂದಾದಿರೂಪವಾದ ಫಲವು ಸಿಗುವುದರಿಂದ (ಪ್ರಿಯ್ಯಶಿರಸ್ತ್ವಾದಿ ಗುಣಗಳಂತೆಯೇ ಭೂಮಗುಣವೂ ಆನಂದಾದಿಗುಣಗಳ ವಿಶೇಷವಾದಾಗ್ಯೂ ಉಪಾಸನಾನರ್ಹವಾಗಿರುವುದರಿಂದ ಭೂಮಗುಣದಿಂದ ಫಲವಿಶೇಷವಿಲ್ಲ. (ಏವಂಚ ಇಷ್ಟವಾದ ವಿಷ್ಣ್ವಾನಂದಾದಿಗಳನ್ನು ಉಪಾಸನಾ ಮಾಡಿದರೆ ಅದರಿಂದ ಜೀವನಿಗೆ ಜ್ಞಾನಾನಂದಾದಿ ಸ್ವರೂಪವು ಆವಿರ್ಭೂತವಾಗುತ್ತದೆ. ಆದಕಾರಣ ಇಷ್ಟವಾದ ಫಲವು ಅನ್ಯಥಾ ಸಿದ್ಧವಾಗುವುದರಿಂದ ಭೂಮಗುಣವು ಉಪಾಸ್ಯವಲ್ಲ, ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ— ಶಿಷ್ಟಿಃ=(ಭೂಮಗುಣವನ್ನುಪಾಸನಾ ಮಾಡಬೇಕೆಂದು ವಿಧಿಯು,) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಸರ್ವೋತ್ತಮನಾದ ಶ್ರೀಹರಿಯು ಸರ್ವಗುಣಪರಿಪೂರ್ಣನೆಂದೇ ಉಪಾಸನೆಗೆ ಅರ್ಹನು. ಭೂಮಾ ಎಂದು ಉಪಾಸನಾ ಮಾಡಲ್ಪಡದಿದ್ದರೆ, ಉಪಾಸಕರಿಗೆ ಫಲವನ್ನು ಕೊಡುವುದೇ ಇಲ್ಲ. ತಸ್ಮಾದ್ಭೂಮಾ ಗುಣತೋ ನೈವಿಶಿಷ್ಟಃ ಯಥಾ ಕ್ರತುಃ ಕರ್ಮಮಧ್ಯೇವಿಶಿಷ್ಟಃ=ಹೇಗೆ(ಕ್ರತುವು ಕರ್ಮಗಳಲ್ಲಿ ಶ್ರೇಷ್ಠವೋ, ಹಾಗೆಯೇ ಭೂಮಗುಣವು ಗುಣಗಳಲ್ಲಿ ಶ್ರೇಷ್ಠವು, ಆದಕಾರಣ ಭೂಮಾ ಎಂದೇ ಉಪಾಸನಾ ಮಾಡಬೇಕು. ಹೀಗೆ) ಶಿಷ್ಟರು ಶಾಸನ ಮಾಡಿರುವರು. (ಭೂಮಗುಣವನ್ನು ಉಪಾಸನಾ ಮಾಡಿದರೆ ಚತುರ್ಗುಣಗಳನ್ನುಪಾಸನಾ ಮಾಡಬೇಕೆಂಬುವುದಕ್ಕೆ ಭಂಗವು ಬರುತ್ತದೆಂದು ಹೇಳಕೂಡದು. ಭೂಮಾ=ಪೂರ್ಣವಾದ ಆನಂದವು ಇತ್ಯಾದಿರೂಪದಿಂದ ಆನಂದಾದಿಗುಣಗಳ ಉಪಾಸನಾದಲ್ಲಿ ವಿಶೇಷಣವಾಗಿ ಅಂತರ್ಭೂತವಾಗುತ್ತದೆ.)

ಏವಂಚ ಭೂಮಾಖ್ಯಗುಣವು ಸಂಭೃತ್ವಾದಿ ಗುಣಗಳಂತೆ ಸರ್ವರಿಂದ ಅನುಪಾಸ್ಯವಲ್ಲ. ಮತ್ತೆ ಭೂಮಾ= ಪೂರ್ಣವಾದ ಆನಂದವು ಎಂದು ಸರ್ವರೂ ಉಪಾಸನೆ ಮಾಡಬೇಕು ॥ ೩೭ ॥

೩೮ನೇ ನಾನಾಶಬ್ದಾಧಿಕರಣದಲ್ಲಿ ಭೂಮಗುಣವು ಅಧಿಕಾರಿಗಳಿಗೆ ತಾರತಮ್ಯದಿಂದ ತೋರುತ್ತದೋ, ಏಕಪ್ರಕಾರವಾಗಿಯೇ ತೋರುತ್ತದೋ ಎಂದು ಸಂಶಯವು ಬಂದರೆ ಏಕಪ್ರಕಾರವಾಗಿ ತೋರುತ್ತದೆಂದು ಪೂರ್ವಪಕ್ಷವು. ತಾರತಮ್ಯದಿಂದಲೇ ತೋರುತ್ತದೆಂದು ಸಿದ್ಧಾಂತವು. ಅದರಲ್ಲಿ ಅಕಲ್ಪನಾ=(ಭೂಮಗುಣದಲ್ಲಿ ವಿಶೇಷ ಕಲ್ಪನೆಯು ಕೂಡದಿರುವಿಕೆ)ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಭೂಮಗುಣ ಉಪಾಸಕಾನಾಮೇಕಪ್ರಕಾರೇಣೈವ ಪ್ರತೀಯತೇ ಇತ್ಯಂಗೀಕಾರ್ಯಂ ॥ ವಿಶೇಷಸ್ಯಾಕಲ್ಪನೋಪಪತ್ತೇರಿತಿ ನ ಮಂತವ್ಯಂ ॥ (೨) ಯಾವಾನೇವಾಧಿಕಾರೇಷು ವಿಶೇಷೋऽನೂನ ಏವ ಹಿ । ಅತೋ ಭೂಮತ್ವದೃಷ್ಟ್ಯೇ ಚ ಬ್ರಹ್ಮಾದೀನಾಂ ಪೃಥಕ್ಪೃಥಕ್ ಇತಿ ವಿಶೇಷಸ್ಯಾನೂನತ್ವವಚನಾತ್ ॥ ೩೮ ॥

ಅ ॥ (೧) ಭೂಮಾಖ್ಯಗುಣವನ್ನುಪಾಸನಾ ಮಾಡುವವರಿಗೆ ಭೂಮಗುಣವು (ಪೂರ್ಣತ್ವಾಖ್ಯ ಗುಣವು) ಉಪಾಸನಾದಲ್ಲಿ ಒಂದೇ ರೀತಿಯಾಗಿ ತೋರುತ್ತದೆಂದಂಗೀಕರಿಸಬೇಕು. (ಅಂದರೆ ಬ್ರಹ್ಮನಿಗೆ ಭಗವದಾನಂದಾದಿಗಳಲ್ಲಿ ಎಷ್ಟು ಪೂರ್ಣತ್ವವು ಕಾಣುತ್ತದೋ, ಅಷ್ಟೇ ಇತರರಿಗೂ ಕಾಣುತ್ತದೆ.) ವಿಶೇಷವನ್ನು ಕಲ್ಪಿಸತಕ್ಕ ಪ್ರಮಾಣವು ಇಲ್ಲದಿರುವುದರಿಂದ ವಿಶೇಷ ಕಲ್ಪನೆಯು ಅನುಪಪನ್ನವು (ಕೆಲವರಿಗೆ ಸಮ್ಯಕ್ ಪೂರ್ಣಾನಂದವು, ಕೆಲವರಿಗೆ ಕಿಂಚಿತ್ ಪೂರ್ಣಾನಂದವು, ಎಂಬ ಉಪಾಸನೆಯು ಮಿಥ್ಯೋಪಾಸನೆಯಾದುದರಿಂದ ಅದು ಕೂಡಲಾರದು. ಆದಕಾರಣ ಭೂಮಗುಣದಲ್ಲಿ ತಾರತಮ್ಯವು ಯುಕ್ತವಲ್ಲ ಎಂದು ತಿಳಿಯಕೂಡದು. (೨) (ಏಕೆಂದರೆ—ಅನೂನಕಾ=(ಉಪಾಸ್ಯಗಳಾದ ಆನಂದಾದಿ ಗುಣಗಳಲ್ಲಿ ವಿಶೇಷಣವಾದ ಭೂಮಾ ಎಂಬ ಗುಣಕ್ಕೆ ಬ್ರಹ್ಮಾದ್ಯಧಿಕಾರಿ ವಿಶೇಷಾಪೇಕ್ಷೆಯಿಂದ ಊನತ್ವವಿಲ್ಲದಿರುವಿಕೆ,) (ಅಧಿಕಾರಾನುಸಾರಿತ್ವವೇ) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಬ್ರಹ್ಮಾದಿಗಳಿಗೆ ಉಪಾಸನಾಧಿಕಾರಗಳಲ್ಲಿ ತಾರತಮ್ಯ ರೂಪವಾದ ವಿಶೇಷವು ಅನೂನವಾಗಿಯೇ ಇದೆ. (ಅಧಿಕಾರಾನುಸಾರವಾಗಿಯೇ ಇದೆ.) ಆದಕಾರಣ ಭೂಮಗುಣ ದೆಶೆಯಿಂದ ಎಷ್ಟು ವಿಶೇಷವು (ತಾರತಮ್ಯವು) ಪೂರ್ಣತ್ವ ದೃಷ್ಟಿಯಿಂದ ವಿಷಯೀಕರಿಸಲಿಕ್ಕೆ ಯೋಗ್ಯವೋ, ಅಷ್ಟು ಪ್ರಪ್ರತ್ಯೇಕವಾಗಿಯೇ ಬ್ರಹ್ಮಾದಿಗಳಿಗೆ ತೋರುತ್ತದೆ. ಹೀಗೆ ಉಪಾಸ್ಯಗಳಾದ ಆನಂದಾದಿ ಗುಣಗಳಲ್ಲಿ ವಿಶೇಷಣವಾದ ಭೂಮತ್ವಾಖ್ಯವಿಶೇಷವು ಬ್ರಹ್ಮಾದ್ಯಧಿಕಾರಿ ವಿಶೇಷಾಪೇಕ್ಷಯಾ ಅನೂನವು. (ಅಧಿಕಾರ ಸಾಮ್ಯವು,) ಅಂದರೆ ಆವಾವ ಅಧಿಕಾರಾನುಸಾರವು; ಎಂದು ವಚನವು. ಬ್ರಹ್ಮಾದಿಗಳಿಗೆ ಪ್ರಪ್ರತ್ಯೇಕ ಕಾಣಲಿಕ್ಕೆ ಯೋಗ್ಯತೆಗೆ ಕಲ್ಪಕವಿದೆ. (ಏವಂಚ ಭೂಮಾಖ್ಯ ಗುಣವು ಅಧಿಕಾರಾನುಸಾರಿಯಾದುದರಿಂದ ಬ್ರಹ್ಮಾದ್ಯಧಿಕಾರಿಗಳಲ್ಲಿ ತಾರತಮ್ಯವು ಯುಕ್ತವು.) ॥ ೩೮ ॥

೩೯ನೇ ವಿಕಲ್ಪಾಧಿಕರಣದಲ್ಲಿ ಮುಮುಕ್ಷುಗಳು ತಂತಮ್ಮ ಬಿಂಬ ರೂಪದಿಂದ ಅತಿರಿಕ್ತವಾದ ಭಗವದ್ರೂಪವನ್ನು ವಿಷಯೀಕರಿಸುವ ಭಗವದುಪಾಸನೆಯನ್ನು ಮಾಡಬೇಕೋ ಬೇಡವೋ, ಎಂದು ಸಂದೇಹವು ಬಂದರೆ ಮಾಡಕೂಡದೆಂದು ಪೂರ್ವಪಕ್ಷವು. ತಂತಮಗೆ ಮೋಕ್ಷಕ್ಕೆ ಸಾಧನವಾದ ಬಿಂಬರೂಪದಿಂದ ಅತಿರಿಕ್ತವಾದ ನರಸಿಂಹಾದಿಭಗವದ್ರೂಪಗಳ ಉಪಾಸನೆಯನ್ನು ಮಾಡಲೇಬೇಕೆಂದು ಸಿದ್ಧಾಂತವು. ಅದರಲ್ಲಿ ಶುದ್ಧವೈರೂಪ್ಯಂ=(ನಿಷ್ಕಾಮವಾದ ಮುಕ್ತಿಗೆ ಸಾಧನವಾದ ಬಿಂಬೋಪಾಸನೆಗೆ ವಿಘ್ನಕಾರಿಯಾದುದರಿಂದ ವಿರೋಧವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಶುದ್ಧಮೋಕ್ಷಸಾಧನವೈರೂಪ್ಯಾನ್ಮೋಕ್ಷಸಾಧನತ್ವೇನೋಪದಿಷ್ಟಂ ವಿನಾ ವಿಷ್ಣೋರೇವೋಪಾಸನಾಂತರಸ್ಯಾಕರ್ತವ್ಯತಾ (೨) ಅವಿಘ್ನತಾಸಾಧನತ್ವಾತ್ ॥೩೯॥

ಅ ॥ (೧) ನಿಷ್ಕಾಮವಾದ ಮೋಕ್ಷಸಾಧನವಾದ (ಬಿಂಬರೂಪವಾದ, ಆ ಬಿಂಬೋಪಾಸನೆಗೆ ವಿಘ್ನಕಾರಿಯಾಗಿ ಅವಶ್ಯಕತ್ವಾಭಾವರೂಪವಿರೋಧವಿರುವುದರಿಂದ ಮುಕ್ತಿಗೆ ಸಾಧನವೆಂದು ಉಪದಿಷ್ಟವಾದ ಬಿಂಬರೂಪದ ಉಪಾಸನೆ ಹೊರತು ಶ್ರೀವಿಷ್ಣುವಿನ ರೂಪಗಳಲ್ಲಿಯೇ ತನ್ನ ಬಿಂಬರೂಪದಿಂದ ಅತಿರಿಕ್ತವಾದ ಭಗವದ್ರೂಪವನ್ನು ಉಪಾಸನಾ ಮಾಡಕೂಡದು. (ಅದನ್ನು ಹೇಳತಕ್ಕ ವೇದಗಳಿಗೆ ವೈಯರ್ಥ್ಯವು, ಎಂದರೆ ಹಾಗೆ ಹೇಳಕೂಡದು. (೨) ಏಕೆಂದರೆ ಅವಿಘ್ನತ್ವಂ=(ವಿಶಿಷ್ಟ ಮೋಕ್ಷ ಸಾಧನಕ್ಕೆ ವಿಘ್ನವಿಲ್ಲದಿರುವಿಕೆ,) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಮುಕ್ತಿಗೆ ಸಾಧನವಾದ ಬಿಂಬರೂಪವನ್ನುಪಾಸನಾಮಾಡಿದ ಮೇಲೆ ಮಾಡತಕ್ಕ ಬಿಂಬರೂಪದಿಂದ ಅತಿರಿಕ್ತವಾದ ನರಸಿಂಹಾದಿ ರೂಪಾಂತರಗಳ ಉಪಾಸನೆಯು ವಿಶಿಷ್ಟ ಮೋಕ್ಷಕ್ಕೆ ಪ್ರತಿಬಂಧಕವಾದ ದುರಿತವನ್ನು ಹೋಗಲಾಡಿಸುವುದರಿಂದ ದುರಿತಾದಿ ನಿವೃತ್ತಿ ರೂಪವಾದ ವಿಶಿಷ್ಟ ಮೋಕ್ಷಕ್ಕೆ) ವಿಘ್ನ ಬಾರದಿರಲಿಕ್ಕೆ ಸಾಧನವಾಗಿರುವುದರಿಂದ (ಬಿಂಬಾತಿರಿಕ್ತವಾದ ನರಸಿಂಹಾದ್ಯುಪಾಸನೆಯನ್ನು ಮಾಡಲೇಬೇಕು. ಆದಕಾರಣ ಅದನ್ನು ಹೇಳತಕ್ಕ ವೇದಗಳಿಗೆ ವೈಯರ್ಥ್ಯವಿಲ್ಲ.) ॥೩೯॥

೪೦ನೇ ಕಾಮ್ಯಾಧಿಕರಣದಲ್ಲಿ ಕಾಮ ಸಾಧನಗಳಾದ ಭಗವದ್ರೂಪಗುಣಗಳನ್ನು ವಿಷಯೀಕರಿಸಿಕೊಂಡಿರುವ ಉಪಾಸನವು ಅವಶ್ಯಕವೋ, ವೈಕಲ್ಪಿಕವೋ, ಎಂದು ಸಂದೇಹವು ಬಂದರೆ—ಅವಶ್ಯಕವೆಂದು ಪೂರ್ವಪಕ್ಷವು. ವೈಕಲ್ಪಿಕವೆಂದು ಸಿದ್ಧಾಂತವು. ಅದರಲ್ಲಿ ಅಂಗತ್ವಂ=(ಕಾಮ್ಯವಾದ ಉಪಾಸನೆಗೆ ಮೋಕ್ಷದ ಅಂಗತ್ವವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಕಾಮ್ಯಸಾಧನಾನಾಮಪಿ ಗುಣಾನಾಮಂಗತ್ವಾದೇವೋಪಸಂಹರ್ತವ್ಯತಾ ನಿಯಮಃ । (೨) ಅನುಪಸಂಹಾರೇ ವಿರೋಧಾಭಾವಾತ್ । ಕಾಮ್ಯಾನಾಮ ನಿಯತಾಂಗತ್ವಾಚ್ಚ ॥ (೩) ಅರ್ಥಾದಿಧರ್ಮಸಿದ್ಧೌ ಹಿ ನ ನಿಯತ್ಯಾಂಗವಿಷ್ಯತೇ ॥ ಇತಿ ಬ್ರಹ್ಮತರ್ಕೇ ॥೪೦॥

ಅ॥ (೧)ಅರ್ಥ ಮೊದಲಾದ ಕಾಮ್ಯಗಳಿಗೆ ಸಾಧನಗಳಾದ ಶ್ರೀಕರ ನರಸಿಂಹ ಮೊದಲಾದ ಭಗವದ್ರೂಪಾದಿಗಳ ಗುಣಗಳಿಗೆ ಅಂಗವಾಗಿರುವುದರಿಂದಲೇ ಗುರುಗಳ ಪ್ರಸಾದ ದ್ವಾರಾ ಜ್ಞಾನಕ್ಕೆ ಸಾಧನವಾದ ಅರ್ಥಾದಿಫಲೋಪಾಸನಾ ವಿಷಯವಾಗಿ ಮೋಕ್ಷಕ್ಕೆ ಉಪಯುಕ್ತವಾಗಿರುವುದರಿಂದಲೇ) ಆ ಉಪಾಸನೆಯೂ ಅವಶ್ಯಕವಾಗಿರುವ ಪ್ರಯುಕ್ತವೇ ನಿಯಮೇನ ಆ ಗುಣಗಳನ್ನು ಉಪಸಂಹಾರ ಮಾಡಲೇಬೇಕು. (ಏವಂಚ ಕಾಮ್ಯೋಪಾಸನೆಯೂ ಮುಕ್ತಿಗೆ ಅಂಗವಾಗಿರುವುದರಿಂದ ಅವಶ್ಯಕವಾದ ಕಾರಣ ವೈರಾಗ್ಯವಾದವು ವ್ಯರ್ಥವೇ,) ಎಂದರೆ) ಹಾಗೆ ಹೇಳಕೂಡದು. (೨) ಏಕೆಂದರೆ, ಅವಿರೋಧಃ (ಜ್ಞಾನಾಸಿದ್ಧಿ ರೂಪವಾದ ವಿರೋಧವೂ, ವಿಶಿಷ್ಟಮೋಕ್ಷಕ್ಕೆಪ್ರತಿಬಂಧಕವಾದ ದುರಿತ ನಿವೃತ್ತ್ಯಭಾವ ರೂಪವಾದ ವಿರೋಧವೂ ಇಲ್ಲದಿರುವಿಕೆಯೂ,) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಗುಣಗಳನ್ನುಪಸಂಹಾರ ಮಾಡದಿದ್ದರೆ ಮುಕ್ತಿಗೆ ವಿರೋಧವಿಲ್ಲ. (ಅಂದರೆ ತಂತಮ್ಮ ಬಿಂಬೋಪಾಸನದಿಂದಲೇ ಜ್ಞಾನವು ಸಿದ್ಧಿಯಾಗಲು ಜ್ಞಾನಾಸಿದ್ಧಿರೂಪವಾದ ವಿರೋಧವೂ ನರಸಿಂಹಾದ್ಯುಪಾಸನದಂತೆ ವಿಶಿಷ್ಟ ಮೋಕ್ಷಕ್ಕೆ ಪ್ರತಿಬಂಧಕವಾದ ದುರಿತ ನಿವೃತ್ತ್ಯಭಾವರೂಪವಾದ ವಿರೋಧವೂ ಇಲ್ಲ) ಮತ್ತು ದ್ರವ್ಯಾಪೇಕ್ಷೆಯಿಲ್ಲದಿರುವ ಗುರುಗಳಿಂದಲೂ

ಜ್ಞಾನವು ಹುಟ್ಟುವುದರಿಂದ ಜ್ಞಾನಕ್ಕೆ ಅರ್ಥಾದಿಗಳು. ನಿಯಮೇನ ಅವಶ್ಯಕಗಳಾದ ಅಂಗಗಳಲ್ಲ.(ಅಂದರೆ ಕ್ವಚಿತ್ ದ್ರವ್ಯಾದಿಗಳು ಇಲ್ಲದಿದ್ದರೂ ಜ್ಞಾನವು ಹುಟ್ಟುತ್ತದೆ. ಕ್ವಚಿತ್ ದ್ರವ್ಯಾದಿಗಳು ಇದ್ದರೂ ಜ್ಞಾನವು ಹುಟ್ಟುವುದಿಲ್ಲ. ಹೀಗೆ ಅನ್ವಯ ವ್ಯತಿರೇಕ ವ್ಯಭಿಚಾರವಿದ್ದ ಪ್ರಯುಕ್ತ ನಿಯಮವಿಲ್ಲ.) ೩) ಅರ್ಥ ಮೊದಲಾದ ಧರ್ಮಜ್ಞಾನಗಳ ಸಿದ್ಧಿಗಾಗಿ ಅರ್ಥಾದಿಗಳು (ಕ್ವಚಿತ್ ಅರ್ಥಾದಿಗಳಿಂದಲೂ ಧರ್ಮವು ಸಿದ್ಧಿಸದೆ ಇರುವುದರಿಂದ) ನಿಯಮೇನ ಅಂಗಗಳೆಂದು ಇಚ್ಛಿಸಲ್ಪಡುವುದಿಲ್ಲ. ಎಂದು ಬ್ರಹ್ಮತರ್ಕದಲ್ಲಿದೆ. (ಏವಂಚ ಕಾಮ್ಯಗುಣಗಳನ್ನು ಉಪಸಂಹಾರ ಮಾಡದಿದ್ದರೆ ವಿರೋಧವಿಲ್ಲದಿರುವುದರಿಂದ ಕಾಮ್ಯೋಪಾಸನೆಯು ವೈಕಲ್ಪಿಕವಾದಕಾರಣ ವೈರಾಗ್ಯ ವಾದವು ಸಾರ್ಥಕವೇ) || ೪೦ ||

೪೧ನೇ ಅಂಗಾಧಿಕರಣದಲ್ಲಿ ಬ್ರಹ್ಮಾದಿ ದೇವತೆಗಳು ಶ್ರೀ ಪರಮಾತ್ಮನ ಅಂಗಗಳನ್ನು ಆಶ್ರಯಿಸಿರುತ್ತಾರೆಂದುಪಾಸನೆಯನ್ನು ದೇವತೆಗಳು ಮಾಡಬೇಕೋ, ಬೇಡವೋ, ಎಂದು ಸಂದೇಹವು ಬಂದರೆ ಮಾಡಕೂಡದೆಂದು ಪೂರ್ವಪಕ್ಷವು. ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಅವಿಶೇಷದೃಷ್ಟಿಃ=(ದೇವತೆಗಳು ಭಗವದಂಗಾಶ್ರಿತರೆಂದು ಪಾಸನೆಯನ್ನು ದೇವತೆಗಳು ಮಾಡಬೇಕೆಂದು ವಿಶೇಷ ವಚನವಿಲ್ಲದಿರುವುದು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ || (೧) ನ ಚ ದೇವಾನಾಮಿತಿ ತತ್ರೈವ ವಿಶೇಷವಚನಾಭಾವಾದ್ಬ್ರಹ್ಮಾ ಶಿರಸಿ ಲಲಾಟೇ ರುದ್ರ ಇತ್ಯಾದೀನಾಂ ನಾವಶ್ಯೋಪಾಸ್ಯತಾ ದೇವಾದೀನಾಮೇವ || (೨) ಧ್ಯಾಯೇದಂಗೇಷ್ವಂಗದೇವತಾಃ ಪರಸ್ಯ ವಿಶಿಷ್ಟಾ ಹಿ ಗುಣಾ ಮುಕ್ತೌ ದೇವಾನಾಂ ಭವಂತಿ ತೇ ಹಿ ತಾದೃಶಾಸ್ತೇ ಹಿ ಹರೇರನುರೂಪಾ ಇತಿ ಶ್ರುತೇರ್ಗುಣವೈಶೇಷ್ಯಾತ್||**
**|| ೪೧ ||**

ಅ || (೧) ದೇವತೆಗಳು ಶ್ರೀಹರಿಯ ಅಂಗಗಳನ್ನು ಆಶ್ರಯಿಸಿರುತ್ತಾರೆಂದುಪಾಸನೆಯನ್ನು ದೇವತೆಗಳು ಮಾಡಬೇಕೆಂದು ವಿಶೇಷವಚನವಿಲ್ಲದಿರುವುದರಿಂದ 'ಬ್ರಹ್ಮಾ ಶಿರಸಿ ಲಲಾಟೇ ರುದ್ರಃ' ಇದು ಮೊದಲಾದ ವಾಕ್ಯಗಳಲ್ಲಿ ಹೇಳಲ್ಪಟ್ಟ, ಬ್ರಹ್ಮನಿಗೆ ಆಶ್ರಯವಾದ ಶಿರಸ್ಸುಳ್ಳವನು, ರುದ್ರನಿಗೆ ಆಶ್ರಯವಾದ ಲಲಾಟವುಳ್ಳವನು ಶ್ರೀಹರಿಯು ಇತ್ಯಾದಿಗಳು ದೇವಾದಿಗಳಿಂದಲೇ ಅವಶ್ಯವಾಗಿ ಉಪಾಸ್ಯಗಳಲ್ಲ, (ಇತರರಾದ ಮನುಷ್ಯರಿಗೆ ಅದರಲ್ಲಿ ಅಧಿಕಾರವೇ ಇಲ್ಲದಿರುವುದರಿಂದ ನಿರಧಿಕಾರಿಕವೆಂದೇ ಪ್ರಾಪ್ತವಾಯಿತು. ಎಂದರೆ ಹಾಗೆ) ಹೇಳಕೂಡದು (೨) ಏಕೆಂದರೆ — **ಗುಣವೈಶೇಷ್ಯಂ**=(ಶ್ರೀಹರಿಯ ಅನುರೂಪತ್ವ ಪರಮಸ್ಥಾನ ಪ್ರಾಪ್ತಿರೂಪವಾದ ಫಲಯೋಗ್ಯತ್ವ ಮೊದಲಾದ ಗುಣಗಳು ದೇವತೆಗಳಿಗೇನೇ ಇರುವವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಅಂಗದೇವತೆಗಳನ್ನು ಶ್ರೀಹರಿಯ ಆಯಾಯ ಅಂಗಗಳಿಂದ ಹುಟ್ಟಿದವರೆಂದೂ ಆಯಾಯ ಅಂಗಗಳನ್ನು ಆಶ್ರಯಿಸಿರುತ್ತಾರೆಂದೂ ಧ್ಯಾನಿಸಬೇಕು. ಏಕೆಂದರೆ ದೇವತೆಗಳಿಗೇನೇ ಮುಕ್ತಿಯಲ್ಲಿ ಪರಮಸ್ಥಾನ ಮೊದಲಾದವುಗಳು ಉತ್ತಮ ಗುಣಗಳಿವೆ.(ಆದಕಾರಣ ದೇವತೆಗಳೇ ಈ ಧ್ಯಾನವನ್ನುಮಾಡಬೇಕು.) ಆ ದೇವತೆಗಳೇ ಆ ಫಲಕ್ಕೆ ಯೋಗ್ಯರಾಗಿರುವುದರಿಂದ ಅವರೇ ಆ ಉಪಾಸನವನ್ನು ಮಾಡಬೇಕು.) ಆ ದೇವತೆಗಳೇ ಶ್ರೀಹರಿಗೆ ಅನುರೂಪರು, ಎಂಬ ಶ್ರುತಿಯಿಂದ '**ಚಕ್ಷೋಃಸೂರ್ಯೋ ಅಜಾಯತ**'' ಬ್ರಹ್ಮಾ ಶಿರಸಿ ಲಲಾಟೇ ರುದ್ರಃಇದು ಮೊದಲಾದ ಗುಣಗಳು ಆಯಾಯ ದೇವತೆಗಳಲ್ಲಿಯೇ ವಿಶೇಷವಾಗಿರುವುದರಿಂದ ಮುಕ್ತಿಯಲ್ಲಿಯೂ ಆಯಾಯ ಭಗವಚ್ಚಕ್ಷುಃ ಸ್ಥಿತತ್ವ ಮೊದಲಾದ ಗುಣಗಳು ಆಯಾಯ ದೇವತೆಗಳಲ್ಲಿ ವಿಶೇಷತಃ ಇರುವ ಪ್ರಯುಕ್ತ ಆಯಾಯ ದೇವತೆಗಳೇ ಹಾಗೆ ಹಾಗೆ ಉಪಾಸನೆ ಮಾಡಬೇಕು. ಅಂದರೆ ನಾನು ಶ್ರೀಹರಿಯ ಕಣ್ಣಿನಲ್ಲಿರುವವನು, ಅಥವಾ ಶ್ರೀಹರಿಯು ನನಗೆ ಆಧಾರವಾದ

ಕಣ್ಣುಗಳುಳ್ಳವನು, ಇತ್ಯಾದಿ ರೂಪದಿಂದ ಉಪಾಸನೆಮಾಡಬೇಕು. (ಏವಂಚ ದೇವತೆಗಳಿಗೇನೇ ಹರ್ಯಂಗ ರೂಪತ್ವ ಮೊದಲಾದ ಗುಣಗಳು ಇದ್ದುದರಿಂದ ದೇವತೆಗಳಿಗೇನೇ ಅಂಗದೇವತೋಪಾಸನೆಯಲ್ಲಿಅಧಿಕಾರವು ಆದಕಾರಣ ಆ ವಿದ್ಯೆಗಳು ಸಾರ್ಥಕಗಳೇ.) ॥ ೪೧ ॥

೪೨ನೇ ನವಾಧಿಕರಣದಲ್ಲಿ ಭಗವದಂಗಗಳನ್ನು ಆಶ್ರಯಿಸಿರುತ್ತಾರೆಂದು ಉಪಾಸನವನ್ನು ಮಾಡಬೇಕೋ ಬೇಡವೋ, ಎಂದು ಸಂದೇಹವು ಬಂದರೆ ಮಾಡಕೂಡದೆಂದು ಪೂರ್ವಪಕ್ಷವು. ದೇವತೆಗಳೇ ಹಾಗೆ ಉಪಾಸನೆ ಮಾಡಬೇಕೆಂದು ಸಿದ್ಧಾಂತವು. ಆದರಲ್ಲಿ ಕ್ರಿಯಾ=(ಅಂಗದೇವತೋಪಾಸನೆಯು ಕ್ರಿಯೆಯು) ಎಂಬ ಪೂರ್ವಪಕ್ಷನ್ಯಾಯವನ್ನು ಎತ್ತಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಕ್ರಿಯಾತ್ವಾದುಪಾಸನಾಯಾಃ ಉಪಸಂಹಾರಸ್ಯಾಗ್ನಿಷ್ಟೋಮಾದಿವತ್ಸರ್ವಶಾಖಂ ವಕ್ತವ್ಯತಾ ॥ (೨) ಉಪಾಸನಾ ಯಜನಂ ಚೇತಿ ಸಾಮ್ಯಂ ತತ್ತದ್ವಿಶೇಷಾನ್ ಸಂಹರೇತ್ಸರ್ವತಶ್ಚ । ತಥಾ ಕರ್ತ್ರ್ಯಾಣಾಂ ತತ್ಫಲಾನಾಂ ವಿಶೇಷಾದ್ವ್ಯರ್ಥಾಹಿ ಶಾಖಾ ಅನ್ಯಥೈವಂ ಚ ಸಾರ್ಥಾಃ ॥ ಇತ್ಯುಪಾಸನಾವಿಶೇಷಾಣಾಮಧಿಕಾರಿ ವಿಶೇಷಾಣಾಂ ಚಾಗಮೋsವಗಮಾತ್ ॥ ೪೨ ॥**

ಅ ॥ (೧) ಅಂಗದೇವತೋಪಾಸನೆಯು ಕರ್ತವ್ಯವಾದರೆ ಅದು ಕ್ರಿಯೆಯಾದ ಪ್ರಯುಕ್ತ ಅಗ್ನಿಷ್ಟೋಮಾದಿಗಳಂತೆ ಸರ್ವಶಾಖೆಗಳಲ್ಲಿ ಉಪಾಸನೆಯನ್ನು ಪ್ರತಿಪಾದಿಸುವ ವಾಕ್ಯದಿಂದ ಕೂಡಿಕೊಂಡು ಚಕ್ಷೋಸ್ಸೂರ್ಯೋ ಅಜಾಯತ ಇತ್ಯಾದಿಗಳನ್ನು ಅಗ್ನಿಷ್ಟೋಮಾದಿಗಳಂತೆಯೇ ಹೇಳಬೇಕಿತ್ತು. ಹೇಳಲಿಲ್ಲ. ಆದಕಾರಣ ಪ್ರತಿಶಾಖೆಗಳಲ್ಲಿಯೂ ಹೇಳದಿರುವುದರಿಂದ ಅಂಗದೇವತೋಪಾಸನೆಯನ್ನು ಯಾರೂ ಕೂಡ ಮಾಡಕೂಡದು, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಆಗಮಃಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಯದ್ಯಪಿ ಉಪಾಸನಾ ಯಾಗ ಇವುಗಳು ಎರಡೂ ಕ್ರಿಯೆಗಳಾಗಿರುವುದರಿಂದ ಇವುಗಳಿಗೆ ಸಾಮಾನ್ಯತಃ ಸಾಮ್ಯವು (ಆದುದರಿಂದಲೇ ಉಪಾಸೀತ ಎಂದು ಅಗ್ನಿಷ್ಟೋಮದಂತೆ ಸರ್ವಶಾಖೆಗಳಲ್ಲಿಯೂ ಹೇಳಿದೆ.) ಆದಾಗ್ಯೂ ಬ್ರಹ್ಮಾ ಶಿರಸಿ, ಚಕ್ಷೋಸ್ಸೂರ್ಯೋ ಅಜಾಯತ ಇದು ಮೊದಲಾದ ಚತುರ್ಮುಖಾಶ್ರಯ ಶೀರ್ಷತ್ವ ಮೊದಲಾದ ಉಪಾಸನಾ ವಿಶೇಷಗಳನ್ನು ಎಲ್ಲಿ ಎಲ್ಲಿ ಹೇಳಿವೆಯೋ ಆ ಎಲ್ಲಾ ಶಾಖೆಗಳಿಂದಲೂ ಉಪಸಂಹಾರ ಮಾಡಿ ಉಪಾಸನಾ ಮಾಡಬೇಕು. ಹಾಗೆಯೇ ಅಲ್ಲಿ ಅಲ್ಲಿ ಹೇಳಿದ ಚತುರ್ಮುಖಾಶ್ರಯ ಶಿರಸ್ತ್ವ ಮೊದಲಾದ ಭಗವದ್ಗುಣಗಳನ್ನುಪಸಂಹಾರಮಾಡಿ ಉಪಾಸನಾ ಮಾಡತಕ್ಕ ಅಧಿಕಾರಿಗಳಿಗೂ ಅವರವರ ಉಪಾಸನಾ ಫಲಗಳಿಗೂ ವಿಶೇಷವಿದ್ದಪ್ರಯುಕ್ತ ವಿಶೇಷ ಪ್ರತಿಪಾದಕಗಳಾದ ಶಾಖೆಗಳನ್ನು ಯಾರೂ ಉಪಾಸನಾ ಮಾಡದಿದ್ದರೆ ಅವುಗಳು ವ್ಯರ್ಥಗಳೇ ಆಗುವವು. ಶ್ರೀಹರಿಯ ಅಂಗಗಳನ್ನು ದೇವತೆಗಳು ಆಶ್ರಯಿಸಿರುತ್ತಾರೆಂದು ದೇವತೆಗಳುಪಾಸನಾ ಮಾಡಬೇಕೆಂದಾದರೆ ಬ್ರಹ್ಮಾ ಶಿರಸಿ ಇತ್ಯಾದಿ ಶಾಖೆಗಳು ಸಪ್ರಯೋಜನಗಳಾಗುತ್ತವೆ. ಇತ್ಯಾದ್ಯಾಗಮಗಳಿಂದ ಅಲ್ಲಿ ಅಲ್ಲಿ ಹೇಳಿದ ಚತುರ್ಮುಖಾಶ್ರಯ ಶೀರ್ಷತ್ವಾದಿ ಗುಣೋಪಸಂಹಾರಪೂರ್ವಕವಾಗಿ ಮಾಡತಕ್ಕ ಉಪಾಸನಾ ವಿಶೇಷಗಳೂ ಅಧಿಕಾರಿ ವಿಶೇಷವಾದ ದೇವಾದಿಗಳೂ ಫಲವಿಶೇಷಗಳೂ ಆಗಮದಲ್ಲಿ ತಿಳಿದುಬರುತ್ತವೆ. (ಏವಂಚ ಅಂಗ ದೇವತೋಪಾಸನವನ್ನು ದೇವತೆಗಳೇ ಮಾಡಬೇಕೆಂದು ತಿಳಿದುಬರುವುದರಿಂದ ಆ ವಿದ್ಯೆಗಳಿಗೆ ಸಾರ್ಥಕ್ಯವಿದೆ) ॥ ೪೨ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯವಿವರಣೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ।

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ಶ್ರೀಮನ್ನ್ಯಾಯ ವಿವರಣದಲ್ಲಿ ೩ನೇ ಅಧ್ಯಾಯದಲ್ಲಿ ೩ನೇ ಪಾದವು ಸಮಾಪ್ತವಾಯ್ತು

# ನಾಲ್ಕನೇ ಪಾದವು

ಅವ ॥ ಈ ೪ನೇ ಪಾದವು ಉಪಾಸನೆಯಿಂದುಂಟಾದ ಭಗವದಪರೋಕ್ಷಜ್ಞಾನ ಸಾಮರ್ಥ್ಯವನ್ನು ಪ್ರತಿಪಾದಿಸುವುದಕ್ಕಾಗಿ ಪ್ರವೃತ್ತವಾಗಿದೆ.

ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುವರು.

> ಔದಾರ್ಯಮುಚ್ಛ್ರಾವಚಶಕ್ತಿರಾತ್ಮಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ । ಸ್ವಾತಂತ್ರ್ಯಮಾಪೂರ್ಣವಿಶೇಷಯೋಗ್ಯತಾ ವಿರೋಧಹಾನಿಶ್ಚ ಚತುರ್ಥಪಾದೇ ॥ ವ್ಯವಸ್ಥಿತಿಸ್ಸತಿ ವಿಶೇಷಸ್ಥಿತಿಶ್ಚ ನಿಷೇಧಸಾಮಾನ್ಯವಿಧಿಕ್ರಿಯಾಣಾಂ । ವಿಭಕ್ತತಾ ಚಾಕ್ಷರಯೈವ ಸಿದ್ಧಿರ್ವಿಪಕ್ಷಸಂಪ್ರಾಪ್ತಿವಿರೋಧಹೇತವಃ । ಎಂದು.

೧ನೇ ಪುರುಷಾರ್ಥಾಧಿಕರಣದಲ್ಲಿ ಬ್ರಹ್ಮಜ್ಞಾನವು ಮೋಕ್ಷಮಾತ್ರಕ್ಕೆ ಸಾಧನವೋ, ಫಲಾಂತರಗಳಿಗೂ ಸಾಧನವಾಗುತ್ತದೋ, ಎಂದು ಸಂದೇಹವು ಬಂದರೆ ಜ್ಞಾನವು ಮೋಕ್ಷಮಾತ್ರಕ್ಕೆ ಸಾಧನವೆಂದು ಪೂರ್ವಪಕ್ಷವು. ಮೋಕ್ಷ ಸ್ವರ್ಗ ಮೊದಲಾದ ಸರ್ವ ಪುರುಷಾರ್ಥಗಳಿಗೂ ಸಾಧನವೆಂದು ಸಿದ್ಧಾಂತವು. ಅದರಲ್ಲಿ ಔದಾರ್ಯಂ (ವಿರಕ್ತಿಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಜ್ಞಾನಿನ ಔದಾರ್ಯಾನ್ಮೋಕ್ಷಾದನ್ಯಫಲೇಚ್ಛಾಯಾ ಏವಾಸಂಭವಾತ್ತದುಕ್ತಿಃ ಪ್ರಶಂಸಾಮಾತ್ರಮಿತಿ ವಾಚ್ಯಂ । (೨) ಪ್ರಾಯಶೋ ನ ಸಂಭವತ್ಯೇವ । ಕಸ್ಯಚಿತ್ಸ್ವೈಭರ್ಯಾದಿವದ್ಭವತಿ ಚೇಜ್ಜ್ಞಾನೇನೈವಾಶೇಷಮಿಷ್ಟಂ ಭವತೀತಿ ವ್ಯವಸ್ಥೋಪಪತ್ತೇಃ ॥ ೧ ॥

ಅ ॥ (೧) ಜ್ಞಾನಿಗಳು ಸಾಂಸಾರಿಕಫಲಗಳನ್ನು ಅತಿಶಯವಾಗಿ ಬಿಟ್ಟಿರುವುದರಿಂದಲೇ ಮುಕ್ತಿಗಿಂತ ಇತರವಾದ ಫಲದಲ್ಲಿ ಇಚ್ಛೆಯೇ ಸರ್ವಥಾ ಕೂಡದಿರುವುದರಿಂದ 'ಜ್ಞಾನಾದೇವ ಸ್ವರ್ಗಃ' ಇತ್ಯಾದಿ ರೂಪವಾದ ಜ್ಞಾನವು ಮೋಕ್ಷೇತರ ಪುರುಷಾರ್ಥಕ್ಕೆ ಸಾಧನವಾಗಿದೆ ಎಂಬ ಉಕ್ತಿಯು ಜ್ಞಾನಕ್ಕೆ ಪ್ರಾಶಸ್ತ್ಯವನ್ನು ತಿಳಿಸಿಕೊಡತಕ್ಕದ್ದೇ. (ಏವಂಚ 'ಪರೀಕ್ಷ್ಯ ಲೋಕಾನ್' ಇದು ಮೊದಲಾದ ಶ್ರುತಿ ಸ್ಮೃತಿಗಳಿಂದ ಜ್ಞಾನಿಗಳಿಗೆ ಮೋಕ್ಷೇತರ ಪುರುಷಾರ್ಥಗಳಲ್ಲಿ ವಿರಕ್ತಿಯಿದ್ದ ಪ್ರಯುಕ್ತ ಅವುಗಳಲ್ಲಿ ಇಚ್ಛೆಯಿಲ್ಲವೆಂಬುವುದು ಪ್ರಮಿತವಾಗಿದೆ. ಜ್ಞಾನಾದೇವ ಸ್ವರ್ಗಃ ಇದು ಮೊದಲಾದ ವಾಕ್ಯವು ಕೇವಲ ಪ್ರಶಂಸೆಯೆಂದೇ ಕಲ್ಪಿಸಬೇಕಾಗಿರುವುದರಿಂದ ಜ್ಞಾನವು ಸ್ವರ್ಗಾದಿಗಳಿಗೆ ಕಾರಣವೆಂಬುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಜ್ಞಾನವು ಮೋಕ್ಷಮಾತ್ರಕ್ಕೆ ಸಾಧನವಾಗಿರುವ ಕಾರಣ ಜ್ಞಾನವನ್ನು ಸರ್ವಥಾ ಹೊಂದಬಾರದು, ಎಂದರೆ ಹಾಗೆ) ಹೇಳಕೂಡದು. (೨) (ಏಕೆಂದರೆ—ವ್ಯವಸ್ಥಿತಿಃ (ವ್ಯವಸ್ಥೆಯು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಾಯಶಃ ಜ್ಞಾನಿಯಾದವನಿಗೆ ಮೋಕ್ಷಕ್ಕಿಂತ ಇತರವಾದ

ಫಲದಲ್ಲಿಚ್ಛೆಯು ಕೂಡುವುದೇ ಇಲ್ಲ. (ಯದ್ಯಪಿ ಸೌಭರಿಯುಷಿಯು ಸ್ತ್ರೀ ಸಂಭೋಗಾದಿ ರೂಪವಾದ ಪ್ರಾರಬ್ಧ ಕರ್ಮವನ್ನು ಭೋಗಿಸುವುದಕ್ಕಾಗಿಯೇ ಅನೇಕ ಶರೀರಗಳನ್ನು ಸಂಪಾದಿಸಿರುವನು. ಆದಾಗ್ಯೂ ಏಕ ಕಾಲದಲ್ಲಿಯೇ ಅನೇಕ ದೇಹಗಳನ್ನು ಸಂಪಾದಿಸುವ ಶಕ್ತಿಯು ಜ್ಞಾನ ಶಕ್ತಿಯಿಂದಲೇ. ಆದಕಾಗಣ) ಕೆಲವು ಜ್ಞಾನಿಗಳಿಗೆ ಸೌಭರಿ ಮೊದಲಾದವರಂತೆ ಮೋಕ್ಷಕ್ಕಿಂತ ಇತರವಾದ ಫಲದಲ್ಲಿಚ್ಛೆಯು ಆಗುವುದಾದರೂ, ಆಯಾಯ ಜ್ಞಾನಿಗಳಿಗೆ ಸಾಧನವಾಗಿ ವಿಹಿತವಾದ ಕರ್ಮದಿಂದಲೆಂಬಂತೆ ಬ್ರಹ್ಮನ ಅಪರೋಕ್ಷಜ್ಞಾನದಿಂದಲೇ ಮೋಕ್ಷ ವ್ಯತಿರಿಕ್ತಗಳಾದ ಎಲ್ಲಾ ಅಭೀಷ್ಟವೂ ಆಗುತ್ತದೆ. (ಆದಕಾರಣ '**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್**' '**ಪ್ರಜಹಾತಿ ಯದಾ ಕಾಮಾನ್**' ಇದು ಮೊದಲಾದ ಜ್ಞಾನಿಗಳಿಗೆ ವೈರಾಗ್ಯ ಪ್ರತಿಪಾದಕಗಳಾದ ಶ್ರುತಿ ಸ್ಮೃತ್ಯಾದಿ ವಾಕ್ಯಗಳಿಗೆ ಪ್ರಾಯಶಃ ಜ್ಞಾನಿಗಳಿಗೆ ಸ್ವರ್ಗನಲ್ಲಿ ಇಚ್ಛೆಯಿಲ್ಲವೆಂಗೂ. "ಯಂ ಯಂ ಲೋಕಂ ಮನಸಾ ಇದು ಮೊದಲಾದ ಜ್ಞಾನಿಗಳಿಗೂ ಮೋಕ್ಷಕ್ಕಿಂತ ಇತರವಾದ ಫಲದಲ್ಲಿ ಇಚ್ಛಾ ಪ್ರತಿಪಾದಕವಾದ ಶ್ರುತ್ಯಾದಿವಾಕ್ಯಗಳಿಗೆ ಅಂತಹ ಇಚ್ಛೆಯಿರುವ ಸೌಭರ್ಯಾದಿವಿಷಯಕ ವೆಂದೂ) ವ್ಯವಸ್ಥೆಯು ಕೂಡುತ್ತದೆ. (ಏವಂಚ ವ್ಯವಸ್ಥೆಯಿಂದ ವಾಕ್ಯಗಳಿಗೆ ವಿರೋಧವು ಇಲ್ಲದಿರುವುದರಿಂದ **ಜ್ಞಾನಾದೇವ ಸ್ವರ್ಗಃ** ಎಂಬ ವಾಕ್ಯವು ಜ್ಞಾನಕ್ಕೆ ಪ್ರಾಶಸ್ತ್ಯ ಮಾತ್ರ ಜ್ಞಾಪಕವೆಂದು ಕಲ್ಪಿಸಲ್ಪಡದಿರುವುದರಿಂದ ಅದರಿಂದಲೇ ಜ್ಞಾನಕ್ಕೆ ಸರ್ವ ಪುರುಷಾರ್ಥಸಾಧನತ್ವವೂ ಸಿದ್ಧಿಸುವ ಪ್ರಯುಕ್ತ ಸರ್ವಥಾ ಜ್ಞಾನವನ್ನು ಸಂಪಾದಿಸಲೇಬೇಕು.) ॥ ೧ ॥

೨ನೇ ಅಸಾರ್ವತ್ರಿಕ್ಯಧಿಕರಣದಲ್ಲಿ ಬ್ರಹ್ಮಜ್ಞಾನವು ಸರ್ವಾಧಿಕಾರಿಕವೋ, ಅಲ್ಲವೋ ಎಂದು ಸಂದೇಹವು ಬಂದರೆ ಸರ್ವಾಧಿಕಾರಿಕವೆಂದು ಪೂರ್ವಪಕ್ಷವು. ಅಲ್ಲವೆಂದು ಸಿದ್ಧಾಂತವು. ಅದರಲ್ಲಿ **ಔದಾರ್ಯಂ** (ಉತ್ಕೃಷ್ಟತ್ವವು)ಎಂದು ಪೂರ್ವಪಕ್ಷ ಯುಕ್ತಿಯು. ವ್ಯವಸ್ಥಿತಿಃ ಎಂಬುವುದು ಸಿದ್ಧಾಂತನ್ಯಾಯವು. ಅಂದರೆ ಜ್ಞಾನಫಲವಾದ ಮೋಕ್ಷಕ್ಕೆ ನಿರ್ದುಃಖಾನಂದಾದ್ಯಾತ್ಮಕವಾದ ಉತ್ಕೃಷ್ಟತ್ವವಿದ್ದುದರಿಂದ ಎಲ್ಲರಿಗೂ ಅದರಲ್ಲಿ ಅರ್ಥಿತ್ವವು ಕೂಡುವ ಕಾರಣ ಎಲ್ಲರಿಗೂ ಶ್ರವಣಾದಿರೂಪವಾದ ಸಾಮರ್ಥ್ಯವಿದ್ದ ಪ್ರಯುಕ್ತ **ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ** ಎನ್ನುವ ನ್ಯಾಯದಿಂದ ಸರ್ವರಿಗೂ ಜ್ಞಾನದಲ್ಲಿ ಅಧಿಕಾರವಿದೆ, ಎಂದರೆ ಹಾಗೆ ಹೇಳಕೂಡದು. (ಏಕೆಂದರೆ ಅರ್ಥಿತ್ವಾದಿಗಳು ಸಮಾನಗಳಾಗಿದ್ದಾಗ್ಯೂ ಸರ್ವರಿಗೆ ಜ್ಞಾನದಲ್ಲಿ ಅಧಿಕಾರವಿಲ್ಲ. ಮತ್ತೆ ಯಥಾಶಕ್ತ್ಯಖಿಲವೇದಾಧ್ಯಯನವಿದ್ದವನಿಗೇನೇ ಜ್ಞಾನಾಧಿಕಾರವು ಎನ್ನುವ ವ್ಯವಸ್ಥೆಯು ಕೂಡುತ್ತದೆ. ಅಥವಾ ಸರ್ವರಿಗೂ ಜ್ಞಾನಾಧಿಕಾರವಿರಲಿ. ಹಾಗಾದರೆ ಮಧ್ಯಮ ಅಧಮ ಜೀವರಿಗೆ ಏಕೆ ಜ್ಞಾನವಿಲ್ಲ, ಎಂದರೆ ಅಧಿಕಾರವು ಸಮಾನವಾದುದಾಗ್ಯೂ ಯಾರಿಗೆ ಶಕ್ತಿಯು ಉತ್ಕೃಷ್ಟವಾಗಿದೆಯೋ, ಆತನಿಗೆ ಜ್ಞಾನವು ಹುಟ್ಟುತ್ತದೆ. ಯಾರಿಗೆ ಶಕ್ತಿಯು ನಿಕೃಷ್ಟವಾಗಿದೆಯೋ, ಆತನಿಗೆ ಜ್ಞಾನವು ಹುಟ್ಟುವುದಿಲ್ಲ. ಹೀಗೆ ಉಚ್ಚಾವಚ ಶಕ್ತಿಯೇ ಪೂರ್ವಪಕ್ಷ ಜ್ಞಾಪಕವು. ಎಂದರೆ ಸರ್ವರಿಗೆ ಜ್ಞಾನಾಧಿಕಾರವು ಸಮಪಾದಾಗ್ಯೂ ಒಬ್ಬನಿಗೆ ಉತ್ಕೃಷ್ಟ ಶಕ್ತಿಯು ಇನ್ನೊಬ್ಬನಿಗೆ ನಿಕೃಷ್ಟ ಶಕ್ತಿಯು ಎಂಬ ವಿಶೇಷವು ಕೂಡುವುದಿಲ್ಲ. ಆದಕಾರಣ ಯಾರಿಗೆ ಸರ್ವದಾ ಶಕ್ತಿಯು ನಿಕೃಷ್ಟವಾಗಿದೆಯೋ ಆತನು ಅನಧಿಕಾರಿಯು ಎಂದು ಕಲ್ಪಿಸುವುದು. ಯಾವಾಗಲೂ ಫಲವಿಲ್ಲವಾದರೆ ಅಧಿಕಾರ ಕಲ್ಪನೆಯೇ ವ್ಯರ್ಥವು. ಹೀಗೆ ಅವಿಶೇಷವೇ ಸಿದ್ಧಾಂತ ಸ್ಥಾಪಕವು. ಸ್ಪಷ್ಟವಾದ ಪ್ರಯುಕ್ತವಾಗಲೀ ಶಿಷ್ಯರಿಗೇನೆ ಊಹಾಪೋಹ ಶಕ್ತಿಯನ್ನುದ್ಬೋಧಿಸುವುದಕ್ಕಾಗಿ ಆಗಲೀ ನ್ಯಾಯವಿವರಣದಲ್ಲಿ ಉಪಪಾದಿಸಲಿಲ್ಲ ॥ ೨ ॥

೩ನೇ ಸಾವಿಶೇಷಾಧಿಕರಣದಲ್ಲಿ ಬ್ರಹ್ಮಜ್ಞಾನಾಧಿಕಾರವು ದೇವತೆಗಳಿಗೆ ಏಕ ಪ್ರಕಾರವೋ ಅನೇಕ ಪ್ರಕಾರವೋ ಎಂದು ಸಂದೇಹವು ಬಂದರೆ—ಏಕಪ್ರಕಾರವೆಂದು ಪೂರ್ವಪಕ್ಷವು' ಅನೇಕಪ್ರಕಾರವೆಂದು ಸಿದ್ಧಾಂತವು. ಅದರಲ್ಲಿ **ಉಚ್ಚಾವಚಶಕ್ತಿಃ** =(ಉತ್ಕೃಷ್ಟ ನಿಕೃಷ್ಟ ಶಕ್ತಿಯು,) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.



ಮೂ || (೧) ನ ಚಾಧಿಕಾರೇ ಸಮೇಽಪಿ ತೇಷಾಮೇವೋಚ್ಚಾವಚಶಕ್ತಿಯೋಗಾತ್ಫಲಭೇದೋಪಪತ್ತೇರಧಿಕಾರಿವಿಶೇಷಕಲ್ಪನಂ ವ್ಯರ್ಥಂ || (೨) ಉಪಸಂಹಾರಸ್ಯ ಭಕ್ತ್ಯಾದ್ಯಧಿಕಾರಾನುಸಾರೇಣ ಶಾಸ್ತ್ರಾತ್ಫಲಪ್ರಾಪ್ತೇಸ್ಸರ್ವೇಷಾಮವಿಶೇಷಾತ್|| (೩)ದೃಶ್ಯಮಾನತ್ವಾಚ್ಚ ಭಕ್ತ್ಯಾದ್ಯಧಿಕಾರತಾರತಮ್ಯಸ್ಯ | ಉಚ್ಚಾವಚಶಕ್ತೇರಪಿ ತನ್ನಿಬಂಧನತ್ವಾತ್ || ೩ ||

ಅ || (೧) ಅಧಿಕಾರವು ಸ್ವಾಭಾವಿಕವಾಗಿ ಸಮವಾದಾಗ್ಯೂ ಆ ಅಧಿಕಾರಿಗಳಿಗೆ ಉತ್ಕೃಷ್ಟ ನಿಕೃಷ್ಟ ಶಕ್ತಿರೂಪವಾದ ಉಪಾಯದಿಂದಲೇ ಜ್ಞಾನರೂಪವಾದ ಫಲತಾರತಮ್ಯವು ಕೂಡುವುದರಿಂದ (ಫಲಭೇದವು ಕಲ್ಪಕವಾಗದಿರುವ ಪ್ರಯುಕ್ತ) ಭಕ್ತ್ಯಾದಿರೂಪವಾದ ಅಧಿಕಾರದ ಪ್ರಭೇದವನ್ನು (ಅಂದರೆ ಸ್ವಾಭಾವಿಕವಾದ ದೇವತ್ವ, ಋಷಿತ್ವ, ಮನುಷ್ಯೋತ್ತಮತ್ವ ರೂಪವಾದ ವಿಶೇಷವನ್ನು) ಕಲ್ಪಿಸುವುದು ವ್ಯರ್ಥವು. (ಏವಂಚ ಅಧಿಕಾರಿಗಳಲ್ಲಿ ಉತ್ಕೃಷ್ಟನಿಕೃಷ್ಟ ಶಕ್ತಿಯಿರುವುದರಿಂದ ಜ್ಞಾನ ತಾರತಮ್ಯವು ಕೂಡುವ ಪ್ರಯುಕ್ತ ಏಕಪ್ರಕಾರವೇ ಜ್ಞಾನಾಧಿಕಾರವು. ಜ್ಞಾನದಲ್ಲಿ ಅತಿಶಯವಿಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಅವಿಶೇಷಃ=(ವಿಶೇಷವಿಲ್ಲದಿರುವಿಕೆಯು)ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಭಕ್ತಿ ಅಧ್ಯಯನ ಮೊದಲಾದ ಅಧಿಕಾರವನ್ನು ಅನುಸರಿಸಿಯೇ ವಿಚಾರಿತವಾದ ಶಾಸ್ತ್ರದಿಂದ ಎಲ್ಲಾ ಅಧಿಕಾರಿಗಳಿಗೂ ಧ್ಯಾನದ್ವಾರಾ ಜ್ಞಾನರೂಪವಾದ ಫಲವು ಪ್ರಾಪ್ತವಾಗುತ್ತದೆ. ಅಧಿಕಾರಿಗಳಾದ ಎಲ್ಲಾ ದೇವತೆಗಳಿಗೂ (ವ್ಯತ್ಯಾಸ) ವಿಶೇಷವಿಲ್ಲ. (ಅಂದರೆ ಯಾರೊಬ್ಬನಿಗೂ ಭಕ್ತ್ಯಾದಿಗಳನ್ನು ಅನುಸರಿಸವೆ ಫಲಪ್ರಾಪ್ತಿಯಾಗುವುದೇ ಇಲ್ಲ. (೩) ಭಕ್ತ್ಯಾದ್ಯಧಿಕಾರ ತಾರತಮ್ಯವು ಪ್ರತ್ಯಕ್ಷ ಸಿದ್ಧವೂ ಆಗಿದೆ. ಉತ್ಕೃಷ್ಟಾಪಕೃಷ್ಟ ಶಕ್ತಿಗೂ ಭಕ್ತ್ಯಾದ್ಯಧಿಕಾರ ತಾರತಮ್ಯವೇ ಕಾರಣವು.(ಅಧಿಕಾರ ತಾರತಮ್ಯವಿನಹ ಬೇರೆ ಕಾರಣವೇ ಇಲ್ಲ.) ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ|ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್ || ಎಂದು) (ಏವಂಚ ಎಲ್ಲಾ ಜ್ಞಾನಾಧಿಕಾರಿಗಳಿಗೆ ಭಕ್ತ್ಯಾದ್ಯಧಿಕಾರ ತಾರತಮ್ಯವನ್ನು ಒಪ್ಪಿಕೊಳ್ಳದಿದ್ದರೆ ಅವರವರ ಜ್ಞಾನಗಳಿಗೆ ವಿಶೇಷವಿಲ್ಲವೆಂದಾಗಬೇಕಾಗುವುದರಿಂದ ಜ್ಞಾನ ತಾರತಮ್ಯವು ಪ್ರಮಿತವು ಆಗಿರುವುದರಿಂದ ಜ್ಞಾನಾಧಿಕಾರವು ಏಕಪ್ರಕಾರವಲ್ಲ. ತಾರತಮ್ಯವು ಇದ್ದೇ ಇದೆ. || ೩ ||

೪ನೇ ಸ್ತುತ್ಯಧಿಕರಣದಲ್ಲಿ ಭಗವಜ್ಜ್ಞಾನಿಗಳಲ್ಲಿ ಸದಸತ್ಪ್ರವೃತ್ತಿಯಿಂದ ವಿಶೇಷವು ಇದೆಯೋ ಇಲ್ಲವೋ, ಎಂದು ಸಂದೇಹವು ಬಂದರೆ – ಇಲ್ಲವೆಂದು ಪೂರ್ವಪಕ್ಷವು. ಇದೆ ಎಂದು ಸಿದ್ಧಾಂತವು. ಅದರಲ್ಲಿ ಆತ್ಮಸ್ವರೂಪದಾರ್ಢ್ಯಂ=(ಆವಿರ್ಭೂತಗಳಾದ ಆನಂದಾದಿಗಳಿಗೆ ನಿಶ್ಚಿತತ್ವವು)ಎಂಬ ಪೂರ್ವಪಕ್ಷ ಯುಕ್ತಿಯನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಜ್ಞಾನಿನಾಮಾತ್ಮಸ್ವರೂಪದಾರ್ಢ್ಯಾತ್ಸತ್ಪ್ರವೃತ್ತಿವಿಪರೀತಪ್ರವೃತ್ತ್ಯೋರವಿಶೇಷಃ || (೨) ಏತಾವತೋಽಧಿಕಾ ನಾಸ್ತಿ ಪ್ರಾಪ್ತಿರಿತ್ಯಂತತಃಸ್ಥಿತಾ | ಯಾ ಸ್ಥಿತಿಸ್ತಾಂ ಸಮಾಪ್ನೋತಿ ಯಥಾಶಕ್ತಿ ಪ್ರಯತ್ನತಃ | ವಿಪರೀತಪ್ರವೃತ್ತೇಸ್ತು ತಸ್ಯಾಹ್ರಾಸೋಽಧಿಕಂ ಭವೇತ್ ಇತಿ ವಚನಾತ್ ಸ್ಥಿತಿವಿಶೇಷೋಪಪತ್ತೇಃ || ೪ ||

ಅ || (೧) ಜ್ಞಾನಿಗಳಿಗೆ ಆತ್ಯಂತಿಕ ದುಃಖ ನಿವೃತ್ತಿ ಪೂರ್ವಕ ಸ್ವರೂಪಾನಂದಾವಿರ್ಭಾವ ರೂಪವಾದ ಆತ್ಮಸ್ವರೂಪವು ನಿಶ್ಚಿತವಾಗಿರುವುದರಿಂದ ಸತ್ಪ್ರವೃತ್ತಿಯಿಂದ ಸಂಪಾದ್ಯವಾದ ಅತಿಶಯವೂ ಅಸತ್ಪ್ರವೃತ್ತಿಯಿಂದ ಪ್ರತಿಬದ್ಧ್ಯವಾದ ಮೋಕ್ಷಾತಿರಿಕ್ತವಾದ ಫಲವೂ ಇಲ್ಲದಿರುವುದರಿಂದ ಅವುಗಳಿಗೆ ವಿಶೇಷವಿಲ್ಲ.

ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ— ಸ್ಥಿತಿಃ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (ಯಾರಿಗೆ ಎಷ್ಟು ಸ್ವರೂಪಭೂತವಾದ ಆನಂದವೆಂದು ನಿರ್ದೇಶವಾಗಿದೆಯೋ,) ಇಷ್ಟು ಆನಂದಾದಿಗಳಿಗಿಂತ ಅಧಿಕವಾದ ಆನಂದಾದಿಗಳ ಪ್ರಾಪ್ತಿಯು ಆಗುವುದಿಲ್ಲ. ಆದರೆ- ಯಾವುದು ನಿಸ್ಸೃಷ್ಟವಾಗಿ ಸ್ವರೂಪಾನಂದಾದಿಗಳ ಸ್ಥಿತಿಯು ಪ್ರಮಾಣದಿಂದ ವ್ಯವಸ್ಥಿತವಾಗಿದೆಯೋ, ಆ ಸ್ಥಿತಿಯನ್ನು ಶಕ್ತ್ಯನುಸಾರ ಜ್ಞಾನೋತ್ತರದಲ್ಲಿ ಮಾಡಿದ ತನ್ನ ಭಕ್ತಿಗೆ ಅನುಸಾರಿಯಾದ ಪ್ರಯತ್ನದಿಂದ ಹೊಂದುತ್ತಾನೆ. ಅಸತ್ಪ್ರವೃತ್ತಿಯಿಂದ ಆನಂದಾದಿಗಳಿಗೆ ಹ್ರಾಸವಾಗುತ್ತದೆ, ಎಂಬ ವಚನದಿಂದ ಸತ್ಪ್ರವೃತ್ತಿಯಿಂದ ಜ್ಞಾನದಿಂದ ಅಭಿವ್ಯಕ್ತವಾದ ಆನಂದಾವಿರ್ಭಾವ ರೂಪವಾದ ಸ್ಥಿತಿವಿಶೇಷವೂ, ಅಸತ್ಪ್ರವೃತ್ತಿಯಿಂದ ಅಸುರರಿಗೆ ತನ್ನ ಸ್ವರೂಪಕ್ಕಿಂತ ಅಧಿಕವಾಗಿ ಸೇವಾದಿಗಳಿಂದ ಪ್ರಾಪ್ತವಾದ ಆನಂದಾದಿಗಳಿಗೆ ಅಪ್ರಾಪ್ತಿರೂಪವಾದ ಸ್ಥಿತಿವಿಶೇಷವೂ, ಮನುಷ್ಯರಿಗೆ ಸ್ವರೂಪಾನಭಿವ್ಯಕ್ತಿರೂಪವಾದ ಹ್ರಾಸರೂಪವಾದ ಸ್ಥಿತಿವಿಶೇಷವೂ ಕೂಡುತ್ತದೆ. ೬ ೪ ||

೫ನೇ ಉಭಯಲಿಂಗಾಧಿಕರಣದಲ್ಲಿ (1) ಶ್ರೀ ಭಗವದಪರೋಕ್ಷ ಜ್ಞಾನವು ಅಧಿಕಾರಿಗಳಿಂದಲೇ ಹೊಂದಲ್ಪಡುತ್ತದೋ, ಅನಧಿಕಾರಿಗಳಿಂದಲೂ ಹೊಂದಲ್ಪಡುತ್ತದೋ, ಎಂದು ಸಂದೇಹವು ಬಂದರೆ-ಅನಧಿಕಾರಿಗಳಿಂದಲೂ ಹೊಂದಲ್ಪಡುತ್ತದೆಂದು ಪೂರ್ವಪಕ್ಷವು. ಅಧಿಕಾರಿಗಳಿಂದಲೇ ಹೊಂದಲ್ಪಡುತ್ತದೆಂದು ಸಿದ್ಧಾಂತವು. (2) ನಚಾಧಿಕಾರಿಕಮಪಿ ಎಂಬ ೬ನೇ ಆಧಿಕಾರಿಕಾಧಿಕರಣದಲ್ಲಿ ಲೋಕದಲ್ಲಿ ರಾಜಾದಿಗಳ ಪದವಿಯನ್ನು ಅಮಾತ್ಯಾದಿಗಳೂ ಹೊಂದುವುದನ್ನು ಕಂಡುದರಿಂದ ಭಗವದಪರೋಕ್ಷ ಜ್ಞಾನವನ್ನು ಅಧಿಕಾರಿಗಳೇ ಹೊಂದಬೇಕೆಂದು ಹೇಳಿರುವಪ್ರಯುಕ್ತ ಚತುರ್ಮುಖಾದಿಗಳ ಪದವಿಗಳನ್ನು ಇತರರು ಹೊಂದುತ್ತಾರೋ, ಅಥವಾ ಆ ಪದವಿ ಹೊಂದಲು ಯೋಗ್ಯರಾದವರೇ ಹೊಂದುವುದೋ ಎಂದು ಸಂಶಯವು ಬಂದರೆ ಇತರರೂ ಹೊಂದುತ್ತಾರೆಂದು ಪೂರ್ವಪಕ್ಷವು ಆ ಪದವಿಗೆ ಯೋಗ್ಯರಾದವರೇ ಹೊಂದುವುದು ಎಂದು ಸಿದ್ಧಾಂತವು. ಅದರಲ್ಲಿ ನಿಜಸ್ವಭಾವಃ= ಎಂದು ಎರಡು ಅಧಿಕರಣಗಳ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧)ನ ಚ ಸರ್ವಜೀವಾನಾಮೇಕಪ್ರಕಾರ ಏವ ನಿಜಸ್ವಭಾವಶ್ಚೈತನ್ಯಮಿತಿ ಫಲೇsಪ್ಯವಿಶೇಷಃ | (೨) ನಿಷೇಧಸಾಮಾನ್ಯವಿಧಿಕ್ರಿಯಾಣಾಂ ವಿಭಕ್ತತ್ವಾತ್ || (೩) (1) ನಾದೇವೋ ದೇವಪದಮನ್ವಿಚ್ಛೇದನ್ವಿಚ್ಛನ್ಯಾತ್ಮಧರಂ ತಮಃ|(೩)ನ ದೇವಃ ಸ್ತ್ರೀಯಂ ಪದಮನ್ವಿಚ್ಛನ್ವಿದುಷ್ಯತಿ | ತದೇವ ಹ್ಯಸ್ಯ ಸ್ವಮಿತಿ ನಿಷೇಧವಿಭಾಗಃ || (೪) ಸ್ಥಿರಂ ಜ್ಞಾನಂ ಸ್ಥಿರೋ ಹರಾವಭಿಷಂಗಃ ಸ್ಥಿರಮೋಜೋ ಬಲಂ ವಿರಾಗ ಏತದ್ಧಿ ಸಾಮಾನ್ಯಂ ದೇವಾನಾಂ || ಅನ್ಯಥ್ಯಾನ್ಯೇಷಾಮಸ್ಥಿರಾಣ್ಯೇವ ತಾನಿ ಸರ್ವಾಣ್ಯಥಾಪಿ ಯಥಾಯೋಗಂ ವಿನೇಯಾನೀತಿ ಸಾಮಾನ್ಯವಿಭಾಗಃ || (೫) ಜ್ಞಾನದಾನಮೇವ ದೇವಾನಾಂ ವಿಹಿತಂ | ತಪ ಏವ ಋಷೀಣಾಮಾಚಾರ ಏವ ಮಾನುಷಾಣಾಂ ತದವಿರೋಧೇನಾನ್ಯಾನಿ ಕರಣೀಯಾನೀತಿ ವಿಧಿವಿಭಾಗಃ|| (೬) ಚರಂತಿ ದೇವಾ ವಿಹಿತಂ ಸಮಸ್ತಮರ್ಥಮೇವ ಮುನಯೋ ದಶಾಂಶಪೋ ಮನುಷ್ಯಾ ಇತಿ ಕ್ರಿಯಾವಿಭಾಗಃ || ೫ || ೬ ||

ಅ || (೧) ಯೋಗ್ಯಾಯೋಗ್ಯರಾದ ಎಲ್ಲಾ ಜೀವರಿಗೂ ತಂತಮ್ಮ ಸ್ವಭಾವಭೂತವಾದ ಚೈತನ್ಯವು ಏಕಪ್ರಕಾರವೇ. (ಅನೇಕ ಪ್ರಕಾರವಲ್ಲ.) (ಅಂದರೆ ಸಮಸ್ತ ಜೀವರಲ್ಲಿರತಕ್ಕ ಯಾವುದು ಚೈತನ್ಯವೋ

ಅದೇವೇ ಸ್ವಾಭಾವಿಕವು. ದೇವತ್ವಾದಿಗಳು ಸ್ವಾಭಾವಿಕಗಳಲ್ಲ.) ಚೈತನ್ಯವು ಏಕಪ್ರಕಾರವಾಗಿರುವುದರಿಂದಲೇ ಫಲಭೂತವಾದ ಅಪರೋಕ್ಷ ಜ್ಞಾನದಲ್ಲಿಯೂ. ಬ್ರಹ್ಮಾದಿದೇವತಾಪದವಿಯಲ್ಲಿಯೂ ಸಾಧನ ಸಮುಚ್ಚಯ ದಲ್ಲಿಯೂ ಅಧಿಕಾರಿಗಳಿಂದ ಮಾತ್ರ ಹೊಂದಲ್ಪಡತಕ್ಕುದು ಎಂದು ವಿಶೇಷವಿಲ್ಲ.( (1) ಅಂದರೆ-ಜ್ಞಾನವೂ ದೇವತಾಪದವೂ ಅಧಿಕಾರಿಗಳಿಂದಲೇ ಹೊಂದಲ್ಪಡಬೇಕೆಂದು ನಿಯಮವಿಲ್ಲ. ವೇದಾದಿಗಳಲ್ಲಿ ಅಧಿಕಾರವಿಲ್ಲ ದವರಿಗೂ ಪ್ರಯತ್ನದಿಂದ ವೇದಾದಿಗಳ ಪ್ರಾಪ್ತಿಯುು ಕಂಡದೆ. ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ' ಇತ್ಯಾದಿ ಪ್ರಮಾಣಗಳಿಂದ ದೇವತಾಪದಾದಿಗಳು ಪ್ರಯತ್ನಸಾಧ್ಯವೆಂದು ಹೇಳಿದು ದರಿಂದ ಮಹಾಪ್ರಯತ್ನದಿಂದ ಎಲ್ಲರಿಗೂ ಹೊಂದಲು ಶಕ್ಯವಾಗಿದೆ. (2) ವಿಶ್ವಾಮಿತ್ರ ಋಷಿಗಳು ಸ್ವಭಾ ವತಃ ಕ್ಷತ್ರಿಯರಾದಾಗ್ಯೂ ಮಹಾಪ್ರಯತ್ನದಿಂದ ವಿಪ್ರತ್ವವನ್ನು ಹೊಂದಿದಂತೆಯೇ, ಮಹಾಪ್ರಯತ್ನದಿಂದ ಸ್ವಭಾವವನ್ನು ತಿರಸ್ಕರಿಸಿ ಜ್ಞಾನ, ದೇವಪದವಿಗಳಿಗೆ ಅಯೋಗ್ಯರಾದವರಿಗೂ ಜ್ಞಾನಪದವಿಗಳು ಹೊಂದಲು ಶಕ್ಯಗಳಾಗಿರುವುದರಿಂದ ಅಂತಹವರಿಗೂ ಮೋಕ್ಷವು ಸಿಗಬೇಕಾಗುವುದು, ಎಂದರೆ ಹಾಗೆ) ಹೇಳಕೂಡದು. (೨) (ಏಕೆಂದರೆ-ನಿಷೇಧಸಾಮಾನ್ಯವಿಧಿಕ್ರಿಯಾಣಾಂ ವಿಭಕ್ತತಾ ನಿಷೇಧವಿಭಾಗ, ಸಾಮಾನ್ಯ ವಿಭಾಗ, ವಿಧಿವಿಭಾಗ, ಕ್ರಿಯಾವಿಭಾಗ, ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ತತ್ವಜ್ಞಾನ, ಬ್ರಹ್ಮಾದಿಪದವಿಗಳು ಅಧಿಕಾರಿಗಳಿಂದ ಮಾತ್ರ ಹೊಂದಲ್ಪಡಬೇಕೆಂದು ನಿಯಮವು ಇದ್ದೇ ಇದೆ. ಅದಕ್ಕೆ ಪ್ರಯೋಜಕವಾದ ಚೈತನ್ಯ ವ್ಯತಿರಿಕ್ತವಾದ ದೇವತ್ವಾದಿಗಳೂ ಸ್ವಾಭಾವಿಕಗಳೇ, ಮಹಾಪ್ರಯತ್ನದಿಂದಲೂ ಸ್ವಾಭಾವಿಕವಾದುದನ್ನು ತಿರಸ್ಕರಿಸಲು ಸಾಧ್ಯವಿಲ್ಲ. ದೈವೀಮೇವ ಸಂಪತ್ತಿಂ ಇತ್ಯಾದಿ ಶ್ರುತಿಗಳಲ್ಲಿ ಅವ ರವರ ಸ್ವಭಾವವು ತಿರಸ್ಕರಿಸಲು ಅಸಾಧ್ಯವೆಂದು ಪ್ರಮಿತವಾಗಿದೆ.) ದೇವಾದಿಗಳಿಗೆ ನಿಷೇಧ ವಿಭಾಗ, ಸಾಮಾನ್ಯ ವಿಭಾಗ, ವಿಧಿವಿಭಾಗ, ಕ್ರಿಯಾವಿಭಾಗ ಇವುಗಳಿಂದ (ಪ್ರಯತ್ನವೇ ಕೂಡಲಾರದು. ಒಬ್ಬನು ಕಥಂಚಿತ್ ಅಧಿಕ ಪ್ರಯತ್ನಕ್ಕೆ ಇಚ್ಛಿಸಿದರೂ ಅನರ್ಥವೇ ಪ್ರಾಪ್ತವಾಗುವುದು. 'ನ ದೇವಪದಮನ್ವಿಚ್ಛೇತ್' ಇತ್ಯಾದಿಗಳಿಂದ ಅನರ್ಥವೇ ಉಕ್ತವಾಗಿದೆ.)॥ (೩) (ದೇವತಾಪದವಿಷಯದಲ್ಲಿ ನಿಷೇಧ ವಿಭಾಗ ಪರಗಳಾದ ಶ್ರುತಿಗಳನ್ನು ಹೇಳುತ್ತಾರೆ.) (1) ದೇವಪದವಿಗೆ ಅಯೋಗ್ಯನಾದವನು ದೇವಪದವಿಯನ್ನು ಇಚ್ಛಿಸಬಾರದು. ಇಚ್ಛಿಸತಕ್ಕವನು ಅಂಧಂತಮಸ್ಸನ್ನು ಹೊಂದುತ್ತಾನೆ. (ಎಂದು ಇಚ್ಛಾ ನಿಷೇಧವು.) (2) ದೇವಪದವಿಗೆ ಯೋಗ್ಯನಾದವನು ತನ್ನ ಪದವಿಯನ್ನು ಇಚ್ಛಿಸಿದರೆ ದುಷ್ಟನಾಗುವುದಿಲ್ಲ. ಆ ಪದವಿಯೇ ಆ ದೇವತೆಗೆ ಸ್ವಾಭಾವಿಕವು. ಇತರರಿಗೆ ಯಾವ ಪ್ರಯತ್ನದಿಂದಲೂ ಆ ಪದವಿಯು ಲಭ್ಯವಲ್ಲ, ಎಂದು ನಿಷೇಧ ವಿಭಾಗವು (೪) ಜ್ಞಾನವು ಸ್ಥಿರವು (ಅಂದರೆ ವ್ಯತ್ಯಾಸವಾಗುವುದಿಲ್ಲ.) ಶ್ರೀಹರಿಯಲ್ಲಿ ಆಸಕ್ತಿಯು ಸ್ಥಿರವು. ಕಾಂತಿಯೂ ಬಲವೂ ವಿರಕ್ತಿಯೂ ಸ್ಥಿರವು. ಇದು ಎಲ್ಲಾ ದೇವತೆಗಳಿಗೆ ಸಾಧಾರಣವು. ಇತರರಿಗೆ ಬೇರೆ ಪ್ರಕಾ ರವೇ, ಅಂದರೆ ಇತರರಿಗೆ ಇವೆಲ್ಲವೂ ಅಸ್ಥಿರಗಳೇ (ಅಂದರೆ ಲಭ್ಯಗಳಲ್ಲ) ಆದಾಗ್ಯೂ ಯಥಾಯೋಗ್ಯವಾಗಿ ಇವುಗಳು ಸಂಪಾದಿಸಲ್ಪಡಬೇಕು. ಎಂದು ಸಾಮಾನ್ಯ ವಿಭಾಗವು. (೫) ದೇವತೆಗಳಿಗೆ ಜ್ಞಾನೋಪದೇಶವೇ ಮುಖ್ಯತಃ ವಿಹಿತವಾಗಿದೆ. ಋಷಿಗಳಿಗೆ ತಪಸ್ಸು, ಮನುಷ್ಯರಿಗೆ ಆಚಾರವೇ ಅವುಗಳಿಗೆ ಅವಿರೋಧವಾಗಿ ಇತರ ಕರ್ಮಗಳನ್ನು ಮಾಡಬೇಕು, ಎಂದು ವಿಧಿವಿಭಾಗವು. (೬) ದೇವತೆಗಳು ಶಾಸ್ತ್ರೋಕ್ತವಾದುದೆಲ್ಲವನ್ನು ಮಾಡುತ್ತಾರೆ. ಋಷಿಗಳೂ ಅರ್ಧಾಂಶವನ್ನೇ ಮಾಡುತ್ತಾರೆ. ಮನುಷ್ಯರು ೧೦ನೇ ೧ ಅಂಶವನ್ನು ಮಾಡು ತ್ತಾರೆ ಎಂದು ಕ್ರಿಯಾ ವಿಭಾಗವು.

ವಿ ॥ (1) ಅಪರೋಕ್ಷ ಜ್ಞಾನ ವಿಷಯದಲ್ಲಿ ದೈವೀಮೇವ ಸಂಪತ್ತಿಂ ಎಂದು, ಅಸುರ ಜಾತೇರೇ ವಾಸುರತ್ವಂ, ನಾಸುರಾಣಾಂ ದೈವಂ ರೂಪಂ ಎಂದು ನಿಷೇಧವಿಭಾಗಪರಗಳಾದ ಶ್ರುತಿಗಳು (2) ಕೃಷ್ಣೇ ವೀತಃ, ತತಃ ಕನೀಯಸಾ ಏವ ದೇವಾಃ ಜ್ಯಾಯಾಂಸೋಽಸುರಾಃ, ಅಸುರಾನ್ ದಮಯನ್ ವಿಷ್ಣುಃ ಅಸುರಾ ಆಸುರೇಷ್ವೈವ, ಎಂದು ಸಾಮಾನ್ಯ ವಿಭಾಗ ಪರಗಳು (3) ಶಂ ಭೂತಿ

ರೀತಿ ಇದು ಮೊದಲಾದ ಆಗಮಗಳು ಕ್ರಿಯಾ ವಿಭಾಗ ಪರಗಳು. (4) **ಸರ್ವಥಾಽಪಿತು ತ ಏವೋಭಯಲಿಂಗಾತ್‌,** ಯದ್ಯಪಿ ಸೂತ್ರಮಯರ್ಾದೆಯಿಂದ ಮಹಾಉತ್ಸಾಹವನ್ನು ಮಾಡಿದರೂ ಅಧಿಕಾರಿಗಳೇ ಜ್ಞಾನವನ್ನು ಹೊಂದುತ್ತಾರೆ. ಅನಧಿಕಾರಿಗಳು ಹೊಂದುವುದಿಲ್ಲ. '**ಯ ಆತ್ಮಾ ಅಪಹತಪಾಪ್ಮಾ** ಎಂದು ಒಂದೇ ಪ್ರಕಾರ ಉಪದೇಶಿಸಿದರೂ ಶ್ರೀ ಪರಮಾತ್ಮನು ಪಾಪಲೇಶವಿಲ್ಲದವನು, ಎಂದು ಇಂದ್ರನು ಶತ್ಯ ಜ್ಞಾನವನ್ನು ಹೊಂದಿದನು, ವಿರೋಚನನು ಜೀವನೇ ಪಾಪವಿಲ್ಲದಿರುವ ಬ್ರಹ್ಮನು, ಎಂದು ಮಿಥ್ಯಾ ಜ್ಞಾನವನ್ನು ಹೊಂದಿದನು. ಎಂದು ಎರಡು ವಿಧ ಲಿಂಗದಿಂದ ಅಧಿಕಾರಿಗಳಿಗೇನೇ ಜ್ಞಾನವು ಲಭಿಸುತ್ತದೆ. ಎಂದು (5) **ಅಸಾರ್ವತ್ರಿಕೀ** ಎಂಬ ಅಧಿಕರಣದಲ್ಲಿ ಶ್ರುತಿಯಿಂದಲೇ ಸಿದ್ಧಾಂತವು. ಇಲ್ಲಿ ಶ್ರುತ್ಯುಕ್ತವಾದ ಲಿಂಗದಿಂದ ಎಂದು ಯುಕ್ತಿ ವಿಶೇಷವನ್ನು ಹೇಳುವುದಕ್ಕಾಗಿ ಪುನಃ ಆರಂಭವು. (6) **ಸರ್ವಜೀವಾನಾಮೇಕ ಪ್ರಕಾರ ಏವ ನಿಜಸ್ವಭಾವಃ** ಎಂದು ಹೇಳುವಾಗ ಈ ಅಧಿಕರಣವು ಅಧಿಕಾರಿ ಅನಧಿಕಾರಿ ಮಾತ್ರ ವಿಷಯಕವಲ್ಲ. ಮತ್ತೆ ಅಧಿಕಾರಿಗಳಾದ ದೇವರ್ಷಿ ಮನುಷ್ಯರ ಚೈತನ್ಯವೂ ಒಂದೇ ಸ್ವಭಾವವುಳ್ಳದಾದುದರಿಂದ ಅಲ್ಲಿಯೂ ವೈಚಿತ್ರ್ಯವಿಲ್ಲ ಎಂಬ ಅಭ್ಯಧಿಕಾಶಂಕೆಯಿಂದ ಪುನಃ ಆರಂಭವು. (7) ಏವಂಚ ನಿಷೇಧಾದಿಗಳು ವಿಭಕ್ತಗಳಾಗಿರುವುದರಿಂದ ಅಪರೋಕ್ಷ ಜ್ಞಾನ, ಬ್ರಹ್ಮಾದಿ ಪದಗಳು ಅಧಿಕಾರಿಗಳಿಂದ ಮಾತ್ರ ಹೊಂದಲ್ಪಡತಕ್ಕವುಗಳು. ॥ ೫ ॥

೬ನೇ ಅಧಿಕರಣದಲ್ಲಿ ನಿಜಸ್ವಭಾವಭೂತವಾದ ಚೈತನ್ಯವು ಏಕ ಪ್ರಕಾರವೇ, ಎಂದು ಹೇಳುವಾಗ ಚೇತನತ್ವವು ಸರ್ವರಿಗೂ ಸಮವಾದ ಕಾರಣ ಪ್ರಯತ್ನವನ್ನು ಮಾಡಿದರೆ ಭಗವದೈಶ್ವರ್ಯವನ್ನು ಹೊಂದಲು ಶಕ್ಯವಾಗುತ್ತದೆ. ಬ್ರಹ್ಮಾದಿಗಳ ಪದವಿಯನ್ನು ಹೊಂದಲು ಸುತರಾಂ ಶಕ್ಯವಾಗುತ್ತದೆ, ಎಂದು ನಿಜಸ್ವಭಾವವೇ ಪೂರ್ವಪಕ್ಷ ಯುಕ್ತಿಯು. ನಾದೇವೋ ದೇವಮನ್ವಿಚ್ಛೇತ್ ಎಂಬಲ್ಲಿ ದೇವತೆಗಳು ಹೊರತು ಋಷಿಗಳಿಗೂ ಮನುಷ್ಯಾದಿಗಳಿಗೂ ದೈತ್ಯಾದಿಗಳಿಗೂ ದೇವತೆಗಳ ಪದವಿಯು, ಇಚ್ಛಾ ಮಾತ್ರದಿಂದಲೇ ತಮಸ್ಸು ಪ್ರಾಪ್ತವಾಗುತ್ತದೆಂದು ಹೇಳಿದುದರಿಂದ ಭಗವದೈಶ್ವರ್ಯಾದಿಗಳನ್ನು ಇತರರು ಸರ್ವಥಾ ಪ್ರಾರ್ಥಿಸಕೂಡದು, ಎಂದು ವಿಭಕ್ತತಾ ಎನ್ನುವ ಸಿದ್ಧಾಂತ ಯುಕ್ತಿಯೂ ಸೂಚಿತವಾಯ್ತು. ಶಿಷ್ಯರೇ ಊಹಿಸಿಕೊಳ್ಳಲಿ ಎಂಬ ಅಭಿಪ್ರಾಯದಿಂದ ನ್ಯಾಯ ವಿವರಣದಲ್ಲಿ ಪ್ರತ್ಯೇಕ ವಿವರಿಸಲಿಲ್ಲ. ॥ ೬ ॥

೭ನೇ ಫಲಶ್ರುತ್ಯಧಿಕರಣದಲ್ಲಿ ಭಗವಜ್ಜ್ಞಾನವು ದೇವತೆಗಳಿಗೆ ಮಾತ್ರ ಫಲವನ್ನು ಕೊಡತಕ್ಕುದೋ, ಪ್ರಜೆಗಳಿಗೂ ಫಲವನ್ನು ಕೊಡುತ್ತದೋ, ಎಂದು ಸಂದೇಹವು ಬಂದರೆ ದೇವತೆಗಳಿಗೆ ಮಾತ್ರ ಎಂದು ಪೂರ್ವಪಕ್ಷವು. ದೇವಾದಿಗಳಿಗೂ ಪ್ರಜೆಗಳಿಗೂ ಫಲವನ್ನು ಕೊಡುತ್ತದೆಂದು ಸಿದ್ಧಾಂತವು. ಅದರಲ್ಲಿ ಸ್ವಾತಂತ್ರ್ಯಂ (ಇಂದ್ರಿಯಾದಿಗಳಿಗೆ ಪ್ರೇರಕರಾದುದರಿಂದ ನಿಯಾಮಕತ್ವವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) **ನ ಚ ಸ್ವಾತಂತ್ರ್ಯಾದ್ದೇವಾನಾಮೇವ ಜ್ಞಾನಾದಿಫಲಂ ನ ಕಿಂಚಿದನ್ಯೇಷಾಮಿತಿ ವಾಚ್ಯಂ ॥ (೨) ತ್ವರಯೈವ ಮನುಷ್ಯಾಣಾಂ ಸಿದ್ಧಿರತ್ವರಯೈವ ತು । ದೇವಾನಾಂ ತತ್ಪ್ರಸಾದೇಷ ಮುಕ್ತ್ಯಾ ಏವ ಸತಾಂ ನೃಣಾಮಿತಿ ಮಾನುಷಮುಕ್ತ್ಯರ್ಥಮೇವ ದೇವಾನಾಮುತ್ವರಯಾ ಸಿದ್ಧಿಶ್ರುತೇಃ** ॥ ೭ ॥

ಅ ॥ (೧) ದೇವತೆಗಳೇ ಇಂದ್ರಿಯಾದಿಗಳಿಗೆ ಪ್ರೇರಕರಾಗಿರುವುದರಿಂದ ಅವರಿಗೇನೇ ಜ್ಞಾನಾದಿ ಫಲವು. ಇತರರಾದ ಕರ್ತೃಗಳಾದ ಪ್ರಜೆಗಳಿಗೆ ಅಲ್ಪ ಫಲವೂ ಇಲ್ಲ. (ಅಂದರೆ ಚೇತನ ಸ್ವರೂಪದಿಂದಲೂ ಪ್ರಜೆಗಳಿಗೆ ಜ್ಞಾನರೂಪ ಫಲವಿಲ್ಲ.) (ಏವಂಚ ದೇವತೆಗಳಿಗೇನೇ ಫಲಪ್ರಾಪ್ತಿಯಾಗುವುದರಿಂದ

(ಅನಿಯಮಸ್ಸರ್ವೇಷಾಂ ಎಂದು ಹೇಳಿದ್ದು ಕೂಡುವುದಿಲ್ಲ, ಎಂದರೆ) ಹಾಗೆ ಹೇಳಕೂಡದು. ೨) ಏಕೆಂದರೆ **ಅತ್ವರಯೈವ ಸಿದ್ಧಿಃ**=ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ. ಮನುಷ್ಯರಿಗೆ ಶೀಘ್ರವಾಗಿಯೇ ಜ್ಞಾನಾದಿಗಳ ಸಿದ್ಧಿಯಾಗುತ್ತದೆ. ದೇವತೆಗಳು ಇಂದ್ರಿಯಾದಿಗಳನ್ನು ಪ್ರೇರೇಪಿಸಿ ಸಜ್ಜನರಾದ ಮನುಷ್ಯರ ಮುಕ್ತಿಗಾಗಿಯೇ ದೇವತೆಗಳಿಗೆ ವಿಲಂಬವಾಗಿಯೇ ಜ್ಞಾನಾದಿ ಸಿದ್ಧಿಯು. ಹೀಗೆ ಮನುಷ್ಯರ ಮುಕ್ತಿಗಾಗಿಯೇ ದೇವತೆಗಳಿಗೆ ವಿಲಂಬವಾಗಿ ಜ್ಞಾನಾದಿಗಳು ಸಿದ್ಧಿಸುತ್ತವೆಂದು ಶ್ರುತವಾಗಿದೆ. (ದೇವತೆಗಳಿಗೆ ಶೀಘ್ರವಾಗಿಯೇ ಸಿದ್ಧಿಯಾಗುವುದಾದರೆ ಮನುಷ್ಯರಿಗೆ ಇಂದ್ರಿಯಾದಿಗಳನ್ನು ಪ್ರೇರೇಪಿಸುವವರು ಇಲ್ಲದಿರುವುದರಿಂದ ಜ್ಞಾನಾದಿಗಳೇ ಲಭಿಸದೆ ಹೋಗಬೇಕಾಗಿರುವುದರಿಂದ ಮುಕ್ತಿಯೇ ಆಗದೆ ಹೋಗಬೇಕಾಗುವುದು. (ಮನುಷ್ಯರಿಗೆ ಪರಾಂತ ಕಾಲದಲ್ಲಿ ಬ್ರಹ್ಮನ ಅಲ್ಪ ದಿನದಿಂದಲೇ ಸಿದ್ಧಿಯಾಗುತ್ತದೆ. ಆದುದರಿಂದಲೇ ತ್ವರಯೈವ ಮನುಷ್ಯಾಣಾಂ ಎಂದುಕ್ತವಾಗಿದೆ. ಆದಕಾರಣ ಅವರನ್ನು ಪ್ರೇರೇಪಿಸುವುದಕ್ಕಾಗಿ ಅಷ್ಟರವರೇಗೆ ಮೆಲ್ಲ ಮೆಲ್ಲಗೆ ಪ್ರಾರಬ್ಧ ಕರ್ಮಗಳನ್ನು ಅನುಭವಿಸುತ್ತಿರುತ್ತಾರೆ. ಆದುದರಿಂದಲೇ **ಅತ್ವರಯೈವ ದೇವಾನಾಂ** ಎಂದುಕ್ತವಾಗಿದೆ. ॥ ೭ ॥

ಅಂತೂ ಮನುಷ್ಯರ ಮುಕ್ತಿಗಾಗಿಯೇ ದೇವತೆಗಳಿಗೆ ಜ್ಞಾನ ಫಲವು ವಿಲಂಬವಾಗಿ ಸಿದ್ಧಿಯಾಗುವುದರಿಂದ ಮನುಷ್ಯರಿಗೂ ಜ್ಞಾನಫಲವಾದ ಮೋಕ್ಷವು ಪ್ರಾಪ್ತವಾಗುತ್ತದೆ.

೮ನೇ ಕೃತ್ಸ್ನಭಾವಾಧಿಕರಣದಲ್ಲಿ ಬ್ರಹ್ಮಚರ್ಯಾದ್ಯಾಶ್ರಮಭೇದದಿಂದ ಬೇರೆ ಬೇರೆಯಾಗಿರುವ ಮನುಷ್ಯರೆಲ್ಲರೂ ಮೋಕ್ಷದಲ್ಲಿ ಸಮಾನಿಕರೋ, ಅಥವಾ ತಾರತಮ್ಯವುಳ್ಳವರೋ, ಎಂದು ಸಂಶಯವು ಬಂದರೆ ಗೃಹಸ್ಥಾಶ್ರಮಿಗಳು ಮುಕ್ತಿಯಲ್ಲಿ ಉತ್ತಮರೆಂದು ಪೂರ್ವಪಕ್ಷವು. ಎಲ್ಲಾ ಆಶ್ರಮಗಳಲ್ಲಿ ಯತಿಗಳೇ ಉತ್ತಮರೆಂದು ಸಿದ್ಧಾಂತವು. ಅದರಲ್ಲಿ **ಅಪೂರ್ಣವಿಶೇಷಯೋಗ್ಯತಾ**=(ಎಲ್ಲಾ ಕರ್ಮವಿಶೇಷಗಳಲ್ಲಿ ಯೋಗ್ಯತೆಯು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ ॥ (೧) ನ ಚ ಗೃಹಸ್ಥಾನಾಮೇವಾಶೇಷಕರ್ಮವಿಶೇಷಯೋಗ್ಯತ್ವಾದಾಧಿಕ್ಯಂ ಮುಕ್ತೌ ॥ (೨) ತ್ವರಯೈವ ಗೃಹಿಣಸ್ಸಾಧಯಂತಿ ಮುಕ್ತಿಮತ್ವರಯೈವ ಯತಯಸ್ತೇಭ್ಯಶ್ಚಾತ್ವರಯಾ ದೇವಾಸ್ತೇಷು ಚ ಬ್ರಹ್ಮಾ ॥ (೩)ತದೇಷ ಶ್ಲೋಕಃ । ಶತಂ ಪೆರಾನಭಿಪಶ್ಯೈವ ದೇವಂ ಬ್ರಹ್ಮಾಚರದ್ದುಶ್ಚರಂ ಯತ್ತಪೋಽಗ್ರ್ಯಂ । ವಿಹಾಯ ರಾಗಂ ಮನಸಶ್ಚಾಪಿ ವಿಘ್ನಾನ್ ತತೋಽಭವತ್ಪರಮೋಕ್ಷೇ ಸುಮುಕ್ತಾವಿತಿ ॥ (೪) ಯೋ ಹಿ ತ್ವರಯಾ ಸಾಧಯೇತ್ಸ ಮಂದಂ ಸುಖಮಾಪ್ನುಯಾತ್ । ಯೋ ಹ್ಯತ್ವರಯಾ ಸ ಮಹದಿತಿ ಶ್ರುತೇರ್ಗೃಹಿಭ್ಯೋ ಯತೀನಾಂ ತೇಭ್ಯೋ ದೇವಾನಾಮತ್ವರಯಾ ಸಿದ್ಧೇಃ । (೫) ಬಹುಕಾಲ ಸಾಧನಾದ್ಬಹುಕರ್ಮಾಧಿಕಾರಮಾತ್ರಸ್ಯ ದುರ್ಬಲತ್ವಾತ್ ॥ ೮ ॥**

ಅ ॥ (೧) ಎಲ್ಲಾ ಆಶ್ರಮಿಗಳಲ್ಲಿ ಗೃಹಸ್ಥಾಶ್ರಮಿಗಳಿಗೇನೇ ಯಾಗ ಮೊದಲಾದ ಎಲ್ಲಾ ಕರ್ಮವಿಶೇಷಗಳಲ್ಲಿ ಯೋಗ್ಯತೆಯು ಇರುವುದರಿಂದಲೂ (ಇತರಾಶ್ರಮಿಗಳಿಗೆ ಯಜ್ಞಾದಿಗಳಲ್ಲಿ ಅಧಿಕಾರವಿಲ್ಲದಿರುವುದರಿಂದಲೂ,) ಗ್ರಹಸ್ಥಾಶ್ರಮಿಗಳಿಗೇನೇ ಮುಕ್ತಿಯಲ್ಲಿ ಉತ್ತಮತ್ವವು, ಎಂದು ಹೇಳಕೂಡದು. (೨) (ಏಕೆಂದರೆ ಅತ್ವರಯೈವ ಸಿದ್ಧಿಃ ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಗೃಹಸ್ಥಾಶ್ರಮಿಗಳು ಶೀಘ್ರವಾಗಿಯೇ ಮುಕ್ತಿಯನ್ನು ಸಾಧಿಸಿಕೊಳ್ಳುತ್ತಾರೆ. ಯತಿಗಳು ಸಾವಕಾಶವಾಗಿಯೇ ಮುಕ್ತಿಯನ್ನು ಸಾಧಿಸಿಕೊಳ್ಳುತ್ತಾರೆ. ಯತಿಗಳಿಗಿಂತಲೂ ದೇವತೆಗಳು ವಿಳಂಬವಾಗಿ. ಆ ದೇವತೆಗಳಲ್ಲಿಯೂ

ಚತುರ್ಮುಖನು ಸಾವಕಾಶವಾಗಿ. (೩) ಆ ವಿಷಯದಲ್ಲಿ ಮುಂದಿನಶ್ಲೋಕವು ಸಂಮತಿಯಾಗಿದೆ. ಮನೋಽಭಿಮಾನಿಯಾದ ರುದ್ರನಿಂದಲೂ ಉತ್ತಮನಾದ ಪ್ರಸಿದ್ಧನಾದ ಚತುರ್ಮುಖನು ವಿಷ್ಣುವನ್ನು ಪ್ರತ್ಯಕ್ಷೀಕರಿಸಿಕೊಂಡೇ ೧೦೦ ಬ್ರಹ್ಮಕಲ್ಪಗಳಲ್ಲಿ ಮನಸ್ಸಿನಲ್ಲಿರುವ ವಿಷಯಾಭಿಲಾಷೆಗಳನ್ನು ವಿಘ್ನಗಳನ್ನು ಕೂಡಾ ಬಿಟ್ಟು ಬಿಟ್ಟು ಯಾರಿಂದಲೂ ಮಾಡಲಶಕ್ಯವಾದ ಶ್ರೇಷ್ಠವಾದ ತಪಸ್ಸನ್ನು ಯಾವ ಕಾರಣದಿಂದ ಮಾಡಿರುವನೋ. ಅದಕಾರಣ ಮುಕ್ತಿಯಲ್ಲಿ ಪರಮೇಷ್ಠಿಯು (ಸಾಯುಜ್ಯ ಮೋಕ್ಷಪ್ರಾಪ್ತಿ ಮೊದಲಾದ ಅತಿಶಯವುಳ್ಳವನಾದನು)ಎಂದು. (೪) ಯಾರು ಶೀಘ್ರವಾಗಿ ಮುಕ್ತಿಯನ್ನು ಸಾಧಿಸುವನೋ, ಅವನು ಅಲ್ಪಸುಖವನ್ನು ಹೊಂದುವನು. ಯಾರು ಸಾವಕಾಶವಾಗಿ ಸಾಧಿಸುವನೋ, ಅವನು ಮಹಾ ಸುಖವನ್ನು ಹೊಂದುವನು, ಎಂಬ ಶ್ರುತಿಯಿಂದ ಗ್ರಹಸ್ಥಾಶ್ರಮಿಗಳಿಗಿಂತ ಯತಿಗಳಿಗೂ ಯತಿಗಳಿಗಿಂತ ದೇವತೆಗಳಿಗೂ ಸಾವಕಾಶವಾಗಿ ಸಿದ್ಧಿಯಾಗುವುದು. (ಆದಕಾರಣ ವಿಲಂಬವಾಗಿ ಸಾಧಿಸಿದವರಿಗೇನೇ ಆಧಿಕ್ಯವು ಶ್ರುತವಾಗುತ್ತದೆ: (೫) ಯತಿಗಳು ಬಹುಕಾಲದಲ್ಲಿ ತಪಸ್ಸನ್ನು ಮಾಡಿರುವುದರಿಂದ ಗ್ರಹಸ್ಥಾಶ್ರಮಿಗಳ ಬಹು ಕರ್ಮಾಧಿಕಾರ ಮಾತ್ರವು ದುರ್ಬಲವಾಗಿದೆ. (ಅಂದರೆ ಗ್ರಹಸ್ಥಾಶ್ರಮಿಗಳಿಗೆ ಬಹು ಕರ್ಮಾಧಿಕಾರ ಮಾತ್ರವಿದ್ದರೂ ಅವುಗಳನ್ನೆಲ್ಲಾ ಯಾರೂ ಆಚರಿಸಲಾರರು. (ಏವಂಚ ಜ್ಞಾನ ಪ್ರಚುರರಾದ ಯತಿಗಳಿಗೇನೇ ಗ್ರಹಸ್ಥಾಶ್ರಮಿಗಳಿಗಿಂತ ಉತ್ತಮತ್ವವು. ಆದಪ್ರಯುಕ್ತ ಜ್ಞಾನವೇ ಅತಿಶಯವು.) ॥ ೮ ॥

೯ನೇ ಅನಾವಿಷ್ಕಾರಾಧಿಕರಣದಲ್ಲಿ ಬ್ರಹ್ಮವಿಷಯಕ ಅಪರೋಕ್ಷಜ್ಞಾನ ಸಾಧನವನ್ನು ಸಭಾಚತ್ವರಾದಿಗಳಲ್ಲಿ ಸ್ಪಷ್ಟವಾಗಿ ಉಪದೇಶಿಸಬೇಕೋ, ಬೇಡವೋ ಎಂದು ಸಂಶಯವು ಬಂದರೆ ಸ್ಪಷ್ಟವಾಗಿಯೇ ಉಪದೇಶಿಸಬೇಕೆಂದು ಪೂರ್ವಪಕ್ಷವು. ಅಲ್ಲವೆಂದು ಸಿದ್ಧಾಂತವು, ಅದರಲ್ಲಿ ಅಪೂರ್ಣವಿಶೇಷಯೋಗ್ಯತ್ ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡೇ ನಿರಾಕರಿಸುತ್ತಾರೆ.

ಮೂ ॥ (೧) ನ ಚಾವಿಷ್ಕಾರೇಣ ಕಥನಾದಶೇಷತೋಽಪಿ ಯೋಗ್ಯಾ ಜ್ಞಾನಿನೋ ಭವಂತೀತ್ಯಾಸ್ಥಾನಚತ್ವರಾದಿಷು ಸ್ಥಿತ್ವೈವ ಪ್ರಕಥನಿಯಂ ॥ (೨) ನ ಹ್ಯೇವಂ ತ್ವರಮಾಣೇ ಸಿದ್ಧಿರ್ಭವತಿ । ಅಯೋಗ್ಯಾನಾಮಪಿ ಶ್ರವಣಪ್ರಸಂಗಾತ್ । ತಸ್ಮಾದ್ವಿಚಾರ್ಯ ಯೋಗ್ಯಾನಾಮೇವಾತ್ವರಯೈವ ಕಥಿತ್ವಾ ಸಿದ್ಧಿರ್ಭವತಿ ॥ (೩) ತ್ಯಕ್ತ್ವಾ ತ್ವರಾಂ ಬ್ರಹ್ಮವಿದ್ಯಾಂ ವದೇತ ಜನಾಯ, ಯೋಗ್ಯಾಯ ಸದೈವ ವಿದ್ವಾನಿತಿ ಶ್ರುತೇ: ॥ (೪) ಮಾನಸಸ್ತೇನೇಭ್ಯಃ ಇತ್ಯಾದೇಶ್ಚ ॥ ೯ ॥

ಅ ॥ (೧) ಸಭಾದಿಗಳಲ್ಲಿ ಸ್ಪಷ್ಟವಾಗಿ ತತ್ವವನ್ನುಪದೇಶಿಸಿದುದರಿಂದ ಯೋಗ್ಯರಾದವರೆಲ್ಲರೂ ಜ್ಞಾನಿಗಳಾಗುತ್ತಾರೆ. ಆದಕಾರಣ ಆಸ್ಥಾನ ಚತ್ವರಾದಿಗಳಲ್ಲಿ ನಿಂತುಕೊಂಡೇ ಉಪದೇಶಿಸಬೇಕು ಎಂದು ಹೇಳಕೂಡದು. (೨) (ಏಕೆಂದರೆ- ಅತ್ವರಯೈವ ಸಿದ್ಧಿಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಹೀಗೆ ಸಭಾದಿಗಳಲ್ಲಿ ಸಚ್ಛಾಸ್ತ್ರವನ್ನು ಉಪದೇಶಿಸಿದರೆ ಅಯೋಗ್ಯರಿಗೂ ಸಚ್ಛಾಸ್ತ್ರ ಶ್ರವಣವು ಪ್ರಸಕ್ತವಾಗುವುದರಿಂದ ಮುಕ್ತಿ ಸಾಧನವಾದ ಬ್ರಹ್ಮಜ್ಞಾನದ ಸಿದ್ಧಿಯಾಗುವುದಿಲ್ಲ. (ಅಂದರೆ ವ್ಯಾಖ್ಯಾನ ಮಾಡುವವರಿಗೆ (ಅಂದರೆ ಯೋಗ್ಯವಾದ ವ್ಯಾಖ್ಯಾನವು ಶ್ರೋತೃಗಳಿಗಿಂತಲೂ ವ್ಯಾಖ್ಯಾತೃವಿಗೆ ವಿಶೇಷ ಜ್ಞಾನಕ್ಕೆ ಸಾಧನವಾದ ಪ್ರಯುಕ್ತ ಸಭಾ ಚತ್ವರಾದಿಗಳಲ್ಲಿ ಅಂತಹ ವಿಶಿಷ್ಟ ವ್ಯಾಖ್ಯಾನವನ್ನು ಏಕೆ ಮಾಡಕೂಡದೆಂದರೆ ಶ್ರೋತೃಗಳಲ್ಲಿ ಕದಾಚಿತ್ ಬುದ್ಧಿಮಂತನಾದ ಅಯೋಗ್ಯನೂ ಇರುವುದು ಸಂಭಾವಿತವಾದ ಪ್ರಯುಕ್ತ ಅಂತಹವನಿಗೆ ಸಚ್ಛಾಸ್ತ್ರೋಪದೇಶವು ನಿಷಿದ್ಧವಾದಕಾರಣ ಹಾಗೆ ಯೋಗ್ಯಾಯೋಗ್ಯರನ್ನು ವಿಚಾರಮಾಡದೆ ವ್ಯಾಖ್ಯಾನವನ್ನು ಮಾಡಬಾರದು.) ಆದಕಾರಣ ಅಧಿಕಾರಿ ದೇಶ ಕಾಲಾದಿಗಳನ್ನು ವಿಚಾರಮಾಡಿ ಯೋಗ್ಯ

ರಿಗೇನೇ ಸಚ್ಛಾಸ್ತ್ರವನ್ನುಪದೇಶಿಸುವ ಪುರುಷನಿಗೆ ಮುಕ್ತಿರೂಪ ಸಿದ್ಧಿಯಾಗುತ್ತದೆ. (೩) (ಈ ವಿಷಯದಲ್ಲಿ ಪ್ರಮಾಣವು) ಜ್ಞಾನಿಯಾದವನು ತ್ವರಾಮಾಡದೇನೇ (ಅಂದರೆ ಯೋಗ್ಯಾಯೋಗ್ಯರನ್ನು ವಿಚಾರಮಾಡಿಯೇ) ಬ್ರಹ್ಮವಿದ್ಯೆಯನ್ನು ತತ್ವಜ್ಞಾನಕ್ಕೆ ಯೋಗ್ಯರಾದ ಜನರಿಗೇನೇ ಸದಾ ಉಪದೇಶಿಸಬೇಕು, ಎಂಬ ಶ್ರುತಿಯಿಂದ (ಯೋಗ್ಯರಿಗೇನೇ ಉಪದೇಶ ಮಾಡಬೇಕು.) ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಷೋ ರಿಪವೋಽನ್ಯೇಷು ಜಾಗೃಧುಃ । ಯೇಷಾಂ ನೈತನ್ನಾಪರಂ ಕಿಂಚನೈಕಂ ಬ್ರಹ್ಮಣಸ್ಪತೇ ಬ್ರೂಹಿ ತೇಭ್ಯಃ ಕದಾಚಿತ್ । ಅಥೋ ಶಮೇನೋಪಶಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಸ್ಸದಾ ನಃ । ಆದೇವಾನಾಮೋಪತೇ ವಿಪ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ॥ ವಾಯುದೇವರನ್ನು ಕುರಿತು ವಿದ್ಯಾದೇವತೆಗಳ ಪ್ರಾರ್ಥನೆಯು. ಎಲೋಮುಖ್ಯಪ್ರಾಣನೇ ಯಾರು ಅಂಥಂತಮಸ್ಸಿನಲ್ಲಿರಲು ಯೋಗ್ಯರೋ, ಭಗವದ್ವೇಷಿಗಳಾಗಿ ಭೋಗಗಳಲ್ಲಿಯೇ ಅಭಿಲಾಷೆಯುಳ್ಳವರೋ, ಪರಬ್ರಹ್ಮನೂ ಜಗತ್ತೂ ಇಲ್ಲ, ಮತ್ತೆ ನಿರ್ಗುಣನಾದ ಬ್ರಹ್ಮನೂ ಅನಿರ್ವಾಚ್ಯವಾದ ಜಗತ್ತೂ ಇರುವುದು, ಎನ್ನುತ್ತಾರೋ, ಅಂತಹವರಿಗೆ ನಮ್ಮನ್ನು ಯಾವಾಗಲೂ ಉಪದೇಶಿಸಬೇಡ. ಯಾರು ಶಮಾದಿ ಗುಣ ಸಂಪನ್ನರೋ, ಶ್ರೀವಿಷ್ಣುವಿನಲ್ಲಿಯೇ ಆಸಕ್ತರೋ, ದೇವತೆಗಳಿಗೂ ನಿಯಾಮಕನಾದ ಬ್ರಹ್ಮನನ್ನು ಸದಾ ಹೃದಯದಲ್ಲಿ ಧರಿಸಿಕೊಂಡಿರುತ್ತಾರೋ, ಬ್ರಹ್ಮನಿಗಿಂತ ಸರ್ವೋತ್ತಮವಾದ ಇನ್ನೊಂದು ವಸ್ತುವನ್ನು ತಿಳಿಯುವುದಿಲ್ಲವೋ, ಅಂತಹವರಿಗೇನೇ ನಮ್ಮನ್ನು ಸದಾ ಉಪದೇಶಿಸುತ್ತಿರು ಅಯೋಗ್ಯರಿಗೆ ಉಪದೇಶಿಸ ಬಾರದೆಂದು ಸ್ಪಷ್ಟ ಪ್ರಮಾಣವು.) (ಅಂತೂ ಸಭಾದಿಗಳಲ್ಲಿ ಯೋಗ್ಯಾಯೋಗ್ಯರನ್ನು ವಿಚಾರಮಾಡದೆ ಸಚ್ಛಾಸ್ತ್ರಗಳನ್ನುಪದೇಶಿಸಬಾರದು. ಆದಕಾರಣ ಅವುಗಳಿಗೆ ಅತಿಶಯವು ಯುಕ್ತವು. ॥ ೯ ॥

೧೦ನೇ ಪಿಹಿತಾಧಿಕರಣದಲ್ಲಿ ಕೃಷಿ ಮೊದಲಾದ ಸಾಧನಗಳಲ್ಲಿ ಸಾಧನವನ್ನು ಮಾಡಿದ ಜನ್ಮದಲ್ಲಿಯೇ ಫಲವು ಕಂಡುದಂದಲೂ ಯಾಗ ಮೊದಲಾದ ಸಾಧನಗಳಲ್ಲಿ ಜನ್ಮಾಂತರದಲ್ಲಿ ಫಲವು ಕಂಡುದರಿಂದಲೂ ಸಚ್ಛಾಸ್ತ್ರ ಶ್ರವಣ ಮೊದಲಾದ ಸಾಧನವು ಶ್ರವಣ ಮಾಡಿದ ಜನ್ಮದಲ್ಲಿಯೇ ಅಪರೋಕ್ಷ ಜ್ಞಾನಕ್ಕೆ ಸಾಧನವಾಗುತ್ತದೋ, ಜನ್ಮಾಂತರದಲ್ಲಿಯೋ, ಎಂದು ಸಂಶಯವು ಬಂದರೆ-ಶ್ರವಣಾದಿಗಳನ್ನು ಮಾಡಿದ ಜನ್ಮದಲ್ಲಿಯೇ ಎಂದು ಪೂರ್ವಪಕ್ಷವು. ಆ ಜನ್ಮದಲ್ಲಿ ಅಥವಾ ಆ ಜನ್ಮಾಂತರದಲ್ಲಿ ಎಂದು ಸಿದ್ಧಾಂತವು.

ಹಾಗೆಯೇ ೧೧ನೇ ಮುಕ್ತಿಫಲಾಧಿಕರಣದಲ್ಲಿ ಅದೃಷ್ಟಫಲವು ಸಾಧನ ಮಾಡಿದ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ ಕಂಡುದರಿಂದ ಜ್ಞಾನಸಾಧ್ಯವಾದ ಮೋಕ್ಷವು ಯಾವ ಶರೀರದಲ್ಲಿ ಜ್ಞಾನವು ಹುಟ್ಟಿಯದೋ, ಆ ಶರೀರವಾದೊಡನೆಯೇ ಆಗುತ್ತದೋ, ಇಲ್ಲವೋ, ಎಂದು ಸಂಶಯವು ಬಂದರೆ ಯಾವ ಶರೀರದಲ್ಲಿ ಜ್ಞಾನವು ಹುಟ್ಟಿಯದೋ ಆ ಶರೀರ ಪಾತವಾದೊಡನೆಯೇ ಎಂದು ಪೂರ್ವಪಕ್ಷವು. ಆ ದೇಹಪಾತವಾದ ಮೇಲೆ, ದೇಹಾಂತರವನ್ನು ಹೊಂದಿ ಆ ದೇಹ ಪಾತವಾದೊಡನೆಯೂ ಎಂದು ಸಿದ್ಧಾಂತವು. ಈ ಎರಡು ಅಧಿಕರಣಗಳಿಗೆ ಸಂಬಂಧಿಯಾಗಿ ವಿರೋಧಹಾನಿಃ=(ಪ್ರತಿಬಂಧ ರೂಪವಾದ ವಿರೋಧವಿಲ್ಲದಿರುವಿಕೆಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ವಿರೋಧಾಭಾವಾತ್ಸಾಧನಾನುಷ್ಠಾನಜನ್ಮನ್ಯೇವ ಅಪರೋಕ್ಷಜ್ಞಾನಂ ಮುಕ್ತಿಶ್ಚೇತಿ ನಿಯಮಃ॥ (೨) ಪ್ರತಿಬಂಧೇ ಸತಿ ತನ್ನಿರಾಸೇ ವಾ ತ್ವರಯೈವ ಸಿದ್ಧ್ಯುಪಪತ್ತೇಃ ॥ (೩) ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ಪ್ರೇತ್ಯೈವ ಪಶ್ಯೇದ್ಯೋಗಪೋವಾನ್ಯವೇಕ್ಷ್ಯ ॥ ಇತ್ಯಾದಿಶ್ರುತೇಃ ॥ (೪) ಅನೇಕ ಜನ್ಮ ಸಂಸಿದ್ಧಸ್ತತೋ ಯಾತಿ ಪರಾಂಗತಿಂ ಇತಿ ಭಗವದ್ವಚನಂ ॥ ೧೦ ॥ ೧೧ ॥

ಅ || (೧) ಪ್ರತಿಬಂಧಕ ರೂಪವಾದ ವಿರೋಧವು ಇಲ್ಲದಿರುವುದರಿಂದ ಅಪರೋಕ್ಷ ಜ್ಞಾನಕ್ಕೆ ಸಾಧನವಾದ ಶ್ರವಣಾದಿಗಳನ್ನು ಮೋಕ್ಷಕ್ಕೆ ಸಾಧನವಾದ ಅಪರೋಕ್ಷ ಜ್ಞಾನವನ್ನು ಸಂಪೂರ್ಣ ಹೊಂದಿದ ಜನ್ಮದಲ್ಲಿಯೇ ಅಪರೋಕ್ಷ ಜ್ಞಾನವೂ ಮುಕ್ತಿಯೂ ಆಗುತ್ತದೆ. ಎಂಬ ನಿಯಮವು ಇಲ್ಲ. (೨) (ಏಕೆಂದರೆ— ಅತ್ವರಯೈವ ಸಿದ್ಧಿಃ ವಿಲಂಬದಿಂದಲೇ ಸಿದ್ಧಿಯು ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಪ್ರಾರಬ್ಧ ಕರ್ಮದಿಂದ ಪ್ರತಿಬಂಧಕವು ಉಂಟಾದರೆ (ಕರ್ಮವು ಪ್ರತಿಬಂಧಕವಾಗಿ ಇದ್ದರೆ) ಅದನ್ನು ನಿರಾಕರಿಸಿ ಸಾವಕಾಶವಾಗಿಯೇ ಜ್ಞಾನವೂ ಮೋಕ್ಷವೂಸಿದ್ಧಿಯಾಗುತ್ತದೆ. (೩) (ಜ್ಞಾನವು ಹುಟ್ಟಲಿಕ್ಕೆ ನಿಯಮವಿಲ್ಲವೆಂಬುವಲ್ಲಿ ಪ್ರಮಾಣ ಹೇಳುತ್ತಾರೆ.) ಆರಬ್ಧವಾದ ಕರ್ಮವು ಪ್ರತಿಬಂಧಕವಾಗಿದ್ದರೆ ಪುನಃ ಸ್ವಲ್ಪ ಶ್ರವಣಾದಿಗಳನ್ನು ಮಾಡಿಯೇ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿ ಕೊಳ್ಳುವನು, ಇದು ಮೊದಲಾದ ಶ್ರುತಿಗಳು. (೪) (ಮುಕ್ತಿಯು ಆಗುತ್ತದೆ ಎಂಬುವ ನಿಯಮದಲ್ಲಿ ಪ್ರಮಾಣ ಹೇಳುತ್ತಾರೆ.) ಅನೇಕ ಜನ್ಮಗಳಲ್ಲಿ ಅಪರೋಕ್ಷ ಜ್ಞಾನಿಯಾಗಿದ್ದು ಆ ಮೇಲೆ ಮೋಕ್ಷವನ್ನು ಹೊಂದುತ್ತಾನೆ. ಎಂದು ಭಗವದ್ವಚನವು. (ಏವಂಚ ಜ್ಞಾನಕ್ಕೆ ಪ್ರತಿಬಂಧಕವಿದ್ದರೆ ಸಾವಕಾಶವಾಗಿಯೇ ಸಿದ್ಧಿಸುವುದು. ಪ್ರತಿಬಂಧಕವಿಲ್ಲವಾದರೆ ಜ್ಞಾನವು ತತ್ಕ್ಷಣದಲ್ಲಿಯೇ. (ಹುಟ್ಟಿದ ಜನ್ಮದಲ್ಲಿಯೇ,) ಫಲವು ವಿಹಿತವಾಗಿರುವುದರಿಂದ ಮೋಕ್ಷಕ್ಕೆ ಪ್ರತಿಬಂಧಕವಿದ್ದರೆ ಸಾವಕಾಶವಾಗಿಯೇ ಸಿದ್ಧಿಸುವುದು. ಪ್ರತಿಬಂಧಕವಿಲ್ಲವಾದರೆ ಆ ದೇಹಪಾತವಾದೊಡನೆಯೇ ಮುಕ್ತಿಯಾಗುವುದು. ಆದಕಾರಣ ಹಿಂದೆ ಹೇಳಿದ್ದು ಯುಕ್ತವು. || ೧೦ || ೧೧ ||

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ನ್ಯಾಯವಿವರಣೇ
ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ।

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ
ಶ್ರೀಮನ್ನ್ಯಾಯ ವಿವರಣದಲ್ಲಿ ೩ನೇ ಅಧ್ಯಾಯದಲ್ಲಿ ೪ನೇ ಪಾದವು ಸಮಾಪ್ತವಾಯಿತು ||

|| ಶ್ರೀಃ ||

# ನಾಲ್ಕನೇ ಅಧ್ಯಾಯವು

**ಕರುಣಾಪೂರ್ಣಹೃದಯ ಶಂಖಚಕ್ರಗದಾಧರ |**
**ಅಮೃತಾನಂದಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ||**

ಹರಿಃ ಓಂ || ಫಲಪ್ರತಿಪಾದಕವಾದ ಈ ಅಧ್ಯಾಯದಲ್ಲಿ ಕರ್ಮಕ್ಷಯ ರೂಪವಾದ ಮೋಕ್ಷವನ್ನು ಪ್ರತಿಪಾದಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ. ಈ ಪಾದದ ಅಧಿಕರಣ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುತ್ತಾರೆ.

**ಸುಶಕ್ಯತಾ ಶಶ್ವದತಿಪ್ರಸಿದ್ಧಿರ್ವಿವೇಕವಿನ್ಯಾಸ ವಿಚಾರಸಂಜ್ಞಾಃ | ನಾನಾಪ್ರವೃತ್ತಿಃ ಕೃತಕೃತ್ಯತಾ ಚ ವಿಪಕ್ಷತರ್ಕಾಃ ಸಮತೀತಪಾದೇ || ಮಹಾಫಲತ್ವಂ ಪ್ರವಿವಿಕ್ತತಾ ಚ ಸಂಧಿಗ್ರಹಃ ಸಾಧನಮಾಪ್ತಕೃತ್ಯಂ | ವಿಶೇಷಕಾರ್ಯಂ ಕೃತಿಸಂಸ್ಥಿತಿಶ್ಚ ಸುಯುಕ್ತಯೋ ನಿರ್ಣಯಗಾಃ ಸ್ವಪಕ್ಷೇ || ಎಂದು.**

೧ನೇ ಆವೃತ್ತ್ಯಧಿಕರಣದಲ್ಲಿ ಎರಡು ವಿಧ ಸಾಧನಗಳು ಕಂಡುದರಿಂದ ಶ್ರವಣಾದಿಗಳನ್ನು ಒಂದೇ ಸಲ ಮಾಡಬೇಕೋ ಆವೃತ್ತಿ ಮಾಡಬೇಕೋ ಎಂದು ಸಂಶಯವು ಬಂದರೆ ಜ್ಯೋತಿಷ್ಟೋಮಾದಿ ಯಾಗಗಳಂತೆಯೇ ಒಂದು ಸಲ ಮಾಡಬೇಕು, ಎಂದು ಪೂರ್ವಪಕ್ಷವು. ವ್ರೀಹೀನವಹಂತಿ ವ್ರೀಹಿಗಳನ್ನು ಅನೇಕ ಸಲ ಕುಟ್ಟುವಂತೆ ಶ್ರವಣಾದಿಗಳನ್ನು ಆವೃತ್ತಿ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಸುಶಕ್ಯತಾ (ಸುಲಭದಿಂದ ಶಕ್ಯವಾಗುವಿಕೆ) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ || ನ ಚ ಶ್ರವಣಾದ್ಯನಾವೃತ್ತ್ಯಾಽಪರೋಕ್ಷಜ್ಞಾನೋದಯೇ ಸರ್ವೇಷಾಂ ಸುಶಕ್ಯತಮಿತಿ ಗುಣಃ || (೨) ಮಹಾಫಲತ್ವಾತ್ಸರ್ವೇಷಾಮಶಕ್ಯತಾಯಾ ಏವೋಪಪನ್ನತ್ವಾತ್ (೩) ಅನ್ಯಥಾ ಸರ್ವಸುಶಕಸ್ಯೈವ ಸಾಧನತಯಾ ಸರ್ವೇಷಾಂ ಮೋಕ್ಷಾಪತ್ತೇಃ ||೧||**

ಅ || ಸಚ್ಛಾಸ್ತ್ರ ಶ್ರವಣಾದಿಗಳನ್ನು ಆವೃತ್ತಿ ಮಾಡದೇನೇ ಅಪರೋಕ್ಷ ಜ್ಞಾನವು ಹುಟ್ಟುತ್ತದೆಂದು ಅಂಗೀಕರಿಸಿದರೆ ಸರ್ವರಿಗೂ ಜ್ಞಾನವು ಸುಲಭದಿಂದ ಸಾಧ್ಯವಾಗುವುದು, ಎಂದು ಗುಣವು. (ಅಂದರೆ ಶ್ರವಣಾದಿಗಳನ್ನು ಆವೃತ್ತಿಮಾಡದೆ ಅಪರೋಕ್ಷ ಜ್ಞಾನವು ಹುಟ್ಟುತ್ತದೆಂದಂಗೀಕರಿಸಿದರೆ ಒಂದು ಸಲ ಶ್ರವಣಾದಿಗಳು ಸರ್ವರಿಗೂ ಸುಲಭವಾಗುವುದರಿಂದ ಅಂತಹ ಶ್ರವಣಾದಿಗಳಿಂದ ಅಪರೋಕ್ಷ ಜ್ಞಾನವು ಹುಟ್ಟದಿರುವುದರಿಂದ ಶ್ರವಣಾದಿಗಳು ಅಪರೋಕ್ಷ ಜ್ಞಾನಕ್ಕೆ ಸಾಧನವಲ್ಲ, ಎಂದರೆ ಹಾಗೆ ಹೇಳಕೂಡದು. ೨) (ಏಕೆಂದರೆ ಮಹಾಫಲತ್ವಂ (ಮಹಾಫಲವಿರುವುದು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಜ್ಞಾನಕ್ಕೆ ಮೋಕ್ಷಾಖ್ಯ ಮಹಾ ಫಲವಿದ್ದುದರಿಂದ ಸರ್ವರಿಗೆ ಅಸಾಧ್ಯವೆನ್ನುವುದೇ ಯುಕ್ತವು. ೩) (ಏಕೆಂದರೆ) ಹೀಗೆ ಅಂಗೀಕರಿಸದೆ ಸರ್ವರಿಗೆ ಸುಲಭದಿಂದ ಸಾಧ್ಯವೆಂದಾದರೆ ಸರ್ವರಿಗೆ ಸುಲಭ ಸಾಧ್ಯವಾದುದೇ ಸಾಧನವಾಗಿರುವುದರಿಂದ ಸರ್ವರಿಗೂ ಮೋಕ್ಷವು ಲಭಿಸಬೇಕಾಗುವುದು, (ಏವಂಚ ಜ್ಞಾನಕ್ಕೆ ಮಹಾಫಲ

ವಿದ್ದುದರಿಂದ ಶ್ರವಣಾದ್ಯಾವೃತ್ತಿಯಿಂದಲೇ ಜ್ಞಾನವನ್ನು ಸಾಧಿಸಿಕೊಳ್ಳಬೇಕು. ಆದಕಾರಣ ಶ್ರವಣಾದಿಗಳು ಜ್ಞಾನಕ್ಕೆ ಸಾಧನವೆನ್ನುವುದು ಯುಕ್ತವು. || ೧ ||

೨ನೇ ಆತ್ಮಾಧಿಕರಣದಲ್ಲಿ ಆತ್ಮತ್ವವನ್ನು ನಿತ್ಯದಲ್ಲಿಯೂ ಉಪಾಸನಾ ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ ಬೇಡವೆಂದು ಪೂರ್ವಪಕ್ಷವು. ನಿತ್ಯದಲ್ಲಿಯೂ ಉಪಾಸನಾ ಮಾಡಬೇಕೆಂದು ಸಿದ್ಧಾಂತವು. ಆದರಲ್ಲಿ ಶಶ್ವದತಿಪ್ರಸಿದ್ಧಿಃ (ಯಾವಾಗಲೂ ಅತ್ಯಂತ ಪ್ರಸಿದ್ಧಿಯು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಶಶ್ವದತಿಪ್ರಸಿದ್ಧತ್ವಾದಾತ್ಮಶಬ್ದೋದಿತಂ ಸ್ವಾಮಿತ್ವಂ ನ ನಿತ್ಯಶಃ ಉಪಾಸ್ಯಂ | (೨) ಅನ್ಯೇಭ್ಯೋऽಧಿಕಫಲತ್ವೇನ ಸವಿಶೇಷತ್ವಾದಾತ್ಮತ್ವಸ್ಯ || ೨ ||

ಅ || (೧) ಶ್ರೀ ಹರಿಯು ಜಗತ್ತಿನಲ್ಲಿ ಯಾವಾಗಲೂ ಅತಿಪ್ರಸಿದ್ಧನಾಗಿರುವುದರಿಂದ ಆತ್ಮಶಬ್ದದಿಂದ ಹೇಳಲ್ಪಟ್ಟ ಸರ್ವಸ್ವಾಮಿತ್ವವನ್ನು ನಿತ್ಯದಲ್ಲಿ ಉಪಾಸನಾ ಮಾಡಕೂಡದು. (ಅಂದರೆ ಅತಿಪ್ರಸಿದ್ಧವಾದುದನ್ನು ಉಪಾಸನಾ ಮಾಡುವುದು ವ್ಯರ್ಥವೇ. ಅಪ್ರಸಿದ್ಧ ಗುಣಗಳನ್ನು ಪಾಸನಾ ಮಾಡುವುದೇ ಶ್ರೇಷ್ಠವಾಗಿರುವುದರಿಂದ ಅಂತಹುದನ್ನೇ ಸರ್ವದಾ ಉಪಾಸನಾ ಮಾಡಬೇಕು. ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಪ್ರವಿವಿಕ್ತತಾ (ಸವಿಶೇಷತ್ವವು) ಎಂಬ ಸಿದ್ಧಾಂತ,ನ್ಯಾಯವನ್ನು ವಿವರಿಸುತ್ತಾರೆ.) ಉಪಾಸಿತಗಳಾದ ಆನಂದಾದಿ ಗುಣಗಳಿಗಿಂತ ಸ್ವಾವರರಸ್ವಾಮಿತ್ವ (ನಿಯಾಮಕತ್ವ) ವೆಂಬ ಅಧಿಕ ಫಲವಿದ್ದುದರಿಂದ ಆನಂದಾದಿ ಗುಣಗಳಂತೆಯೇ ಸ್ವಾಮಿತ್ವರೂಪವಾದ ಆತ್ಮತ್ವವು ಸಕಲ ಮುಕ್ತರಿಗೂ ಸಾಧಾರಣವಾಗಿದೆ. (ಏವಂಚ ಆತ್ಮತ್ವರೂಪ ಸ್ವಾಮಿತ್ವವು ಸಕಲ ಮುಕ್ತರಿಗೂ ಸಾಧಾರಣವಾಗಿರುವುದರಿಂದ ಸರ್ವಮುಕ್ತಿಯೋಗ್ಯರೂ ಸರ್ವದಾ ಉಪಾಸನಾ ಮಾಡಲೇಬೇಕು.) || ೨ ||

೩ನೇ ನಪ್ರತೀಕಾಧಿಕರಣದಲ್ಲಿ ನಾಮ ಬ್ರಹ್ಮೇತ್ಯುಪಾಸೀತ, ಎಂದು ಶ್ರುತಿಯು ಇದೆ, ಭೇದವು ಪ್ರಮಾಣ ಸಿದ್ಧವಾಗಿದೆ. ಈ ಎರಡು ಕಾರಣಗಳಿಂದ ನಾಮ ವಾಕ್ ಮೊದಲಾದ ಭಗವತ್ಪ್ರತೀಕಗಳನ್ನು ಬ್ರಹ್ಮ ಎಂದು ಉಪಾಸನಾ ಮಾಡಬೇಕೋ. ಬೇಡವೋ, ಎಂದು ಸಂಶಯವು ಬಂದರೆ—ಉಪಾಸನಾ ಮಾಡಬೇಕೆಂದು ಪೂರ್ವಪಕ್ಷವು. ಹಾಗೆ ಮಾಡಕೂಡದೆಂದು ಸಿದ್ಧಾಂತವು. ಆದರಲ್ಲಿ ವಿವೇಕಃ (ವಿವೇಕ ವಿಶೇಷವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ತರ್ಹಿ ವಿಶೇಷವತ್ತ್ವಾದೇವ ಪ್ರತೀಕಮಪೀಶ್ವರ ಇತ್ಯುಪಾಸ್ಯಮಿತಿ ಚ ನಾಸ್ತಿ || (೨) ಯತ್ರ ಸಂಧಿರುಪಪತ್ತಿರ್ವಿದ್ಯತೇ ತಸ್ಯೈವ ಗ್ರಾಹ್ಯತ್ವಾತ್ | ಅನ್ಯಸ್ಯೇಶತ್ವಗ್ರಹಣಸ್ಯ ಮಿಥ್ಯಾಜ್ಞಾನತ್ವಾದೇವಾನುಪಪತ್ತೇಃ || ೩ ||

ಅ || (೨)ಹಾಗಾದರೆ- ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋಽಪಗತಂ ತತ್ರಾಸ್ಯ ಕಾಮಚಾರೋ ಭವತಿ ಎಂಬ ಶ್ರುತಿಯಿಂದ ಪ್ರತೀಕವೇ ಬ್ರಹ್ಮ ಎಂದು ಉಪಾಸನಾ ಮಾಡಿದರೆ ಫಲಾಧಿಕ್ಯವು ಬರುವುದರಿಂದ ವಿಶೇಷವಿದ್ದ ಪ್ರಯುಕ್ತವೇ ಪ್ರತೀಕವನ್ನು ಈಶ್ವರ ಎಂದು ಉಪಾಸನಾ ಮಾಡಬೇಕು. (ಅಂದರೆ ಹೇಗೆ. ಪೂರ್ವಾಧಿಕರಣದಲ್ಲಿ ಪ್ರಸಿದ್ಧ್ಯಾದಿಗಳು ಅಪ್ರಯೋಜಕಗಳೆಂದು ಹೇಳಿ ಫಲಮಾತ್ರವೇ ಉಪಾಸನೆಗೆ ಪ್ರಯೋಜಕವಾಗಿ ಉಪಾಸನೆಯು ಸಮರ್ಥಿತವಾಗಿದೆಯೋ, ಹಾಗೆಯೇ ಇಲ್ಲಿಯೂ ಪ್ರತೀಕವನ್ನೇ ಬ್ರಹ್ಮನೆಂದು ಉಪಾಸನೆ ಮಾಡಿದರೆ ಫಲವು ಬರುವುದರಿಂದ ಫಲವೇ ಉಪಾಸನೆಗೆ ಪ್ರಯೋಜಕವು, ಭೇದಾದಿಗಳು ಅಪ್ರಯೋಜಕವು. ಆದಕಾರಣ ಪ್ರತೀಕವನ್ನು ಬ್ರಹ್ಮನೆಂದು ಉಪಾಸನಾ ಮಾಡಬೇಕು

ಎಂದೂ) ಹೇಳಕೂಡದು. (೨) (ಏಕೆಂದರೆ ಸಂಧಿಗ್ರಹಃ (ಉಪಪತ್ತಿಯಿಂದ ಅಂಗೀಕಾರವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಎಲ್ಲಿ ಉಪಪತ್ತಿಯು (ಯುಕ್ತಿಯು) ಇದೆಯೋ ಅದನ್ನೇ ಅಂಗೀಕರಿಸಬೇಕು. (ಪ್ರತೀಕವೇ ಬ್ರಹ್ಮ ಎಂದು ಉಪಾಸನವನ್ನು ಅಂಗೀಕರಿಸಲಿಕ್ಕೆ ಉಪಪತ್ತಿಯು ಇಲ್ಲ.) (ಫಲಾಧಿಕ್ಯ ರೂಪಉಪಪತ್ತಿಯು ಇದೆ ಎಂದರೆ)ಈಶ್ವರನಿಂದ ಭಿನ್ನವಾದುದನ್ನು ಈಶ್ವರನೆಂದು ಅಂಗೀಕರಿಸುವುದು ಮಿಥಾಜ್ಞಾನವಾದ ಪ್ರಯುಕ್ತವೇ ಫಲವು ಬರುವುದಿಲ್ಲ. (ಅನರ್ಥ ಫಲವೂ ಇದೆ.) (ಏವಂಚ ಯುಕ್ತವಾದುದನ್ನೇ ಅಂಗೀಕರಿಸಬೇಕಾದುದರಿಂದ ಪ್ರತೀಕದಲ್ಲಿ ಬ್ರಹ್ಮತ್ವೋಪಾಸನವು ಅಯುಕ್ತವಾದ ಪ್ರಯುಕ್ತ ಭಗವಂತನೇ ಸಕಲರಿಗೂ ನಿಯಾಮಕನಾಗಿ ಆ ಪ್ರತೀಕದಲ್ಲಿ ಸನ್ನಿಹಿತನಾಗಿದ್ದಾನೆಂದು ಉಪಾಸನವನ್ನು ಸರ್ವರೂ ಮಾಡಬೇಕು.) ॥ ೩ ॥

೪ನೇ ಬ್ರಹ್ಮದೃಷ್ಟ್ಯಧಿಕರಣದಲ್ಲಿ ಉಪಾಸ್ಯ ಅನುಪಾಸ್ಯ ಗುಣಗಳನ್ನು ಕಂಡುದರಿಂದ ಭೂಮತ್ವರೂಪವಾದ ಬ್ರಹ್ಮತ್ವವನ್ನು ಸರ್ವಥಾ ಉಪಾಸನಾ ಮಾಡಬೇಕೋ, ಬೇಡವೋ, ಎಂದು ಸಂದೇಹವು ಬಂದರೆ–ಉಪಾಸನಾ ಮಾಡಕೂಡದೆಂದು ಪೂರ್ವಪಕ್ಷವು. ಸರ್ವಥಾ ಉಪಾಸನಾ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ವಿನ್ಯಾಸಃ = (ಅನೇಕ ವಿಧಗುಣಗಳನ್ನು ಉಪಸಂಹಾರ ಮಾಡಿ ಉಪಾಸನೆಯು,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪ್ರತಿದಿನಂ ವಿವಿಧಗುಣನ್ಯಾಸೇನ ಭಗವತ್ಪ್ರೀತ್ಯುಪಪತ್ತೇಃ ನ ಬ್ರಹ್ಮತಾ ದೃಷ್ಟಿನಿಯಮಃ ಇತಿ ವಾಚ್ಯಂ ॥ (೨) ಅಶೇಷಗುಣಾಂತರ್ಭಾವೇನ ತಸ್ಯೈವಾಧಿಕ ಸಾಧನತ್ವಾತ್ ॥ ೪ ॥

ಅ ॥ (೧) ಪ್ರತಿನಿತ್ಯವೂ ಬಹು ವಿಧಗಳಾದ ಗುಣಗಳನ್ನು ಉಪಸಂಹಾರ ಮಾಡಿ ಉಪಾಸನ ಮಾಡುವುದರಿಂದ (ಸಾರ್ವಕಾಲಿಕ ಬ್ರಹ್ಮತ್ವೋಪಾಸನೆಗೂ ಭಗವತ್ಪ್ರೀತಿಯೇ ಫಲವು) ಹೀಗೆ ಭಗವತ್ಪ್ರೀತಿಯು ಕೂಡುವುದರಿಂದ ಆತ್ಮತ್ವೋಪಾಸನೆ ನಿಯಮದಂತೆ ವಿಶೇಷ ಹೇತುವಿಲ್ಲದಿರುವುದರಿಂದ ಬ್ರಹ್ಮತ್ವೋಪಾಸನಾದಲ್ಲಿಯೂ ನಿಯಮವು ಎಂದು ಹೇಳಕೂಡದು. (ಅಂದರೆ—ಭೂಮತ್ವವು ಸದಾ ಉಪಾಸ್ಯವಾಗದಿರುವುದರಿಂದ ಭೂಮತ್ವವು ಶ್ರೇಷ್ಠವೆಂದದ್ದೂ ಅಯುಕ್ತವೆಂದು ಹೇಳಕೂಡದು. (೨) (ಏಕೆಂದರೆ—ಸಾಧನಂ = (ಅಧಿಕಸಾಧನವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ) ಬ್ರಹ್ಮತ್ವದಲ್ಲಿಯೇ ಎಲ್ಲಾ ಗುಣಗಳೂ ಸೇರುವುದರಿಂದ ಬ್ರಹ್ಮತ್ವೋಪಾಸನೆಯೇ ಇತರ ಎಲ್ಲಾ ಗುಣಗಳ ಉಪಾಸನೆಗಿಂತಲೂ ಅಧಿಕ ಪ್ರಸಾದಕ್ಕೆ ಕಾರಣವಾಗಿರುವುದರಿಂದ (ಬ್ರಹ್ಮತ್ವವನ್ನೇ ಸದಾ ಉಪಾಸನಾ ಮಾಡಬೇಕು.) ॥ ೪ ॥

೫ನೇ ಆದಿತ್ಯಾಧಿಕರಣದಲ್ಲಿ ದೇವತೆಗಳು ತಮ್ಮ ತಮ್ಮನ್ನು ಹುಟ್ಟಿಸಿತಕ್ಕ ಭಗವದಂಗಗಳನ್ನು ಆಶ್ರಯಿಸಿರುತ್ತಾರೆಂದು ದೇವತೆಗಳು ಸರ್ವದಾ ಉಪಾಸನಾ ಮಾಡಬೇಕೋ ಬೇಡವೋ ಎಂದು ಸಂದೇಹವು ಬಂದರೆ ಮಾಡಕೂಡದೆಂದು ಪೂರ್ವಪಕ್ಷವು. ಸರ್ವದಾ ಉಪಾಸನಾ ಮಾಡಬೇಕೆಂದು ಸಿದ್ಧಾಂತವು.ಅದರಲ್ಲಿ ವಿಚಾರಃ (ವಿವಿಧ ಸ್ಥಾನಗಳಲ್ಲಿ ಸಂಚಾರವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ವಿವಿಧಸ್ಥಾನೇಷ್ವಾದಿತ್ಯಾದೀನಾಂ ಚರಣಾದ್ವಿಷ್ಣ್ವಂಗೇಷ್ವಾದಿತ್ಯಾದಿಮತಿ ನಿಯಮೋ ನಾಸ್ತೀತಿ ವಾಚ್ಯಂ ॥ (೨) ತತ್ಕೃತಾವೇವ ಕೃತ್ಸ್ನಸ್ಯಾಪ್ತತ್ವಾದಾದಿತ್ಯಾದೀನಾಂ ॥ ೫ ॥

ಅ || (೧) ಸೂರ್ಯಾದಿದೇವತೆಗಳು ಬಹುವಿಧಸ್ಥಾನಗಳಲ್ಲಿ ಸಂಚರಿಸುವುದರಿಂದ ಸರ್ವದಾ ಚಕ್ಷುರಾದ್ಯಂಗಗಳನ್ನು ಆಶ್ರಯಿಸದೆ ಇರುವ ಪ್ರಯುಕ್ತ (ಹಾಗೆ ಉಪಾಸನವು ಅನರ್ಥ ಫಲಕ್ಕೆ ಕಾರಣವು. ಆದಕಾರಣ ತಮ್ಮನ್ನು ಹುಟ್ಟಿಸತಕ್ಕ ಶ್ರೀ ಹರಿಯು ಅಂಗಗಳನ್ನು ಆದಿತ್ಯಾದಿ ದೇವತೆಗಳು ಆಶ್ರಯಿಸುತ್ತಿರು ತ್ತಾರೆಂದು ದೇವತೆಗಳು ಉಪಾಸನೆಯನ್ನು ಮಾಡುವುದು ಅಯುಕ್ತವಾಗಿರುವುದರಿಂದ ಹಾಗೆ ಉಪಾಸನೆ ಮಾಡಬೇಕೆಂಬಲ್ಲಿ ನಿಯಮವಿಲ್ಲ,ಎಂದು ಹೇಳಕೂಡದು. (೨) (ಏಕೆಂದರೆ— ಆಪ್ತಕೃತ್ಯಂ=(ಭಗವದಂಗಾಶ್ರಿ ತತ್ವರೂಪವಾದ ಕೃತ್ಯವನ್ನು ಹೊಂದಿದ್ದು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಆದಿತ್ಯಾದಿ ದೇವತೆಗಳು ತಮಗೆ ಉತ್ಪಾದಕಗಳಾದ ಅಂಗಗಳನ್ನು ಆಶ್ರಯಿಸಿರುತ್ತಾರೆಂದು ಉಪಾಸನೆ ಮಾಡಿದರೇನೇ ಅಲ್ಲಿ ಅವರ ದೇಹವು ಲಯವಾಗಿ ಮೋಕ್ಷ ರೂಪವಾದ ಕೃತ್ಯವನ್ನು ಹೊಂದುವರು. (ದೇವತೆಗಳು ಹಾಗೆ ಉಪಾಸನೆ ಮಾಡದಿದ್ದರೆ ಶ್ರೀವಿಷ್ಣುವಿನ ಅಂಗಗಳಲ್ಲಿ ಅವರಿಗೆ ಲಯವು ಕೂಡದಿರುವುದರಿಂದ ಮೋಕ್ಷವೇ ಕೂಡದೆ ಹೋಗುವುದು. ಏವಂಚ ಮೋಕ್ಷರೂಪವಾದ ಕೃತ್ಯವನ್ನು ಹೊಂದುವುದರಿಂದ ದೇವತೆಗಳಿಗೆ ತಾವು ಭಗವದಂಗಾಶ್ರಿತರೆಂದು ಉಪಾಸನೆಯು ಆವಶ್ಯಕವು. || ೫ ||

೬ನೇ ಆಸೀನಾಧಿಕರಣದಲ್ಲಿ ಆಸನವು ಸರ್ವಥಾ ಅಪೇಕ್ಷಿತವೋ ಅಲ್ಲವೋ ಎಂದು ಸಂದೇಹವು ಬಂದರೆ ಅಪೇಕ್ಷಿತವಲ್ಲವೆಂದು ಪೂರ್ವಪಕ್ಷವು. ಸರ್ವಥಾ ಅಪೇಕ್ಷಿತವೇ ಎಂದು ಸಿದ್ಧಾಂತವು ಅದರಲ್ಲಿ ಸಂಜ್ಞಾ (ಜ್ಞಾನವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

**ಮೂ || (೧) ನ ಚ ಜ್ಞಾನಸ್ಯ ಸಮ್ಯಕ್ತದ್ವಿಷಯತ್ವಮಾತ್ರೇಣ ಪೂರ್ತೇರಾಸನಾದಿನಾ ನ ಕಾರ್ಯಮಿತಿ ವಾಚ್ಯಂ|| (೨)ಆಸನಾದಿನಾ ನಿಶ್ಚಲತ್ವಾದಿವಿಶೇಷಕಾರ್ಯೋಪಪತ್ತೇಃ || ೬ ||**

ಅ || (೧) ಆಸನಾದಿಗಳು ಇಲ್ಲದಿದ್ದರೂ ಮನಸ್ಸು ಕೇವಲ ಭಗವಂತನನ್ನು ವಿಷಯೀಕರಿಸಿದುದರಿಂ ದಲೇ ಅಪರೋಕ್ಷಜ್ಞಾನವು ಪೂರ್ತಿಯಾಗುವುದರಿಂದ ಆಸನ, ಸಮಂ ಕಾಯಶಿರೋಗ್ರೀವಂ ಇತ್ಯಾದಿ ಇವುಗಳಿಂದ ಪ್ರಯೋಜನವಿಲ್ಲ. (ಆದಕಾರಣ ಅದನ್ನುಪದೇಶಿಸಿದ್ದೂ ಅಪ್ರಮಾಣವು.) ಎಂದು ಹೇಳ ಕೂಡದು. (೨) ಏಕೆಂದರೆ ವಿಶೇಷಕಾರ್ಯಂ=(ಶರೀರವು ಅಚಲವಾಗಿ ಮನಸ್ಸಿಗೆ ಅಚಲತ್ವ ರೂಪವಾದ ಕಾರ್ಯ ವಿಶೇಷವು.) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) (ಶರೀರ ಮನಸ್ಸುಗಳು ನಿಶ್ಚಲ ಗಳಾಗದೆ ಚೆನ್ನಾಗಿ ಭಗವಂತನನ್ನು ವಿಷಯೀಕರಿಸವುದೇ ಕೂಡದಿರುವುದರಿಂದ ಜ್ಞಾನವೇ ಹುಟ್ಟಲಾರದು, ಆದಕಾರಣ) ಆಸನಾದಿಗಳಿಂದ ಶರೀರವು ನಿಶ್ಚಲವಾಗಿ ಮನಸ್ಸಿಗೆ ನಿಶ್ಚಲತ್ವವುಂಟಾಗುವುದು, ಇದು ಮೊದ ಲಾದ ವಿಶೇಷ ಕಾರ್ಯವು ಹುಟ್ಟುವುದರಿಂದ ಆಸನಾದಿಗಳು ಆವಶ್ಯಕವು. (ಆದುದರಿಂದ ಅದನ್ನುಪದೇಶಿ ಸಿದ್ದೂ ಅಪ್ರಮಾಣವಲ್ಲ.) || ೬ ||

೭ನೇ ಆಪ್ರಾಯಣಾಧಿಕರಣದಲ್ಲಿ ಜ್ಞಾನವು ಹುಟ್ಟುವಪರ್ಯಂತವೇ ಧ್ಯಾನವನ್ನು ಮಾಡಬೇಕೋ, ಮುಕ್ತಿ ಸಿಗುವಪರ್ಯಂತ ಧ್ಯಾನವನ್ನು ಮಾಡಬೇಕೋ ಎಂದು ಸಂದೇಹವು ಬಂದರೆ ಜ್ಞಾನವು ಹುಟ್ಟುವ ಪರ್ಯಂತವೇ ಧ್ಯಾನವು ಆವಶ್ಯಕವು, ಎಂದು ಪೂರ್ವಪಕ್ಷವು. ಮುಕ್ತಿ ಸಿಗುವಪರ್ಯಂತವೂ ಧ್ಯಾನವು ಆವ ಶ್ಯಕವೆಂದು ಸಿದ್ಧಾಂತವು. ಅದರಲ್ಲಿ ನಾನಾಪ್ರವೃತ್ತಿಃ=(ಧ್ಯಾನಕ್ಕಿಂತ ಬೇರೆ ಯಾದ ಶ್ರವಣ ಮನನ ಮೊದಲಾದ ಸಾಧನಗಳಿಗೂ ಪ್ರವೃತ್ತಿಯು) ಎಂಬ ಪೂರ್ವ ಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸು ತ್ತಾರೆ.

ಮೂ || (೧) ನ ಚಾನ್ಯಸ್ಯಾಪಿ ಸಾಧನಸ್ಯ ಕರ್ತುಂ ಶಕ್ಯತ್ವಾನ್ನ ಯಾವನ್ಮುಕ್ತಿಧ್ಯಾನಂ ಕಾರ್ಯಮಿತಿ ವಾಚ್ಯಂ || (೨) ಧ್ಯಾನಂ ವಿನಾಽಪರೋಕ್ಷಜ್ಞಾನಾಖ್ಯ ವಿಶೇಷಕಾರ್ಯಾನುಪಪತ್ತೇಃ || ೭ ||

ಅ || (೧) ಧ್ಯಾನಕ್ಕಿಂತ ಬೇರೆಯಾದ ಶ್ರವಣ ಮೊದಲಾದ ಸಾಧನಗಳನ್ನು ಆನಂದಾತಿಶಯ ವುಂಟಾಗುವುದಕ್ಕಾಗಿ ಮಾಡಲು ಶಕ್ಯಗಳಾಗಿರುವುದರಿಂದ ಮುಕ್ತಿಪರ್ಯಂತ ಧ್ಯಾನವನ್ನೇ ಮಾಡಬೇಕೆಂತ ನಿಯಮವಿಲ್ಲ, ಎಂದು ಹೇಳಕೂಡದು. (೨) (ಏಕೆಂದರೆ—ವಿಶೇಷ ಕಾರ್ಯಂ=(ಅಪರೋಕ್ಷ ಜ್ಞಾನಾಖ್ಯ ವಿಶೇಷ ಕಾರ್ಯವು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಧ್ಯಾನವಿಲ್ಲದೆ ಅಪರೋಕ್ಷಜ್ಞಾನ ರೂಪವಾದ ವಿಶೇಷ ಕಾರ್ಯವು ಕೂಡದಿರುವುದರಿಂದಲೂ, ಆನಂದಾದ್ಯತಿಶಯರೂಪವಾದ ವಿಶೇಷ ಕಾರ್ಯಕ್ಕೂ ಧ್ಯಾನವೇ ಅಂತರಂಗಸಾಧನವಾದ ಪ್ರಯುಕ್ತ ಮುಕ್ತಿಪರ್ಯಂತ ಧ್ಯಾನವು ಆವಶ್ಯಕವಷ್ಟೆ | ೭ ||

೮ನೇ ತದಧಿಗಮಾಧಿಕರಣದಲ್ಲಿ ಸಕಾಮ ನಿಷ್ಕಾಮ ಕರ್ಮಗಳಿಗೆ ಮೋಕ್ಷ ಸಾಧನತ್ವ ಅಸಾಧನತ್ವಗಳು ಕಂಡುದರಿಂದ ಜ್ಞಾನವು ಮೋಕ್ಷಕ್ಕೆ ಸಾಧನವೋ ಅಲ್ಲವೋ ಎಂದು ಸಂಶಯವು ಬಂದರೆ—ಮೋಕ್ಷ ಸಾಧನವಲ್ಲವೆಂದು ಪೂರ್ವಪಕ್ಷವು. ಮೋಕ್ಷ ಸಾಧನವೇ ಎಂದು ಸಿದ್ಧಾಂತವು. ಅದರಲ್ಲಿ ಕೃತಕೃತ್ಯತಾ=(ಜ್ಞಾನವು ಹುಟ್ಟಿದ ಮೇಲೆ ಎಲ್ಲಾ ಕರ್ಮಗಳೂ ನಾಶವಾಗುವವು,ಆಗ ಕೃತಕೃತ್ಯತ್ವವು,) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಜ್ಞಾನೋದಯೇಽಶೇಷಕರ್ಮಕ್ಷಯೇ ಕೃತಕೃತ್ಯತ್ವಾತ್ತದೈವ ಮುಕ್ತಿಃ |
(೨) ನ ಚೇತ್ಕರ್ಮಕ್ಷಯ ಇತಿ ವಾಚ್ಯಂ || (೩) ಪ್ರಾರಬ್ಧಸ್ಯೈವ ಕೃತಸ್ಯ ಯಾವದ್ಭೋಗಂ ಸಂಸ್ಥಿತೇಃ | (೪) ಕರ್ಮಾಣಿ ಕ್ಷಪಯೇದ್ವಿಷ್ಣುರಪ್ರಾರಬ್ಧಾನಿ ವಿದ್ಯಯಾ |
ಪ್ರಾರಬ್ಧಾನಿ ತು ಭೋಗೇನ ಕ್ಷಪಯನ್ ಸ್ವಪದಂ ನಯೇತ್ || ಇತಿ ವಚನಾಚ್ಚ || ೮ ||

ಅ || (೧) ಜ್ಞಾನವು ಹುಟ್ಟಿದ ಕೂಡಲೇ ಎಲ್ಲಾ ಕರ್ಮಗಳಿಗೂ ನಾಶವಾಗಲು ಕೃತಕೃತ್ಯನಾದ ಪ್ರಯುಕ್ತ ಜ್ಞಾನವು ಹುಟ್ಟಿದ ಕೂಡಲೇನೇ ಮುಕ್ತಿಯಾಗಬೇಕಾಗುವುದು. (ಇಷ್ಟಾಪತ್ತಿಯೆನ್ನಕೂಡದು. ಜೀವನ್ಮುಕ್ತರು ಈಗಲೂ ಇರುತ್ತಾರೆ.) (ಜ್ಞಾನವು ಹುಟ್ಟಿದರೂ ಮುಕ್ತಿಯು ಆಗದಿದ್ದರೆ ಕರ್ಮಕ್ಷಯವೂ ಆಗದೆ ಹೋಗುವುದು. ನಿಷ್ಕಾರಣವಾಗಿ ಇರಲಾರದಷ್ಟೆ.) (೨) ಜ್ಞಾನವು ಹುಟ್ಟಿದರೂ ಸರ್ವಕರ್ಮಗಳಿಗೆ ನಾಶವು ಆಗುವುದಿಲ್ಲವೆಂದಾದರೆ—ಜ್ಞಾನಕ್ಕೆ ವಿರುದ್ಧ ವ್ಯಾಪಾರವು ಕೂಡದಿರುವುದರಿಂದ ಯಾವಾಗಲೂ ಕರ್ಮನಾಶವು ಆಗದೇನೇ ಹೋಗುವುದು. (ಏವಂಚ ಜ್ಞಾನದಿಂದಲೇ ಸರ್ವಕರ್ಮಗಳಿಗೆ ನಾಶವಾದರೆ ಜ್ಞಾನವು ಹುಟ್ಟಿದೊಡನೆಯೇ ಮುಕ್ತಿಯಾಗಬೇಕಾಗುವುದು. ಹೀಗಾಗುವುದಿಲ್ಲ. ಆದಕಾರಣ ಕರ್ಮಗಳು ಪ್ರತಿಬಂಧಕಗಳಾಗಿರುವುದರಿಂದ ಜ್ಞಾನವು ಮೋಕ್ಷಕ್ಕೆ ಸಾಧನವು ಎಂಬ ನಿಯಮವಿಲ್ಲ. ಎಂದರೆ) ಹಾಗೆ ಹೇಳಕೂಡದು (೩)(ಏಕೆಂದರೆ—ಕೃತಸಂಸ್ಥಿತಿ:=(ಮಾಡಿದ ಕರ್ಮವು ಭೋಗ ಪರ್ಯಂತವಾಗಿ ಇರುವುದು,) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) (ಅಪ್ರಾರಬ್ಧವಾದ ಕರ್ಮವೇ ಜ್ಞಾನವು ಹುಟ್ಟಿದೊಡನೆ ನಾಶವಾಗುವುದು ಸರ್ವಕರ್ಮಗಳು ನಾಶಗಳಾಗುವುದಿಲ್ಲ.) ಜ್ಞಾನವು ಹುಟ್ಟಿದರೂ ಪ್ರಾರಬ್ಧವೇ ಆದ ಕರ್ಮವು ಭೋಗ ಪರ್ಯಂತವಾಗಿ ಇರುವುದರಿಂದ (ಜ್ಞಾನವು ಹುಟ್ಟಿದೊಡನೆಯೇ ಮುಕ್ತಿಯಾಗುವುದಿಲ್ಲ.)

(೪) ಶ್ರೀ ಪರಮಾತ್ಮನು ಅಪ್ರಾರಬ್ಧಗಳಾದ ಕರ್ಮಗಳನ್ನು ಜ್ಞಾನದಿಂದ ನಾಶಗೊಳಿಸುವನು. ಪ್ರಾರಬ್ಧಗಳಾದ ಕರ್ಮಗಳನ್ನು ಭೋಗಿಸುವುದರಿಂದಲೇ ನಾಶಗೊಳಿಸುತ್ತ ತನ್ನ ಸ್ಥಾನವನ್ನು ಹೊಂದಿಸುವನು, ಎಂಬ ಪ್ರಮಾಣದಿಂದ (ಜ್ಞಾನವು ಹುಟ್ಟಿದರೂ ಪ್ರಾರಬ್ಧವಾದ ಕರ್ಮವು ಭೋಗ ಪರ್ಯಂತ ಇರುವುದರಿಂದ ಜ್ಞಾನವು ಹುಟ್ಟಿದೊಡನೆಯೇ ಮೋಕ್ಷವಾಗುವುದಿಲ್ಲವೆಂದದ್ದು ಯುಕ್ತವು.) || ೮ ||

ಇತಿ ಶ್ರೀಮದಾನಂದತೀರ್ಥ ಭಗವತ್ಪಾದವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ನ್ಯಾಯವಿವರಣದಲ್ಲಿ ೪ನೇ ಅಧ್ಯಾಯದಲ್ಲಿ ೧ನೇ ಪಾದವು ಸಮಾಪ್ತವಾಯಿತು.

# ೨ನೇ ಪಾದವು

ದೇವತೆಗಳ ದೇಹಕ್ಕೆ ಲಯವನ್ನೂ ಮನುಷ್ಯರಿಗೆ ಉತ್ಕ್ರಾಂತಿಯನ್ನೂ ಪ್ರತಿಪಾದಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ.

ಈ ಪಾದದ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುವರು.

> ವ್ಯಾಮಿಶ್ರತಾ ಕಾರ್ಯಕರತ್ವಮರ್ಥಃ ಕ್ಲೃಪ್ತಿಃ ಸುದಾರ್ಢ್ಯಂ ಪರತಂತ್ರತಾ ಚ । ಸಮಾನಧರ್ಮಃ ಕೃತಶೇಷತಾ ಚ ಲೋಕೋಪಮಾ ಪೂರ್ವಮತಾನುಸಾರಾಃ॥ ವಿಶೇಷ ಸಾಮ್ಯಶ್ರುತಿರಾಧ್ಯತಾ ಚ ಸಮಾನಲೋಪೋ ಮಹಿಮಾವಿಶೇಷಃ । ಕೃತಾರ್ಥತಾ ಶಬ್ದದನುಪ್ರವೃತ್ತಿಃ ಸಿದ್ಧಾಂತನಿರ್ಣೀತಿ ವಿಶಿಷ್ಟಹೇತವಃ ॥ ಎಂದು.

೧ನೇ ವಾಗಧಿಕರಣದಲ್ಲಿ ವಾಗಭಿಮಾನಿದೇವತೆಯು ಮನೋಭಿಮಾನಿಯಲ್ಲಿ ಲಯವನ್ನು ಹೊಂದುತ್ತದೊ ಇಲ್ಲವೋ, ಎಂದು ಸಂಶಯವು ಬಂದರೆ–ಇಲ್ಲವೆಂದು ಪೂರ್ವಪಕ್ಷವು–ಮನಸ್ಸಿನಲ್ಲಿಯೇ ಲಯವನ್ನು ಹೊಂದುತ್ತದೆಂದು ಸಿದ್ಧಾಂತವು. ಅದರಲ್ಲಿ ವ್ಯಾಮಿಶ್ರತಾ=(ವಚನಗಳಿಗೆ ಮಿಶ್ರತ್ವವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ (1) ವಾಕ್ಪೂರ್ವರೂಪಂ । ಮನ ಉತ್ತರರೂಪಂ । (2) ಮನಃಪೂರ್ವ ರೂಪಂ । ವಾಗುತ್ತರರೂಪಂ ಇತ್ಯುಕ್ತೇರ್ವ್ಯಾಮಿಶ್ರತ್ವಾದನಿರ್ಣೀತಿರೇವ । (೨) ವಾಕ್ಪೂರ್ವರೂಪಂ । ಮನ ಉತ್ತರರೂಪಂ । ಇತಿ ವಾಚಃ ಪೂರ್ವವರ್ಣದೇವತಾ ತ್ವನಿರ್ದೇಶಮಾತ್ರೇಣ ಮನಃಪೂರ್ವರೂಪಮಿತ್ಯನೇನ ಸಾಮ್ಯಂ ॥ (೩) ಮನಸಾ ವಾ ಅಗ್ರೇ ಸಂಕಲ್ಪ ಯತ್ಯಥ ವಾಚಾ ವ್ಯಾಹರತೀತಿ ಯುಕ್ತಿತೋ ವಿಶೇಷೋ ಮನಃಪೂರ್ವ ಕತ್ವಸ್ಯೈವ ಶ್ರುತ ಇತಿ ಪ್ರಾಧಾನ್ಯಂ ಮನಸ ಏವೇತಿ ಹಿ ಜ್ಞಾಯತೇ॥ (೪) ಸೃಷ್ಟೌ ಚ ವಿಲಯೇ ಚೈವ ಸದಾ ಪೂರ್ವಪ್ರವರ್ತನೇ।ನಿಯಂತೃತ್ವೇ ಚ ವಚಸೋ ಮನೋಽ ಧೀಶಃ ಶಿವೋ ಹಿ ತತ್ ॥ ಇತಿ ಶ್ರುತೇಶ್ಚ ॥ ೧ ॥

ಅ ॥ (೧) ವಾಕ್‌ಮನಸ್ಸುಗಳಿಗೆ ನಿಯಮ್ಯ ನಿಯಾಮಕ ಭಾವ ವಿಷಯದಲ್ಲಿ, (1) ವಾಕ್ಪೂರ್ವ ರೂಪಂ=ವಾಗಿಂದ್ರಿಯದಲ್ಲಿರತಕ್ಕ ವಾಕ್‌ನಾಮಕವಾದ ಭಗವದ್ರೂಪವು ವಾಗಭಿಮಾನಿಯು ಪೂರ್ವವರ್ಣ ಪ್ರತಿಪಾದ್ಯವು. ಮನಃ ಉತ್ತರರೂಪಂ=ಮನೋನಾಮಕವಾದ ಮನಸ್ಸಿನಲ್ಲಿರತಕ್ಕ ಭಗವದ್ರೂಪವು ಮನೋಭಿಮಾನಿಯು ಉತ್ತರವರ್ಣಪ್ರತಿಪಾದ್ಯವು. ವಾಕ್ಪೂರ್ವರೂಪಂ= ವಾಗಿಂದ್ರಿಯವು ವಾಗಿಂದ್ರಿಯಾ ಭಿಮಾನಿಯು ಪ್ರಧಾನವು. ಮನಃಉತ್ತರರೂಪಂ=ಅಂತಃಕರಣವು ಅಂತಃಕರಣಾಭಿಮಾನಿಯು ಅಪ್ರಧಾನವು (2) ಮನ ಉತ್ತರರೂಪಂ=ಮನೋನಾಮಕವಾದ ವರಾಹರೂಪವು ಪೂರ್ವವರ್ಣಪ್ರತಿಪಾದ್ಯವು. ಅಂತಃಕರಣವು ಪ್ರಧಾನವು. ವಾಗುತ್ತರರೂಪಂ = ವಾಕ್‌ನಾಮಕವಾದ ವಾಮನರೂಪವು ಉತ್ತರ ವರ್ಣಪ್ರತಿಪಾದ್ಯವು. ವಾಗಿಂದ್ರಿಯವು ಅಪ್ರಧಾನವು, ಎಂದು ಪ್ರತಿಪಾದಕಯುಕ್ತಿಗಳು ವ್ಯಾಮಿಶ್ರಗಳಾಗಿರು

ವುದರಿಂದ ವಾಕ್ ಮನಸ್ಸುಗಳಿಗೆ ನಿಯಮ್ಯ ನಿಯಾಮಕಭಾವವು ನಿಶ್ಚಯವಾಗದಿರುವ ಪ್ರಯುಕ್ತ(ಮನೋಭಿಮಾನಿಯಲ್ಲಿ ವಾಗಭಿಮಾನಿಗೆ ಲಯವಾಗುವುದಿಲ್ಲ. ಯಾವುದು ಯಾವುದರ ಅಧೀನವೋ ಅದಕ್ಕೆ ಅದರಲ್ಲಿ ಲಯ ಹೇಳಬೇಕು. ಎಂದರೆ ಹಾಗೆ ಹೇಳಕೂಡದು. (೨)(ಏಕೆಂದರೆ ವಿಶೇಷಸಾಮ್ಯ ಶ್ರುತೇಃ (ವಿಶೇಷವಾಗಿ (ಸಾಮ್ಯಶ್ರುತಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ವಾಕ್ ಮನಸ್ಸುಗಳಿಗೆ ನಿಯಮ್ಯ ನಿಯಾಮಕಭಾವವು ವಾಕ್ಪೂರ್ವರೂಪಂ। ಮನ ಉತ್ತರರೂಪಂ, ಎಂಬ ವಾಕ್ಯಕ್ಕೆ ಮತ್ತು ವಾಕ್ ನಾಮಕನಾದ ಶ್ರೀವಿಷ್ಣುವಿಗೂ ವಿಷ್ಣುಃ ಎಂಬ ಸಂಹಿತೆಯಲ್ಲಿ ಷಕಾರಾದಿ ಪೂರ್ವವರ್ಣದಿಂದ ಪ್ರತಿಪಾದ್ಯತ್ವವನ್ನು ನಿರ್ದೇಶ ಮಾತ್ರ ಮಾಡಿದುದರಿಂದ ಮನಃಪೂರ್ವರೂಪಂ ಎಂಬುವುದರಿಂದ ಸಾಮ್ಯವು. (ಅಂದರೆ–ಮನೋನಾಮಕನಾದ ಶ್ರೀವಿಷ್ಣುವಿಗೂ ಪೂರ್ವವರ್ಣದೇವತಾತ್ವವು ಕೂಡುತ್ತದೆ.) (೩) (ವಿಶೇಷ ಶ್ರುತೇಃ ಎಂಬ ಅಂಶವನ್ನು ವಿವರಿಸುತ್ತಾರೆ.) ಮನಸ್ಸಿನಿಂದಲೇ ಪ್ರಥಮತಃ ಸಂಕಲ್ಪಿಸುತ್ತಾನೆ. ಆ ಮೇಲೆ ಮಾತಿನಿಂದ ಹೇಳುತ್ತಾನೆ, ಎಂಬ ಯುಕ್ತಿಯಿಂದ ವಿಶೇಷವು ವಾಕ್ ಮನಸ್ಸಿನಿಂದಲೇ ಹುಟ್ಟುವುದೆ ಎಂದೇ ಮನಃಪೂರ್ವರೂಪಂ ವಾಗುತ್ತರರೂಪಂ ಎಂಬ ಶ್ರುತಿಸಿದ್ಧವಾಗಿದೆ, ಹೀಗೆ ಮನಸ್ಸಿಗೇನೇ ಪ್ರಾಧಾನ್ಯವು ತಿಳಿಯುತ್ತದೆ. (ಅಂದರೆ–ವಾಕ್ಕು ಮನಸ್ಸಿನಿಂದ ಹುಟ್ಟುತ್ತದೆ ಎಂಬೇ ಯುಕ್ತಿಯಿಂದ ವಿಶೇಷವು ಶ್ರುತವಾಗುವುದರಿಂದ ಮನಸ್ಸಿಗೇನೇ ಪ್ರಾಧಾನ್ಯವು ತಿಳಿಯುತ್ತದೆ.) (೪) (ಮನಸ್ಸೇ ಪ್ರಧಾನವು ಎಂಬಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಸೃಷ್ಟಿ ವಿಷಯದಲ್ಲಿಯೂ, ಸಂಹಾರ ವಿಷಯದಲ್ಲಿಯೂ, ಸರ್ವದಾ ತಮಗಿಂತ ಅವರ ವಸ್ತುಗಳನ್ನು ಪ್ರಥಮತಃ ಪ್ರವರ್ತಿಸುವ ವಿಷಯದಲ್ಲಿಯೂ, ನಿಯಮಿಸುವ ವಿಷಯದಲ್ಲಿಯೂ, ವಾಗಭಿಮಾನಿನಿಯು ಮನೋಽಭಿಮಾನಿಯ ಅಧೀನಳು, ಎಂಬ ಶ್ರುತಿಯು. (ಏವಂಚ ವಾಗಭಿಮಾನಿನಿಯು ನಿಯಮ್ಯಳೆಂದೂ ಮನೋಭಿಮಾನಿಯು ನಿಯಾಮಕನೆಂದೂ ನಿಶ್ಚಯವಾಗುವುದರಿಂದ ವಾಕ್ಕು ಮನಸ್ಸಿನ ಅಧೀನವೇ ಆಗಿರುವುದರಿಂದ ವಾಗಿಂದ್ರಿಯಕ್ಕೆ ಮನಸ್ಸಿನಲ್ಲಿ ಲಯವು ಕೂಡುತ್ತದೆ.) ॥ ೧ ॥

೨ನೇ ಮನಃಪ್ರಾಣಾಧಿಕರಣದಲ್ಲಿ ಮನಸ್ಸು ಪ್ರಾಣನಲ್ಲಿ ಲಯ ಹೊಂದುತ್ತದೋ ಇಲ್ಲವೋ, ಎಂದು ಸಂಶಯವು ಬಂದರೆ-ಇಲ್ಲವೆಂದು ಪೂರ್ವಪಕ್ಷವು. ಪ್ರಾಣನಲ್ಲಿ ಲಯಹೊಂದುತ್ತದೆಂದು ಸಿದ್ಧಾಂತವು. ಅದರಲ್ಲಿ ಕಾರ್ಯಕರತ್ವಂ=(ಎಲ್ಲಾ ಕಾರ್ಯಗಳನ್ನು ಮಾಡುವಿಕೆ) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಮನಃಪೂರ್ವಕತ್ವನಿಯಮಾದಶೇಷದೃಷ್ಟಾದೃಷ್ಟವ್ಯಾಪಾರಾಣಾಂ ತಸ್ಯ ಪ್ರಾಣಾದನೂನತಾ ॥ (೨) ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ । ಮನಃಸ್ಥೇನ ವಿಶೇಷೇಣ ಕಾಮ್ಯೈಃ ಕರ್ಮಕೃದೇವಚ ॥ ಪೃಥಕ್‌ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ। ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ। ಪ್ರಾಣ ಏಕೋ ವಶೀ ನಿತ್ಯಂ ಬಾಹ್ಯಾಂತಃಕರಣೇಶ್ವರಃ । ತಾನ್ಯೇತಾನ್ಯವಶಾನ್ಯೇವ ತಥ್ಯಾಪಿ ಕೃಪಯೈವ ಸಃ । ಪೃಥಕ್ ಶಕ್ತೋಽಪಿ ತದ್ಗೈಸ್ತು ಸ್ವರೂಪೈಸ್ತದ್ಗಕಾರ್ಯಕೃತ್ । ತಸ್ಯೇಶೋ ಭಗವಾನ್ ವಿಷ್ಣುರೇವನಾನ್ಯೋಽಸ್ಯ ಯಥ್ಯಾನ್ಯಗಃ ॥ ಇತ್ಯಾದಿ ಶ್ರುತೇಃ ಪ್ರಾಣಸ್ಯೈವಾಧ್ಯತಾವಗಮಾತ್ ॥ ೨ ॥

ಅ ॥ (೧) ಪ್ರತ್ಯಕ್ಷ, ಅಪ್ರತ್ಯಕ್ಷ ಎಲ್ಲಾ ವ್ಯಾಪಾರಗಳಿಗೂ ಮನಸ್ಸೇ ಕಾರಣವಾಗಿದೆ, ಎಂದು ನಿಯಮವಿದ್ದುದರಿಂದ ಮನಸ್ಸಿಗೆ ಪ್ರಾಣನಿಗಿಂತ ಊನತ್ವವಿಲ್ಲ. (ಅಂದರೆ—ಯಾವುದು ಯಾವುದರಿಂದ ಊನವಾಗಿದೆಯೋ, ಅದಕ್ಕೆ ಅದರಲ್ಲಿ ಲಯವನ್ನು ಹೇಳಬೇಕು. ಪ್ರಾಣನಿಗಿಂತ ಮನಸ್ಸಿಗೆ ಊನತ್ವವು

ಕೊಡುವುದಿಲ್ಲ. ಹೇಗೆ ಪ್ರಾಣನು ಸಮಸ್ತ ಪ್ರವೃತ್ತಿಗಳಿಗೂ ಕಾರಣನೋ, ಹಾಗೆಯೇ ಮನಸ್ಸೂ ಕೂಡ ಅನ್ವಯ ವ್ಯತಿರೇಕಗಳಿಂದ ಸರ್ವ ಪ್ರವೃತ್ತಿಗಳಿಗೂ ಕಾರಣವೆಂದೂ ಕಾಣುತ್ತದೆ. (ಏವಂಚ ಮನಸ್ಸು ಸರ್ವ ಕಾರ್ಯಗಳಿಗೂ ಕರಣವಾಗಿರುವುದರಿಂದ ಪ್ರಾಣನಿಗಿಂತ ಊನವಾಗದಿರುವ ಪ್ರಯುಕ್ತ ಪ್ರಾಣನಲ್ಲಿ ಲಯವಿಲ್ಲದಿರುವುದರಿಂದ ನ್ಯೂನಾಧಿಕಭಾವದಲ್ಲಿ ನಿಶ್ಚಾಯಕವಿಲ್ಲದಿರುವ ಕಾರಣ ನ್ಯೂನವಾದುದಕ್ಕೆ ಅಧಿಕ ವಾದುದರಲ್ಲಿ ಲಯವು ಎಂದು ತಿಳಿದುಕೊಳ್ಳಲಿಕ್ಕೆ ಸಾಧ್ಯವಿಲ್ಲದಿರುವ ಪ್ರಯುಕ್ತ ಅನಿಯಮಃ ಎಂದು ಹೇಳಿದ್ದು ಅಸಂಗತವು, ಎಂದರೆ ಹಾಗೆ ಹೇಳ ಕೂಡದು. (೨) (ಏಕೆಂದರೆ) ಅಧ್ಯಕ್ಷತಾ=(ಶ್ರೇಷ್ಠತ್ವವು) ಎಂದ ಹೇಳಿದ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಈ ಪ್ರಾಣನು ಚಕ್ಷುರಾದಿಗಳಿಗೆ ನಿಯಾಮಕರಾದ ಸೂರ್ಯಾದಿ ಪುರುಷರಲ್ಲಿರತಕ್ಕ ತನ್ನ ರೂಪಗಳಿಂದಲಾದರೂ ಜ್ಞಾನಗಳನ್ನು ಹುಟ್ಟಿಸುತ್ತಾನೆ. ಮನಸ್ಸಿಗೆ ನಿಯಾಮಕನಾದ ರುದ್ರನಲ್ಲಿರತಕ್ಕ ತನ್ನ ವಿಶೇಷ ರೂಪದಿಂದ ಜ್ಞಾನಗಳನ್ನು ಹುಟ್ಟಿಸುತ್ತಾನೆ. (ಹೇಗೆಂದರೆ ಮನಸ್ಸು ಸರ್ವಜ್ಞಾನಕ್ಕೂ ಕಾರಣವು) ಕರ್ಮೇಂದ್ರಿಯಗಳಿಗೆ ನಿಯಾಮಕರಾದ ದೇವತೆಗಳಲ್ಲಿರತಕ್ಕ ರೂಪಗಳಿಂದ ಕರ್ಮಗಳನ್ನು ಮಾಡಿಕೊಂಡೇ ಇರುತ್ತಾನೆ. ಪೃಥಕ್ ಇರುವ ರೂಪದಿಂದ ಪ್ರಾಣನು ಜೀವನನ್ನು ಧರಿಸಿಕೊಂಡಿರುತ್ತಾನೆ. ಜೀವರಲ್ಲಿರತಕ್ಕ ರೂಪದಿಂದ ಅಹಂ ಎಂದು ತಿಳಿಸಿಕೊಡುತ್ತಾನೆ ಪ್ರಾಣನೊಬ್ಬನೇ ಸದಾ ಸರ್ವರನ್ನು ವಶೀಕರಿಸಿಕೊಂಡಿರುತ್ತಾನೆ. ಬಾಹ್ಯೇಂದ್ರಿಯಗಳಿಗೂ ಅಂತಃಕರ ಣಕ್ಕೂ ನಿಯಾಮಕನು. ಯದ್ಯಪಿ ಪ್ರಾಣನು ಪ್ರತ್ಯೇಕವಾಗಿಯೇ ಇಂದ್ರಿಯಾದಿಗಳ ದ್ವಾರವಿಲ್ಲದೇನೆ. ಕಾರ್ಯಗಳನ್ನು ಮಾಡಲಿಕ್ಕೆ ಶಕ್ತನು. ಆದಾಗ್ಯೂ ಇಂದ್ರಿಯಗಳನ್ನು ನಿಯಮಿಸುವುದರಿಂದ ಇಂದ್ರಿಯಾಭಿ ಮಾನಿಗಳಿಗೆ ಫಲಾಧಿಕ್ಯವುಂಟಾಗುವುದು, ಎಂದು ಆ ಇಂದ್ರಿಯಾಭಿಮಾನಿಗಳಲ್ಲಿ ಕೃಪೆಯಿಂದ ಪರತಂತ್ರ ಗಳೇ ಆದ ಇಂದ್ರಿಯಗಳನ್ನು ದ್ವಾರವಾಗಿಟ್ಟುಕೊಂಡು ಅವರಲ್ಲಿರತಕ್ಕ ರೂಪವಿಶೇಷಗಳಿಂದ ಅವರಿಂದ ಮಾಡಲ್ಪಡತಕ್ಕ ಕಾರ್ಯವನ್ನು ಮಾಡುತ್ತಾನೆ. ಆ ಪ್ರಾಣನಿಗೆ ಶ್ರೀವಿಷ್ಣುವೇ ನಿಯಾಮಕನು. ಶ್ರೀಹರಿಯು ಇತರರಲ್ಲಿದ್ದು ಇತರರ ಕಾರ್ಯವನ್ನು ಹೇಗೆ ಮಾಡುತ್ತಾನೋ, ಹಾಗೆಯೇ ಪ್ರಾಣನೊಳಗೆ ಇದ್ದು ಪ್ರಾಣನ ಕಾರ್ಯವನ್ನು ಮಾಡುತ್ತಾನೆ, ಇದು ಮೊದಲಾದ ಶ್ರುತಿಗಳಿಂದ ಮನಸ್ಸಿಗಿಂತ ಪ್ರಾಣನಿಗೆ ಅಧ್ಯಕ್ಷತ್ವವು (ಶ್ರೇಷ್ಠತ್ವವು) ಇದ್ದುದರಿಂದ (ಮನಸ್ಸಿಗೆ, ಪ್ರಾಣನಲ್ಲಿ ಲಯವೆಂದದ್ದು ಯುಕ್ತವು.) ॥ ೨ ॥

## ೩ನೇ ಅಧ್ಯಕ್ಷಾಧಿಕರಣವು

ಈ ೩ನೇ ಅಧಿಕರಣದಲ್ಲಿ ಸ ಪ್ರಾಣಮಸೃಜತ ಎಂದು ಪ್ರಾಣನು ಶ್ರೀ ಪರಮಾತ್ಮನಿಂದ ಹುಟ್ಟಿದ್ದಾ ನೆಂದೂ, ವಿಶೇಷ ದರ್ಶನವಿಲ್ಲದಿರುವಿಕೆ, ಇವುಗಳಿಂದ ಪ್ರಾಣನು ಶ್ರೀಹರಿಯಲ್ಲಿ ಲಯವನ್ನು ಹೊಂದು ತ್ತಾನೋ, ಇಲ್ಲವೋ ಎಂದು ಸಂದೇಹವು ಬಂದರೆ, ಲಯಹೊಂದುವುದಿಲ್ಲವೆಂದು ಪೂರ್ವಪಕ್ಷವು. ಲಯ ಹೊಂದುತ್ತಾನೆಂದು ಸಿದ್ಧಾಂತವು. ಅದರಲ್ಲಿ ಕಾರ್ಯಕರತ್ವಂ=(ಸರ್ವಕಾರ್ಯ ಕರ್ತೃತ್ವ,) ಎಂದು ಪೂರ್ವ ಪಕ್ಷನ್ಯಾಯವು. ಅಧ್ಯಕ್ಷತಾ=ಎನ್ನುವುದೇ ಸಿದ್ಧಾಂತ ನ್ಯಾಯವು. ಇವುಗಳನ್ನು ವಿವರಿಸುತ್ತಾರೆ.

ಮೂ ॥ (೧) ಸೋಽಧ್ಯಕ್ಷೇ ಇತ್ಯಸ್ಯಾಪ್ಯೇವಮೇವಾತಂಕಾ ಪರಿಹಾರಶ್ಚ ॥ (೨) ಶ್ರುತಿಬಾಹುಲ್ಯ ಮೇವಾಽಽಶಂಕಾಯಾಂ ಪರಿಹಾರೇ ಚ ವಿಶೇಷ ಹೇತುಃ ॥ ೩ ॥

ಅ ॥ (೧) ಶ್ರೀ ಹರಿಗಿಂತ ಊನನಾದವನಿಗೇನೇ ಶ್ರೀಹರಿಯಲ್ಲಿ ಲಯವನ್ನು ಹೇಳಬೇಕು, ಪ್ರಾಣ ನಿಗೆ ಶ್ರೀ ಹರಿಗಿಂತ ಊನತ್ವವು ಕೂಡುವುದಿಲ್ಲ. ಹೇಗೆ ಶ್ರೀ ವಿಷ್ಣುವು ಸಮಸ್ತ ಕಾರ್ಯಗಳನ್ನು ಮಾಡು ವವನೋ, ಹಾಗೆಯೇ ಪ್ರಾಣಾದಿದಮಾವಿರಾಸೀತ್ ಇತ್ಯಾದಿ ಶ್ರುತಿಗಳಿಂದ ಪ್ರಾಣನೇ ಸಮಸ್ತ ಕಾರ್ಯ

ಗಳನ್ನು ಮಾಡುವವನೆಂದು ಪ್ರತೀತನಾಗುತ್ತಾನೆ. ಆದಕಾರಣ ಪ್ರಾಣನು ಶ್ರೀ ಪರಮಾತ್ಮನಲ್ಲಿ ಲಯ ಹೊಂದುವುದಿಲ್ಲ ಎಂದರೆ—ಹಾಗೆ ಹೇಳಕೂಡದು. **ಸರ್ವಂ ಹ್ಯೇವೈತತ್ಪರಮೋಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ**, ಪ್ರಾಣನು ಪ್ರಾಣಗಳು ಪ್ರಾಣಿಗಳು ಎಲ್ಲರೂ ಪರಮಾತ್ಮನಲ್ಲಿಯೇ ಇರುತ್ತಾರೆ, ಇತ್ಯಾದಿಶ್ರುತಿಗಳಿಂದ ಪ್ರಾಣನಿಗಿಂತಲೂ ಶ್ರೀ ಪರಮಾತ್ಮನಿಗೆ ಆಧ್ಯತ್ವವು (ಶ್ರೈಷ್ಠ್ಯವು) ತಿಳಿಯುತ್ತದೆ. (೨) (ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಂತೆ ಸಂದೇಹಪರಿಹಾರಗಳೆಂದಾದರೆ-ಬೇರೆ ಅಧಿಕರಣವನ್ನು ಆರಂಭಿಸಿದ್ದು ವ್ಯರ್ಥವೆಂದರೆ) (1) ನ ಪ್ರಾಣಃ ಕಂಚಿದಾಶ್ರಿತಃ (2) ಅನದ್ಯಮಾನೋ ಯದನನ್ನಮತ್ತಿ ಇದು ಮೊದಲಾದ (ಸಾವಕಾಶ) ಶ್ರುತಿಗಳ ಬಾಹುಲ್ಯವು ಸಂದೇಹಕ್ಕೂ (1) **ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ ಪ್ರಾಣೋ ವಾವ ಈಶಿತವ್ಯೇಶಃ ಈಶೋ ಹ್ಯಸೌ ಸರ್ವಸ್ಯೇಶಿತವ್ಯಶ್ಚ ಪರಸ್ಯ** ಇದು ಮೊದಲಾದ ನಿರವಕಾಶಶ್ರುತಿಗಳ ಬಾಹಲ್ಯವು ಪರಿಹಾರಕ್ಕೂ ವಿಶೇಷ ಕಾರಣವು. (ತಥಾಚ ಅಭ್ಯಧಿಕಾಶಂಕೆಯು ಇದ್ದ ಪ್ರಯುಕ್ತ ಈ ಅಧಿಕರಣವು ವ್ಯರ್ಥವಲ್ಲ.) ॥ ೩ ॥

## ೪ನೇ ಭೂತಾಧಿಕರಣವು

ಈ ಅಧಿಕರಣದಲ್ಲಿ ಮುಖ್ಯಾದಿದೇವತೆಗಳಿಗೆ ಅಗ್ನಿಯಲ್ಲಿಯೇ ಲಯವೋ, ಇತರ ಭೂತಗಳಲ್ಲಿಯೋ, ಎಂದು ಸಂಶಯವು ಬಂದರೆ ಅಗ್ನೌ ಸರ್ವೇ ದೇವಾ ವಿಲೀಯಂತೇ ಸಮಸ್ತದೇವತೆಗಳಿಗೆಅಗ್ನಿಯಲ್ಲಿಯೇ ಲಯವು ಎನ್ನುವ ಶ್ರುತ್ಯರ್ಥವು ಕ್ಲೃಪ್ತವಾದ ಪ್ರಯುಕ್ತ ಅಗ್ನಿಯಲ್ಲಿಯೇ ಸರ್ವರಿಗೆ ಲಯವೆಂದು ಪೂರ್ವಪಕ್ಷವು. **ಭೂತೇಷು ದೇವಾ ವಿಲೀಯಂತೇ** ಎಂಬ ಶ್ರುತಿರೂಪವಾದ ಪ್ರಮಾಣ ಸಹಿತವಾದ ಲೋಪವು (ಲಯವು) ಗ್ರಾಹ್ಯವಾದ ಪ್ರಯುಕ್ತ ಕೇವಲ ಅಗ್ನಿಯಲ್ಲಿ ಲಯವಲ್ಲ. ಪೃಥಿವ್ಯಾದಿ ಭೂತಾಂತರಗಳಲ್ಲಿಯೂ ಲಯವೆಂದು ಸಿದ್ಧಾಂತವು. ಏವಂಚ ಹಿಂದೆ ಹೇಳಿದ ಅರ್ಥ ಕ್ಲೃಪ್ತಿ ಸಮಾನ ಲೋಪಗಳೇ, ಇಲ್ಲಿಯೂ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳು ॥ ೪ ॥

## ೫ನೇ ನೈಕಸ್ಮಿನ್ನಧಿಕರಣದಲ್ಲಿ

ದೇವತೆಗಳು ಅಗ್ನಿಯಲ್ಲಿಯೇ ಲಯ ಹೊಂದುತ್ತಾರೋ, ಎಲ್ಲಾ ಭೂತಗಳಲ್ಲಿಯೋ, ಎಂದು ಸಂಶಯವು ಬಂದರೆ—ಅಗ್ನಿಯಲ್ಲಿಯೇ ಲಯ ಹೊಂದುತ್ತಾರೆಂದು ಪೂರ್ವಪಕ್ಷವು. ಎಲ್ಲಾ ಭೂತಗಳಲ್ಲಿಯೂ ಎಂದು ಸಿದ್ಧಾಂತವು. ಆದರಲ್ಲಿ ಅರ್ಥಕ್ಲೃಪ್ತಿಃ=(ಕ್ಲೃಪ್ತವಾದ) ಅರ್ಥವು ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧)ನ ಚ ಭೂತಾನಾಮುತ್ಪತ್ತಿಕ್ರಮ ವೈಪರೀತ್ಯೇನ ಲಯೋಕ್ತೇರ್ಮುಕ್ತಿರ್ಲಯಯೋರ್ವಿಶೇಷಾಭಾವಾಚ್ಚೈಕಸ್ಮಿನ್ನೇವ ಭೂತೇ ಸರ್ವೇಷಾಂ ಲಯೋಽರ್ಥತಃ ಕ್ಲೃಪ್ತ । ಇತಿ ವಾಚ್ಯಂ (೨) ತತ್ತದ್ಭೂತೋದ್ಭವತ್ವಾತ್ತತ್ತದ್ದೇವಾನಾಂ ತತ್ಸಮಾನಾಂ ಚ ವಿಶೇಷ ವಚನಾಭಾವೇ ಸ್ವಸಮಾನಲಯಸ್ಥಾನ ಏವ ಲಯೋಪಪತ್ತೇಃ ॥ (೩) ವಿಶೇಷ ಶ್ರುತೇಶ್ಚ ॥ ೫ ॥

ಅ ॥ (೧) ಪಂಚಭೂತಗಳಿಗೆ ಉತ್ಪತ್ತಿ ಕ್ರಮಕ್ಕಿಂತ ವಿಪರೀತವಾಗಿ ಲಯವು. (ಏಕೆಂದರೆ ಕತಾ ಅ ॥ (೧) ಪಂಚಭೂತಗಳಿಗೆ ... **ಪ್ರಾಣಾದಿಕಸ್ಯಾಸ್ಯ ಹಂತಾ ಭೂಮ್ಯಾದಿಕಸ್ಯ ಚ । ಯಃ ಕ್ರಮಾತ್ ವ್ಯುತ್ಕ್ರಮಾಚ್ಚೈವ ಸ ಹರಿಃ ಪರ** । ಎಂದು ಶ್ರುತಿಯು. **ಅನುರೂಪಃ ಕ್ರಮಃ ಸೃಷ್ಟೌ ಪ್ರತಿರೂಪೋ ಲಯೇ ಉಚ್ಯತೇ** । ಎಂದು ಶ್ರುತಿಯು.

ಕ್ರಮಃ ಎಂದುಸ್ಮೃತಿಯು. ಆತ್ಮನ ಆಕಾಶಸ್ಸಂಭೂತಃ ಇದು ಮೊದಲಾದ ಶ್ರುತಿಗಳಿಂದ ಆಕಾಶಾದಿಗಳ ಕ್ರಮದಿಂದಲೇ ಉತ್ಪತ್ತಿಯು.) (ಆ ಶ್ರುತಿ ಸ್ಮೃತಿಗಳು ಸಂಹಾರ ವಿಷಯಕಗಳು, ಮುಕ್ತಿ ವಿಷಯಕಗಳಲ್ಲ. ಎಂದು ಹೇಳಕೂಡದು-) ಮುಕ್ತಿ ಪ್ರಲಯಗಳಿಗೆ ವಿಶೇಷವಿಲ್ಲ. ಅಂತೂ ವಿಪರೀತವಾಗಿ ಲಯವನ್ನು ಹೇಳದುದರಿಂದಲೂ ಮುಕ್ತಿಪ್ರಲಯಗಳಿಗೆ ವಿಶೇಷವಿಲ್ಲದಿರುವುದರಿಂದಲೂಅಗ್ನಿಗೆ ವಾಯುವಿನಲ್ಲಿಯೂ, ವಾಯುವಿಗೆ ಆಕಾಶದಲ್ಲಿಯೂ ಲಯವನ್ನಂಗೀಕರಿಸಿರುವುದರಿಂದ ಅಗ್ನಿಯೆಂಬ ಒಂದು ಭೂತದಲ್ಲಿಯೇ ಸಮಸ್ತ ದೇವತೆಗಳಿಗೂ ಲಯವೆಂಬುವುದು ಅರ್ಥಾತ್ ಕ್ಲೃಪ್ತವಾಯ್ತು. ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಸಮಾನಲೋಪಃ=(ವಿಶೇಷ ಶ್ರುತಿರೂಪವಾದ ಪ್ರಮಾಣದಿಂದ ಕೂಡಿದ ಲಯವು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಯಾವ ಯಾವ ದೇವತೆಗಳು ಯಾವ ಯಾವ ಭೂತಗಳಿಂದ ಹುಟ್ಟಿರುತ್ತಾರೋ ಆಯಾವ ದೇವತೆಗಳಿಗೆ ಆಯಾವು ಭೂತಗಳಲ್ಲಿಯೇ ಸಾಕ್ಷಾಲ್ಲಯವೆನ್ನಬೇಕು.(ಒಂದೇ ಭೂತದಲ್ಲಿ ಸರ್ವದೇವತೆಗಳಿಗೆ ಲಯವಲ್ಲ.) (ಯಾವಾವದೇವತೆಗಳಿಂದ ಹುಟ್ಟಿರುತ್ತಾರೋ ಆಯಾವ ದೇವತೆಗಳಿಗೆ ಅಲ್ಲಿ ಅಲ್ಲಿ ಲಯವೆನ್ನುವುದಾದರೆ ವರುಣಾದಿಗಳಿಂದ ಹುಟ್ಟದಿರುವ ಅಶ್ವಿನೀ ಮೊದಲಾದ ದೇವತೆಗಳಿಗೆ ವರುಣಾದಿಗಳಲ್ಲಿ ಲಯವೆಂದದ್ದು ಕೂಡದೆಹೋಗಬೇಕಾಗುವುದು. ಎಂದರೆ) ವರುಣಾದಿಗಳಿಂದ ಹುಟ್ಟಿದ ಅಬಾದಿ ದೇವತೆಗಳಿಗೆ ಸಮಾನರಾದ ವರುಣಾದಿಗಳಿಂದ ಹುಟ್ಟದಿರುವ ಅಶ್ವಿನೀ ಮೊದಲಾದ ದೇವತೆಗಳಿಗೆ ತಮಗೆ ಸಮಾನರಾದ ಅಬಾದಿ ದೇವತೆಗಳ ಲಯಸ್ಥಾನರಾದ ವರುಣಾದಿ ದೇವತೆಗಳಲ್ಲಿ ಲಯವು ಉಪಪನ್ನವಾಗುತ್ತದೆ. (ಇಂತಹವರಿಗೂ ಕ್ವಚಿತ್ ಅನ್ಯತ್ರ ಲಯವು ಕಂಡದೆ ಎಂದರೆ) ವಿಶೇಷ ಪ್ರಮಾಣವಿಲ್ಲದಿದ್ದರೇನೇ ಈ ನಿಯಮವು. (೩) (ಇದು ಕೇವಲ ಯುಕ್ತಿಯಿಂದ ಸಿದ್ಧವಾದುದಲ್ಲ ಮತ್ತೆ) ಈ ವಿಷಯದಲ್ಲಿ ಪೃಥಿವ್ಯಾಮ್ಯ್ವಭವಃ ಇದು ಮೊದಲಾದ ವಿಶೇಷ ಶ್ರುತಿಗಳೂ ಇವೆ- (ಏವಂಚ ಇಂತಹವರಿಂದ ಹುಟ್ಟಿದವರೆಂದು ಹೇಳದಿದ್ದ ದೇವತೆಗಳಿಗೂ ಸಮಾನಿಕರಾದ ದೇವತೆಗಳ ಲಯಸ್ಥಾನದಲ್ಲಿಯೇ ಲಯವೆನ್ನಬೇಕು.) ॥ ೫ ॥

## ೬ನೇ ಸಮನಾಧಿಕರಣವು

ಈ ಅಧಿಕರಣದಲ್ಲಿ ಭಗವದಧೀನತ್ವ, ನಿತ್ಯ ಮುಕ್ತತ್ವಗಳಿಂದ ಪ್ರಕೃತಿ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು ಶ್ರೀಹರಿಯಲ್ಲಿ ಲಯ ಹೊಂದುತ್ತಾಳೋ ಇಲ್ಲವೋ ಎಂದು ಸಂಶಯವು ಬಂದರೆ-ಲಯವನ್ನು ಹೊಂದುತ್ತಾಳೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ ಸುದಾರ್ಢ್ಯಂ=(ಅತಿದಾರ್ಢ್ಯವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪ್ರಕೃತೇರಸಂಸಾರಾದಿನೇಶೇನಾಪ್ಯನ್ಯಥಾ ಕರ್ತುಮಶಕ್ಯತ್ವೇನ ಸುದೃಢತ್ವಾತ್ಸರ್ವಸಾಮ್ಯಮೇವೇಶ್ವರೇಣ ॥ ನ ಚೇತ್ಸಂಸಾರಿತ್ವಮಿತಿ ಯುಕ್ತಂ॥ (೧)ಈಶ್ವರಸ್ಯ ಮಹಾಮಹಿಮತ್ವಾತ್ ॥ (೩) ನಿತ್ಯಾಸಂಸಾರಿತ್ವಸ್ಯ ನಿತ್ಯತದನುಗ್ರಹೇಣೈವೋಪಪತ್ತೇಃ ॥ (೪) ಸದ್ಯೋನಿತ್ಯತಯಾಽನಿತ್ಯಂ ನಿತ್ಯಂ ನಿತ್ಯಾತ್ಮನಾ ಯತಃ । ನಿತ್ಯಯೈವ ಸ್ವಶಕ್ತ್ಯೇಶೋ ನಿಯಾಮಯತಿ ನಿತ್ಯದಾ ॥ ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವಶ್ಚೇತನಾ ಧೃತಿಃ । ಪ್ರಕೃತಿಃ ಪುರುಷಶ್ಚೈವ ನ ಸಂತಿ ಯದುಪೇಕ್ಷಯಾ ॥ ಇತ್ಯಾದಿ ಶ್ರುತೇಶ್ಚ ॥ ೬ ॥

ಅ ॥ (೧) ಲಕ್ಷ್ಮೀದೇವಿಗೆ ಸಂಸಾರಾದಿಗಳಿಲ್ಲದಿರುವುದರಿಂದ ಶ್ರೀಹರಿಗೂ ವ್ಯತ್ಯಾಸ ಪಡಿಸಲಿಕ್ಕೆ ಶಕ್ಯವಿಲ್ಲದಿರುವುದರಿಂದ ಸ್ವಾತಂತ್ರ್ಯವು ಅತಿ ದೃಢವಾಗಿರುವ ಪ್ರಯುಕ್ತ ಶ್ರೀಹರಿಯಿಂದ ಸರ್ವವಿಷಯದಲ್ಲಿಯೂ

ಸಾಮ್ಯವೇ ಬರಬೇಕಾಗುವುದು. (ಸಂಸಾರಿಗಳಿಗೇನೇ ಮುಕ್ತಿಗಾಗಿ ಲಯವನ್ನು ಹೇಳಬೇಕು. ಲಕ್ಷ್ಮೀ ದೇವಿಯು ನಿತ್ಯ ಮುಕ್ತಳಾದುದರಿಂದ ಅವಳಿಗೆ) ಸಂಸಾರವು ಇಲ್ಲವೆಂದು ಹೇಳುವುದಾದರೆ ಶ್ರೀಹರಿಯಿಂದ ಸರ್ವಸಾಮ್ಯವು ಬರಬೇಕಾಗುವುದು. (ಆದಕಾರಣ ಲಕ್ಷ್ಮೀದೇವಿಗೆ ಸಂಸಾರವು ಇಲ್ಲವೆಂದು ಹೇಳಕೂಡದು. ಆದಕಾರಣ ಲಕ್ಷ್ಮೀದೇವಿಗೂ ಶ್ರೀ ವಿಷ್ಣುವಿನಲ್ಲಿ ಲಯಹೇಳಬೇಕು.ಎಂದರೆ)ಹಾಗೆಹೇಳುವುದು ಯುಕ್ತವಲ್ಲ. (೨) (ಏಕೆಂದರೆ) (ಮಹಿಮಾ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ತದಪೇಕ್ಷೇಃ ಸಂಸಾರ ವ್ಯಪದೇಶಾತ್ ಇದು ಮೊದಲಾದ ಸೂತ್ರಗಳಲ್ಲಿ ಹೇಳದ ಮೋಚಕತ್ವ ಸೂಕ್ಷ್ಮತ್ವ, ಜ್ಞಾನಾನಂದಾದಿ ಗುಣಾಧಿಕ್ಯಾದಿ ರೂಪವಾದ ಮಹಾಮಹಿಮೆಯು ಶ್ರೀಹರಿಗೆ ಇದ್ದ ಪ್ರಯುಕ್ತ (ಲಕ್ಷ್ಮೀದೇವಿಗೆ ಶ್ರೀಹರಿ ಯಿಂದ ಸಾಮ್ಯವಿಲ್ಲ.) (೩) (ಲಕ್ಷ್ಮೀದೇವಿಗೆ ನಿತ್ಯದಲ್ಲಿಯೂ ಸಂಸಾರವಿಲ್ಲವೆಂದಾದರೆ ಗುಣಾಂತರದಿಂಗ ವೈಷಮ್ಯವು ಕೂಡಲಾರದು ಎಂದರೆ) ನಿತ್ಯದಲ್ಲಿಯೂ ಸಂಸಾರವಿಲ್ಲವೆನ್ನುವುದು ನಿತ್ಯವಾದ ಭಗವಂತನ ಅನುಗ್ರಹದಿಂದಲೇ ಉಪಪನ್ನವಾಗುತ್ತದೆ. (೪) (ನಿತ್ಯವಾದುದಕ್ಕೂ ಭಗವದಧೀನತ್ವವಿದೆ ಎಂಬುವಲ್ಲಿ ಪ್ರಮಾಣಹೇಳುತ್ತಾರೆ) ಹೇಗೆ ಅನಿತ್ಯವಾದ ಘಟಾದಿಗಳನ್ನು ಶ್ರೀಹರಿಯು ಅನಿತ್ಯವಾಗಿಯೇ ಸದಾ ನಿಯಮಿಸು ತ್ತಾನೋ, (ಯಾವಾಗಲೂ ಅನಿತ್ಯವಾದುದನ್ನು ನಿತ್ಯವನ್ನಾಗಿ ಮಾಡುವುದಿಲ್ಲವೋ) ಹಾಗೆಯೇ ನಿತ್ಯವಾದ ಪ್ರಕೃತ್ಯಾದಿಗಳನ್ನು ನಿತ್ಯವಾಗಿಯೇ ನಿತ್ಯನಾದ ತನ್ನ ಶಕ್ತಿಯಿಂದಲೇ ಸರ್ವದಾ ನಿಯಮಿಸುತ್ತಾನೆ )ಯಾವಾ ಗಲೂ ಅನಿತ್ಯವನ್ನಾಗಿ ಮಾಡುವುದೇ ಇಲ್ಲ.) (ದುಂತ ಪ್ರಾಗಭಾವಾದಿಗಳಿಗೆ ನಿತ್ಯ ಕರ್ಮಾನುಷ್ಠಾನದ್ವಾರಾ ಅಸ್ಮದಧೀನ ನಿತ್ಯತ್ವವು. ಪ್ರಕೃತ್ಯಾದಿಗಳಿಗಾದರೂ ಈಶ್ವರಾಧೀನ ನಿತ್ಯತ್ವವು. ದ್ರವ್ಯ (ಪ್ರಕೃತಿ ಮೊದಲಾದ ತತ್ವಗಳು) ಕರ್ಮ=ಧರ್ಮ ಅಧರ್ಮಗಳು, ಕಾಲವು, ಪ್ರಕೃತ್ಯಾದಿಗಳ ಪರಿಣಾಮಾದಿಗಳು, ಪ್ರಕೃತ್ಯಾದಿ ತತ್ವಗಳ, ಮತ್ತು ಅದರ ಪರಿಣಾಮಗಳ ಅಭಿಮಾನಿಯು, ಧೈರ್ಯವು, ಪ್ರಕೃತಿಯು, ಜೀವನು ಇವೆಲ್ಲವೂ ಯಾವ ಶ್ರೀಹರಿಯನ್ನು ಪೇಕ್ಷಿಸಿಕೊಂಡಿರುವುದಿಲ್ಲ, ಇದು ಮೊದಲಾದ ಶ್ರುತಿಗಳಿಂದ ಶ್ರೀಹರಿಗೆ ಮಹಾಮಹಿ ಮೆಯು ಇದ್ದುದರಿಂದ ಶ್ರೀ ಲಕ್ಷ್ಮೀದೇವಿಗೆ ಶ್ರೀಹರಿಯಿಂದ ಸಾಮ್ಯವಿಲ್ಲದಿರುವುದರಿಂದ ಹಿಂದೆ ಹೇಳಿದು ಯುಕ್ತವು. ॥ ೬ ॥

## ತಾನಿಪರಾಧಿಕರಣವು

ಈ ಅಧಿಕರಣದಲ್ಲಿ ಚತುರ್ಮುಖನಿಂದ ಇತರರಾದ ದೇವತೆಗಳು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೋ ಇಲ್ಲವೋ, ಎಂದು ಸಂಶಯವು ಬಂದರೆ ಲಯವನ್ನು ಹೊಂದುವುದಿಲ್ಲವೆಂದು ಪೂರ್ವ ಪಕ್ಷವು. ಲಯವನ್ನು ಹೊಂದುತ್ತಾರೆಂದು ಸಿದ್ಧಾಂತವು. ಅದರಲ್ಲಿ ಪರತಂತ್ರತಾ=(ಪರಾಧೀನತ್ವವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚಾನ್ಯದೇವಾದೀನಾಂ ಪ್ರಾಣಾಧೀನತ್ವಾತ್ತತ್ಪ್ರಾಪ್ತಿನಿಯಮಾತ್ಪರಪ್ರಾಪ್ತಿ ರ್ನಾಸ್ತ್ಯೇವ ॥ (೨) ಪ್ರಾಣಂ ಪ್ರಾಪ್ಯ ಪರಂ ದೇವಾಸ್ತದನ್ಯೇ ಚೈವ ತದ್ಗತಾಃ। ಪ್ರಾಪ್ನು ವಂತಿ ಪರಂ ದೇವಂ ವಸಂತಿ ಚ ಯಥಾಸುಖಂ ॥ ಇತಿ ವಿಶೇಷಶ್ರುತೇಃ ॥ ೭ ॥

ಅ ॥ (೧) ಮುಖ್ಯಪ್ರಾಣನಿಂದ ಇತರರಾದ ದೇವಾದಿಗಳು (ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್ ಎಂಬ ವಚನದಿಂದ) ಚತುರ್ಮುಖನ ಪ್ರತಿಬಿಂಬರಾದುದರಿಂದ ಪ್ರತಿಬಿಂಬಕ್ಕೆ ಬಿಂಬದಲ್ಲಿಯೇ ಲಯವೆಂಬ ನಿಯಮವಿದ್ದುದರಿಂದ, ಚತುರ್ಮುಖನಿಂದ ಇತರರಾದ ದೇವತೆ ಗಳಿಗೆ ಪರಮಾತ್ಮನ ಪ್ರತಿಬಿಂಬತ್ವವಿಲ್ಲದಿರುವುದರಿಂದ ಪರಬ್ರಹ್ಮನ ಪ್ರಾಪ್ತಿಯು ಇಲ್ಲವೇ ಇಲ್ಲ. (ಏವಂಚ ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಪ್ರಾಣನ ಅಧೀನತ್ವವಿದ್ದುದರಿಂದ ಭಗವಂತನಲ್ಲಿ ಲಯವಿಲ್ಲ

ಹಿರುವುದರಿಂದ ಜ್ಞಾನಿಗಳಿಗೂ ಮೋಕ್ಷವಿಲ್ಲವೆಂದಾಗಬೇಕಾಗುವುದು) ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ವಿಶೇಷಃ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ದೇವತೆಗಳು ಚತುರ್ಮುಖನನ್ನು ಹೊಂದಿಯೇ ತದ್ವಾರಾ ಶ್ರೀ ಪರಮಾತ್ಮನನ್ನು ಹೊಂದುತ್ತಾರೆ. ಅಲ್ಲಿ ಲಯ ಹೊಂದುತ್ತಾರೆ. ದೇವತೆಗಳಿಂದ ಇತರರಾದ ಋಷ್ಯಾದಿಗಳು ದೇವತೆಗಳ ದ್ವಾರಾ ಶ್ರೀ ಪರಮಾತ್ಮನನ್ನು ಹೊಂದುತ್ತಾರೆ. ತಂತಮ್ಮ ಯೋಗ್ಯತಾನುಸಾರ ಸುಖದಿಂದ ಆವಾಸ ಮಾಡುತ್ತಾರೆ. ಎಂಬ ವಿಶೇಷ ಶ್ರುತಿಯಿಂದ (ಪ್ರಾಣನಿಗೆ ಪರಮಾತ್ಮನ ಪ್ರಾಪ್ತಿಯಾದಾಗ ಪ್ರಾಣನಲ್ಲಿ ಪ್ರವಿಷ್ಟರಾದವರಿಗೆ ಪರಮಾತ್ಮನ ಪ್ರಾಪ್ತಿಯು ಅವಶ್ಯವಾಗಿ ಆಗಬೇಕಾಗುವುದರಿಂದ ಹಿಂದೆ ಹೇಳಿದ್ದು ಯುಕ್ತವು.) ॥ ೭ ॥

## ಅವಿಭಾಗಾಧಿಕರಣವು

ಈ ಅಧಿಕರಣದಲ್ಲಿ ಮುಕ್ತರು ಸ್ವತಂತ್ರರೋ ಅಲ್ಲವೋ ಎಂದು ಸಂಶಯವು ಬಂದರೆ–ಸ್ವತಂತ್ರರೆಂದು ಪೂರ್ವಪಕ್ಷವು, ಅಲ್ಲವೆಂದು ಸಿದ್ಧಾಂತವು. ಅದರಲ್ಲಿ ಸಮಾನಧರ್ಮಃ (ಸಂಸಾರ ಸಮಾನ ಧರ್ಮವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಸತ್ಯಸಂಕಲ್ಪತ್ವಾದೇರೀಶ್ವರಸಂಕಲ್ಪಾದ್ಯನುಸಾರಿತ್ವ ನಿಯಮೇ ಸಂಸಾರ ಸಮಾನಧರ್ಮತ್ವಂ ಮುಕ್ತೇರಿತಿ ವಾಚ್ಯಂ ॥ (೨) ಕೃತಾರ್ಥತ್ವೇನೈವ ವಿಶೇಷೋಪಪತ್ತೇಃ (೩) ಅಪೂರ್ಣತಾದಿಭಾವೋ ವಾ ದುಃಖಂ ವಾ ನಾಸ್ತಿ ಕಿಂಚನ । ಮುಕ್ತಸ್ಯ ಪಾರತಂತ್ರ್ಯೇಽಪಿ ತಾರತಮ್ಯೇಽಪ್ಯತಃ ಸುಖೀ ॥ ಇತಿ ಚ ಶ್ರುತಿಃ ॥ ೮ ॥

ಅ॥ (೧) ಮುಕ್ತರು ಸ್ವತಂತ್ರರು, ಸತ್ಯ ಸಂಕಲ್ಪರಾದುದರಿಂದ, ಮತ್ತು ಮುಕ್ತರಾದುದರಿಂದ, ಆ ಸತ್ಯಸಂಕಲ್ಪತ್ವಾದಿಗಳು ಈಶ್ವರ ಸಂಕಲ್ಪಾದ್ಯನುಸಾರಿಗಳು ಎಂದು ನಿಯಮವಿದ್ದರೆ (ಅಂತೂ ಮುಕ್ತರಿಗೂ ಅಸ್ವಾತಂತ್ರ್ಯವಿದ್ದರೆ) (ದುಃಖಾದಿಗಳು ಬರಬೇಕಾಗುವವು. ಅದರಿಂದ) ಮುಕ್ತಿಗೂ ಸಂಸಾರ ಸಮಾನ ಧರ್ಮತ್ವವು ಬರಬೇಕಾಗುವುದು. ಆದಕಾರಣ ಮುಕ್ತರು ಸ್ವತಂತ್ರರೇ, ಪರಮಾತ್ಮನಿಗೆ ಸರ್ವೋತ್ತಮತ್ವೋಕ್ತಿಯು ವಿರುದ್ಧವು ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ–ಕೃತಾರ್ಥತಾ ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಮುಕ್ತರಾದವರಿಗೆ ಈಶ್ವರನ ಅಧೀನತ್ವವು ಇದ್ದರೂ ಮುಕ್ತರಾದುದರಿಂದಲೇ ದುಃಖಾಭಾವ ಸತ್ಯ ಸಂಕಲ್ಪತ್ವಾದಿ ವಿಶೇಷವು ಉಪಪನ್ನವಾಗುತ್ತದೆ. (ಅಂದರೆ–ಸತ್ಯಸಂಕಲ್ಪತ್ವಾದಿಗಳಿಗೆ ಭಗವತ್ಸಂಕಲ್ಪಾದ್ಯನುಸಾರಿತ್ವನಿಯಮವನ್ನಂಗೀಕರಿಸಿದರೆ ಮುಕ್ತರಿಗೆ ಅತ್ಯಂತ ಅಸ್ವಾತಂತ್ರ್ಯವು ಪ್ರಾಪ್ತವಾಗುವುದರಿಂದ ದುಃಖಾದಿಗಳು ಪ್ರಾಪ್ತಗಳಾದರೆ ಸಂಸಾರ ಸಮಾನಧರ್ಮತ್ವವೇ ಬರಬೇಕಾಗುವುದು ಎಂದದ್ದು ಯುಕ್ತವಲ್ಲ. ಏಕೆಂದರೆ ಭಗವದಿಚ್ಛಾನುಸಾರವಾಗಿ ಇಚ್ಛಿಸಿದರೆ ಆಗ ಅದು ಸಿಗದಿರುವುದರಿಂದ ದುಃಖಾದಿಗಳನ್ನನುಭವಿಸುವನು, ಮುಕ್ತರಾದರೂ ಸರ್ವದಾ ಭಗವದಿಚ್ಛಾನುಸಾರವಾಗಿಯೇ ಇಚ್ಛಿಸುತ್ತಾರೆ. ಆದಕಾರಣ ಭಗವಂತನ ಕಾಮನಾ ನಿಮಿತ್ತದಿಂದಲೇ ಮುಕ್ತರು ಇಚ್ಛಿಸುವುದರಿಂದ ಅಭಿಲಷಿತವೆಲ್ಲವೂ ಸಿಗುವುದರಿಂದ ಅಸ್ವತಂತ್ರರಾದವರಾದಾಗ್ಯೂ ದುಃಖಲೇಶವಿಲ್ಲವೆನ್ನುವುದು ಕೂಡುತ್ತದೆ.) (೩) (ಮುಕ್ತರಿಗೆ ಪಾರತಂತ್ರ್ಯವಿದ್ದರೂ ದುಃಖವಿಲ್ಲವೆನ್ನುವಲ್ಲಿ ಪ್ರಮಾಣ ಹೇಳುತ್ತಾರೆ.) ಮುಕ್ತರಿಗೆ ಪರಾಧೀನತ್ವವಿದ್ದರೂ ದುಃಖಲೇಶವೂ ಇಲ್ಲವೇ ಇಲ್ಲ. ಆದ ಕಾರಣ ಮುಕ್ತನು ಸುಖೀ ಎನಿಸುತ್ತಾನೆ. (ಅಂದರೆ ಮುಕ್ತರು ಅಮುಕ್ತರು ಇಬ್ಬರೂ ಪರತಂತ್ರರಾದಾಗ್ಯೂ ಮುಕ್ತನು ಸಮಸ್ತದುಃಖಗಳಿಂದ ವಿರಹಿತನಾದುದರಿಂದ ಸುಖೀ ಎನಿಸುತ್ತಾನೆ. ಸಂಸಾರಿಯು ಹಾಗೆ ಹೇಳಿಸಲ್ಪಡುವುದಿಲ್ಲ.) ಮುಕ್ತರಿಗೆ ತಾರತಮ್ಯವಿದ್ದರೂ ಅಪೂರ್ಣತ್ವಾದಿಗಳು ಇಲ್ಲ. (ಮುಕ್ತರಿಗೆ ಎಲ್ಲರಿಗೂ ಯೋಗ್ಯತಾನುಸಾರವಾಗಿ ಪೂರ್ಣತ್ವವಿದೆ.

ಅಧಿಕವಾದುದನ್ನು ಇಚ್ಛಿಸಿದರೆ ಅದು ಸಿಗದಿದ್ದರೆ ದುಃಖಾದಿಗಳು ಪ್ರಾಪ್ತಗಳಾಗುವವು. ಮುಕ್ತರು ಪೂರ್ಣರಾದುದರಿಂದ ಅಯೋಗ್ಯವಾದುದನ್ನು ಕಾಮಿಸುವುದೇ ಇಲ್ಲ.) ಎಂದು ಶ್ರುತಿಯು. (ಏವಂಚ ಮುಕ್ತರು ಕೃತಾರ್ಥರಾದುದರಿಂದ ಪರತಂತ್ರರಾದಾಗ್ಯೂ ದುಃಖಾದಿಗಳು ಪ್ರಾಪ್ತಗಳಾಗದೆ ಇರುವುದರಿಂದ ಮುಕ್ತಿಗೆ ಸಂಸಾರ ಸಮಾನ ಧರ್ಮತ್ವವಿಲ್ಲದಿರುವ ಕಾರಣ ವಿಷ್ಣುವಿಗೆ ಸರ್ವೋತ್ತಮತ್ವವು ಯುಕ್ತವು)॥ ೮ ॥

## ಕದೋಕೋಧಿಕರಣವು

ಈ ಅಧಿಕರಣದಲ್ಲಿ ಅಜ್ಞ ಜನರ ಮರಣದಂತೆ ಜ್ಞಾನಿಗಳಿಗೆ ಮರಣವೋ ವಿಲಕ್ಷಣವಾಗಿಯೋ ಎಂದು. ಸಂದೇಹವು ಬಂದರೆ—ಅಜ್ಞ ಜನರ ಮರಣದಂತೆಯೇ ಎಂದು ಪೂರ್ವಪಕ್ಷವು. ವಿಲಕ್ಷಣವಾಗಿ ಎಂದು ಸಿದ್ಧಾಂತವು. ಆದರಲ್ಲಿ ಕೃತಶೇಷತಾ= (ಪ್ರಾರಬ್ಧ ಕರ್ಮದ ಶೇಷತ್ವವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪ್ರಾರಬ್ಧಕರ್ಮಶೇಷವತ್ವಾದುತ್ಕ್ರಾಂತಾವವಿಶೇಷೋ ಜ್ಞಾನಿನಃ ॥ (೨) ಜ್ಞಾನೋಽಪಯಾಸಂತರಂ ಸರ್ವದಾ ಜ್ಞಾನಫಲಸ್ಯಾನುಪ್ರವೃತ್ತೇಃ ॥ (೩) ಪ್ರಾರಬ್ಧಕರ್ಮಶೇಷಸ್ತು ವಿರಜಾತರಣಾವಧಿಃ । ಸ್ನೋದಯಾತ್ಫಲದಂ ಜ್ಞಾನಮಾಪೇಹಂ ಕರ್ಮಪ್ಯಾತ್ಯರವೇಃ । ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ನಹಭಿದ್ಯತೇ ॥ ಇತಿ ಶ್ರುತಿಃ ॥ (೪) ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ । (೫) ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ (೬) ಸ ಪ್ರಾಪ್ನೋತಿ ವಿರಜಾಂ ಸದೇಂ ॥ ತತ್ಸುಕೃತದುಷ್ಕೃತೇ ವಿಧೂನುತೇ॥ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾನೃತಾತ್ಪರಿಮುಚ್ಯಂತಿ ಸರ್ವೇ॥ ಇತಿ ಚ॥ (೭) ಅನ್ಯಥಾಭಾವನಿಯಮೋಽನ್ಯತತಾ ಕಾರ್ಯಕಾರಣೇ ಇತಿ ಚ ॥ ೯ ॥

ಅ ॥ (೧) ಪ್ರಾರಬ್ಧ ಕರ್ಮ ಶೇಷವುಳ್ಳವನಾದುದರಿಂದ ಜ್ಞಾನಿಗೆ ಮರಣಕಾಲದಲ್ಲಿ ಅಜ್ಞಾನಿಗಿಂತ ವಿಶೇಷವಿಲ್ಲ. (ಅಂದರೆ—ಅಜ್ಞಾನಿಗಳ ಮರಣದಂತೆ ಜ್ಞಾನಿಗಳ ಮರಣಕ್ಕೂ ಪ್ರಾರಬ್ಧಕರ್ಮವೇ ಕಾರಣವಾಗಿರುವುದರಿಂದ ಅಜ್ಞಾನಿಗಳ ಮರಣಕ್ಕಿಂತ ಜ್ಞಾನಿಗಳ ಮರಣಕ್ಕೆ ವಿಶೇಷವಿಲ್ಲ. ಜ್ಞಾನಿಯಾದವನಿಗ ಪ್ರಾರಬ್ಧ ಕರ್ಮವೇ ಇಲ್ಲವೆಂದು ಹೇಳಕೂಡದು. ದೇಹತ್ಯಾಗ ಪ್ರರ್ಯಂತ ಪ್ರಾರಬ್ಧ ಕರ್ಮವಿದೆ. ಪ್ರಾರಬ್ಧಕರ್ಮವಿದ್ದರೂ ಜ್ಞಾನಿಗಳ ಮರಣವು ವಿಲಕ್ಷಣವು ಎನ್ನುವುದು ಯುಕ್ತವಲ್ಲ. ವಿಶೇಷ ಕಾರಣವಿಲ್ಲ.) (ಏವಂಚ ಜ್ಞಾನಿಗಳ ಮರಣವು ಅಜ್ಞ ಮರಣ ಸಾಧಾರಣವಾಗಿರುವುದರಿದ ಜ್ಞಾನಕ್ಕೆ) ಅತಿಶಯವಿಲ್ಲ.) ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ—ಶಶ್ವದನು ಪ್ರವೃತ್ತಿಃ (ಯಾವಾಗಲೂ ಅಜ್ಞಾನವು ಹುಟ್ಟಿದ ಮೇಲೆ ಜ್ಞಾನಫಲವುಂಟಾಗುವುದು) ಎಂಬ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ. ಜ್ಞಾನವು ಹುಟ್ಟಿದ ಮೇಲೆ ಸರ್ವದಾ ಜ್ಞಾನಫಲವು (ಸಂಚಿತ ಕರ್ಮಗಳಿಗೆ ಕ್ಷಯ, ಆಗಾಮಿ ಸರ್ವ ಪ್ರಾರಬ್ಧ ಕರ್ಮಗಳಿಗೆ ಉಪಮರ್ದ, ಉತ್ಕ್ರಮಣಾದಿಗಳು)ಪ್ರವೃತ್ತಗಳಾಗುತ್ತವೆ.(ಅಂದರೆ—ಜ್ಞಾನಿ ಅಜ್ಞಾನಿಗಳಿಗ ಪ್ರಾರಬ್ಧ ಕರ್ಮದಿಂದ ವಿಶೇಷವಿಲ್ಲವಾದರೂ ಜ್ಞಾನಿಯಾದವನಿಗೆ ಮರಣದಲ್ಲಿ (ಜ್ಞಾನ ಸಾಮರ್ಥ್ಯದಿಂದಲೇ ವಿಶೇಷವು ಕೂಡುತ್ತದೆ. ಏವಂಚ ಜ್ಞಾನರೂಪ ವಿಶೇಷಕಾರಣವಿದ್ದುದರಿಂದ ಜ್ಞಾನಿಗಳ ಮರ

ಣಕ್ಕೆ ಅಜ್ಞರ ಮರಣಕ್ಕಿಂತ ವೈಲಕ್ಷಣ್ಯವು ಕೂಡುತ್ತದೆ.) (೩) ಜ್ಞಾನವು ಹುಟ್ಟಿದಲಾಗ್ಯಾತು ಫಲ ಪ್ರದವಾಗುತ್ತದೆ, ಎಂಬಲ್ಲಿ ಪ್ರಮಾಣ ಹೇಳುತ್ತಾರೆ.) ಜ್ಞಾನವು ತನ್ನ ಉತ್ಪತ್ತಿಯನ್ನಾರಂಭಿಸಿ ಫಲ ಪ್ರದವಾಗುತ್ತದೆ. ಪ್ರಾರಬ್ಧ ಕರ್ಮವು ವೈಶ್ವಾನರೇ ದ್ಯುಸದ್ಯಾಂ ವಾ ಸೂರ್ಯೇವಾ ದೇಹ ಏವ ವಾ। ವಿಧೂಯ ಸರ್ವಪಾಪಾನಿ, ಇತ್ಯಾದಿ ಪ್ರಮಾಣದಲ್ಲಿ ಹೇಳಿದ ಪ್ರಕಾರ) ದೇಹವಿರುವಪರ್ಯಂತ ಅಥವಾ ಸೂರ್ಯಇರುವ ಪರ್ಯಂತ ಫಲಪ್ರದವಾಗುತ್ತದೆ- (ಯದ್ಯಪಿ ಜ್ಞಾನವು ಹುಟ್ಟಿದ ಲಾಗ್ಯಾತು ಫಲಪ್ರದ ವಾಗುತ್ತದೆ.) ಆದಾಗ್ಯೂ (ಪ್ರಾರಬ್ಧ ಕರ್ಮವೇ ಪ್ರತಿಬಂಧಕವಾಗಿರುವುದರಿಂದ) ಪ್ರಕೃತಿಯ ಬಂಧವು ಬ್ರಹ್ಮನಿಂದ ಕೂಡಿಯೇ ಭೇದಿಸಲ್ಪಡುತ್ತದೆ. (ಅಂತೂ ಬ್ರಹ್ಮನ ಪ್ರಕೃತಿ ಬಂಧನಾಶವಾದಾಗ ಆಗುತ್ತದೆ.) (ಅಂತೂ ಸೂರ್ಯಾದಿಗಳಲ್ಲಿ ಸಂಪೂರ್ಣ ಪ್ರಾರಬ್ಧ ಕರ್ಮವು ವಿನಾಶವಾಗುತ್ತದೆಂದು ಹೇಳುವುದಿಲ್ಲ. ಮತ್ತೆ ಸಶೇಷವಾಗಿಯೇ ನಾಶವಾಗುವುದು. ಆ ಪ್ರಾರಬ್ಧ ಕರ್ಮ ಶೇಷವು ವಿರಜಾನದಿಯನ್ನ ದಾಟುವವರೇಗೆ ಇರುತ್ತದೆ.) ಎಂದು ಶ್ರುತಿಯು (೪) (ಅದೇಹಂ ಕರ್ಮ ಫಲದಂ ಎಂಬುವಲ್ಲಿ ಸ್ಪಷ್ಟ ಪ್ರಮಾಣ ಹೇಳುತ್ತಾರೆ.) ಶರೀರದಲ್ಲಿ ಪ್ರಾರಬ್ಧ ಪಾಪಗಳನ್ನು ಬಿಟ್ಟು ಸಮಸ್ತಕಾಮಗಳನ್ನು ಹೊಂದುತ್ತಾನೆ. (೫) (ಆರವೇಃ ಎಂಬುವಲ್ಲಿಯೂ ಸ್ಪಷ್ಟ ಪ್ರಮಾಣ ಹೇಳುತ್ತಾರೆ.) 2ಮಾತ್ರಾಗಳುಳ್ಳ ಓಂಕಾರದಿಂದ ಶ್ರೀ ಪರ ಮಾತ್ಮನನ್ನು ಧ್ಯಾನಿಸುವವನು ಧ್ಯಾನಾರ್ಹನಾದ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು ತೇಜೋ ರೂಪನಾದ ಸೂರ್ಯನನ್ನು ಹೊಂದಿದವನಾಗಿ ಸರ್ಪವು ಜೀರ್ಣವಾದ ತ್ವಕ್ಕಿನಿಂದ ಹೇಗೆ ಬಿಡಲ್ಪಡುತ್ತದೋ ಹೀಗೆಯೇ ಧ್ಯಾನಿಸುವವನು ಪ್ರಾರಬ್ಧವಾದ ಪಾಪದಿಂದ ಬಿಡಲ್ಪಡುತ್ತಾನೆ. (೬) (ಪಾರಬ್ಧ ಕರ್ಮ ಶೇಷಸ್ತು ಎಂಬುವಲ್ಲಿಯೂ ಪ್ರಮಾಣ ಹೇಳುತ್ತಾರೆ.) ಧ್ಯಾನಿಸುವವನು ವಿರಜಾನದಿಯನ್ನು ಹೊಂದುತ್ತಾನೆ. ಅಲ್ಲಿ ಅನಿಷ್ಟವಾದ ಪುಣ್ಯಶೇಷವನ್ನೂ ಪಾಪಶೇಷವನ್ನೂ ಬಿಡುತ್ತಾನೆ. (೭) (ತಥಾಪಿ ಪ್ರಕೃತೇರ್ಬಂಧ= ಎಂಬುವಲ್ಲಿಯೂ ಪ್ರಮಾಣ ಹೇಳುತ್ತಾರೆ') ಕಾಮ್ಯ ಕರ್ಮಪರಿತ್ಯಾಗ ಪೂರ್ವಕವಾಗಿ (ಸತ್ಕರ್ಮ ಗಳನ್ನು ಮಾಡಿದುದರಿಂದ ಅಂತಃಕರಣ ಶುದ್ಧಿಯನ್ನು ಸಂಪಾದಿಸಿ ವೇದಾಂತ ಶ್ರವಣಾದಿಗಳಿಂದ ಮೋಕ್ಷ ಸಾಧನ ಜ್ಞಾನವನ್ನು ಹೊಂದಿದವರು. ಸತ್ಯಲೋಕವನ್ನು ಅಥವಾ ವಿಷ್ಣುಲೋಕವನ್ನು ಹೊಂದುತ್ತಾರೆ. ಅವರೆಲ್ಲರೂ ಚತುರ್ಮುಖನ ಆಯುಷ್ಯದ ಪರಿಸಮಾಪ್ತಿಕಾಲದಲ್ಲಿ ಅನೃತ ಗಳೆನಿಸಿಕೊಂಡ ಪ್ರಕೃತಿ ಪ್ರಾಕೃತಗಳಿಂದ ಬಿಡುಗಡೆ ಹೊಂದುತ್ತಾರೆ. (೭) (ಪ್ರಕೃತಿ ಪ್ರಾಕೃತಗಳಿಗೆ ಸತ್ಯತ್ವವಿದ್ದ ಪ್ರಯುಕ್ತ ಅನೃತತ್ವವು ಹೇಗೆಂದರೆ) ಮಹತತ್ವಾದಿ ಕಾರ್ಯ, ಪ್ರಧಾನಾದಿ ಕಾರಣಗಳಿಗೆ ಶ್ರುತಿಯಲ್ಲಿ ಅನೃತತ್ವವು ಯಾವುದು ಹೇಳ ಲ್ಪಡುತ್ತದೋ ಅದು ಪರಿಣಾಮವೇ. (ಮಿಥ್ಯಾತ್ವವಲ್ಲ. ಅನೃತಂ ಪರಿಣಾಮತಃ। ಪ್ರಕೃತಿ ಪ್ರಾಕೃತಂ ಪ್ರೋಕ್ತಂ ಎಂದುಕ್ತವಾಗಿದೆ.) (ಏವಂಚ ಜ್ಞಾನಿಗಳ ಮರಣವು ಅಜ್ಞರ ಮರಣಕ್ಕಿಂತ ವಿಲಕ್ಷಣವಾದ ಪ್ರಯುಕ್ತ ಜ್ಞಾನಕ್ಕೆ ಮಾಹಾತ್ಮ್ಯೆಯು ಯುಕ್ತವು) ॥ ೯ ॥

## ೧೦ನೇ ಯೋಗ್ಯಧಿಕರಣವು

ಈ ಅಧಿಕರಣದಲ್ಲಿ ವಿದ್ಯಾಗತಿ ಸ್ಮೃತಿಗಳು ಅಪೇಕ್ಷಿತಗಳೋ, ಅಲ್ಲವೋ, ಎಂದು ಸಂದೇಹವು ಬಂದರೆ ಅಪೇಕ್ಷಿತಗಳಲ್ಲ, ಎಂದು ಪೂರ್ವಪಕ್ಷವು. ಅಪೇಕ್ಷಿತಗಳೇ ಎಂದು ಸಿದ್ಧಾಂತವು. ಅದರಲ್ಲಿ ಲೋಕೋಪಮಾ= (ಲೋಕ ದೃಷ್ಟಾಂತವು) ಎಂಬ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಕೃಷ್ಯಾದಿ ಲೌಕಿಕ ಸಾಧನಸ್ಯ ಫಲಸ್ಮರಣಾನಪೇಕ್ಷತ್ವಾತ್ಸ್ವರ್ಗ ಮೋಕ್ಷ ಯೋರಪಿ ತಥಾತ್ವಮಿತಿ ವಾಚ್ಯಂ ॥ (೨) ಕ್ರಿಯಾನುವೃತ್ತಿರ್ಲೌಕಿಕೇ ಸಾಧನೇತು ಮನೋಽನುವೃತ್ತಿರ್ವೈದಿಕೇ ಸಾಧನೇ ಸ್ಯಾತ್ ॥ ಭವೇತ್ಫಲಂ ಮೇ ಸರ್ವಥೇತ್ಯೇವ

ತಸ್ಮಾತ್ಸ್ಮರೇತ್ಸದಾ ನಿಶ್ಚಿತತ್ವೇನ ವಿದ್ವಾನಿತಿ ಶ್ರುತೇಸ್ತತ್ತದನುಸಾರ್ಯನುವೃತ್ತೇ ಲೌಕಿಕವೈದಿಕಯೋಃ ಸ್ವಾಧನಯೋಸ್ಸಾಮ್ಯಾತ್ ॥ (೩) ಅತೋsತ್ರ ಫಲಾನುಸ್ಮರಣಂ ಲವನಾದಿಕೃಷ್ಯನುವೃತ್ತಿವದ್ದ್ರಷ್ಟವ್ಯಂ ವಚನಪ್ರಾಮಾಣ್ಯಾತ್ ॥ ೧೦ ॥

ಅ ॥ (೧) ಕೃಷ್ಯಾದಿ ಲೌಕಿಕ ಸಾಧನಗಳಿಗೆ ಫಲಸ್ಮರಣದ ಅಪೇಕ್ಷೆಯು ಇಲ್ಲದಿರುವುದರಿಂದ ಸ್ವರ್ಗ ಮೋಕ್ಷಗಳಿಗೂ ಫಲ ಸ್ಮರಣದ ಅಪೇಕ್ಷೆಯು ಇಲ್ಲ. (ಏವಂಚ ಲೋಕ ದೃಷ್ಟಾಂತವು ಕೂಡುವುದರಿಂದ ವಿದ್ಯಾಗತಿ ಸ್ಮೃತಿಗಳ ಅಪೇಕ್ಷೆಯು ಇಲ್ಲ. ಆದಕಾರಣ ಜ್ಞಾನದಿಂದ ಸಂಪೂರ್ಣ ಮೋಕ್ಷವು ಆಗಲಾರದು, ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ—ಶಶ್ವದನುಪ್ರವೃತ್ತಿಃ ಎಂಬ ಸಿದ್ಧಾಂತ ನ್ಯಾಯ ವನ್ನು ವಿವರಿಸುತ್ತಾರೆ.) ಲೌಕಿಕ ಸಾಧನಗಳಲ್ಲಿ ಕ್ರಿಯಾನುವೃತ್ತಿಯು,} (ಮತ್ತೂ ಮತ್ತೂ ಕ್ರಿಯೆಗಳ ಅನುವೃತ್ತಿಯು. ವೈದಿಕ ಸಾಧನಗಳಲ್ಲಿ ಮನಸ್ಸಿನ ಅನುವೃತ್ತಿಯು.) (ಭಗವಂತನಲ್ಲಿ ಮನೋನಿವೇಶವು ಕ್ರಿಯಾ ಮನೋವೃತ್ತಿ ರೂಪವಿಶೇಷಣಗಳನ್ನು ಬಿಟ್ಟು ಸರ್ವಥಾ ಕೇವಲ ಅನುವೃತ್ತಿಯಿಂದಲೇ ಫಲವು ಯಾವ ಕಾರಣದಿಂದ ಆಗುವುದೋ ಆದಕಾರಣ ಜ್ಞಾನಿಯು ನಿಶ್ಚಯವಾಗಿಯೂ ಸ್ಮರಿಸಲೇಬೇಕು, ಎಂಬ ಶ್ರುತಿಯಿಂದ ತತ್ತದನುಸಾರಿಯಾದ ಅನುವೃತ್ತಿಯು ಲೌಕಿಕ ವೈದಿಕಗಳಲ್ಲಿ ಸಮವಾಗಿದೆ. ಆದಕಾರಣ ಇಲ್ಲಿ ಫಲಾನುಸ್ಮರಣವು ಛೇದನಾದಿ, ಕೃಷಿಗಳಲ್ಲಿ ಆವೃತ್ತಿಯಂತೆ ತಿಳಿಯಬೇಕು. (ಅಂದರೆ—ವೃಕ್ಷ ಛೇದ ನಾದಿಗಳಲ್ಲಿ ಕರ್ಷಣಾದಿಗಳ ಆವೃತ್ತಿಯಲ್ಲ. ಮತ್ತೆ ಪರಶುವನ್ನು ಎತ್ತಿಕೊಂಡು ದಾರುವಿಗೆ ಬಲವತ್ತರ ಸಂಯೋಗಾವೃತ್ತಿಯು. ಕೃಷ್ಯಾದಿಗಳಲ್ಲಿ ಇಂತಹುದಲ್ಲ. ಮತ್ತೆ ಕರ್ಷಣಾದ್ಯಾ ವೃತ್ತಿಯೇ. ಇಷ್ಟರಿಂದ ಲೋಕಾನುಸಾರವಲ್ಲವೆಂದನ್ನಕೂಡದು. ಅವಾಂತರ ವಿಶೇಷಗಳು ವಿಲಕ್ಷಣಗಳಾದುದಾಗ್ಯೂ ಅನುವೃತ್ತಿ ಮಾತ್ರವು ಎರಡು ಕಡೆಗಳಲ್ಲಿಯೂ ಸಮವೇ ಆಗಿದೆ. ಹಾಗೆಯೇ ಪ್ರಕೃತದಲ್ಲಿಯೂ ಅನುವೃತ್ತಿ ಮಾತ್ರವು ಲೌಕಿಕ ವೈದಿಕ ಸಾಧನಗಳಲ್ಲಿ ಸಮವಾಗಿದೆ.) (ಗತಿಗೆ ಫಲ ಸ್ಮರಣದ ಅಪೇಕ್ಷೆಯಿದೆ ಎಂಬುವುದು ಯುಕ್ತಿ ವಿರುದ್ಧವು ಎಂದರೆ) ಶ್ರುತಿಯು ಪ್ರಮಾಣವಾದ ಪ್ರಯುಕ್ತ (ಯುಕ್ತಿಯು ಆಭಾಸವು.) (ಏವಂಚ ಶಶ್ವದನು ವೃತ್ತಿಯಿಂದ ಅನುಗಮನಕ್ಕೆ ವಿದ್ಯಾದಿಗಳ ಅಪೇಕ್ಷೆಯಿದ್ದುದರಿಂದ ಜ್ಞಾನದಿಂದ ಸಂಪೂರ್ಣ ಮೋಕ್ಷವು ಲಭಿಸುವುದು) ॥ ೧೦ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾ ಶ್ರೀಮನ್ನ್ಯಾಯವಿವರಣೇ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ
ಶ್ರೀಮನ್ನ್ಯಾಯ ವಿವರಣದಲ್ಲಿ ೪ನೇ ಅಧ್ಯಾಯದಲ್ಲಿ ೨ನೇ ಪಾದವು ಸಮಾಪ್ತವಾಯ್ತು ॥

# ೩ನೇ ಪಾದ

ಈ ಪಾದದಲ್ಲಿ ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರಿಗೆ ಬ್ರಹ್ಮಪ್ರಾಪ್ತಿಗಾಗಿ ಮಾರ್ಗವನ್ನೂ ಆ ಮಾರ್ಗದಿಂದ ಹೋದವರಿಗೆ ಗಮ್ಯವಾದ ವಸ್ತುವನ್ನೂ ನಿರ್ಣಯಿಸುವರು. ಈ ಪಾದದ ಎಲ್ಲಾ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿದುದನ್ನು ಇಲ್ಲಿ ವಿವರಿಸುವರು.

ಸುಕ್ರಮ ವಿಕ್ರಮೌಚ । ಸಾಂತಾನಿಕಪ್ರಾಪ್ತಿರಭೀಷ್ಟತಾಚ, ಸೌಕರ್ಯಮಿತ್ಯನ್ಯಮತಸ್ಯ ತರ್ಕಾಃ ॥ ವಿಶೇಷಸಂಪ್ರಾಪ್ತಿರುರುತ್ವಮಾಪ್ತಿಃ ಕ್ರಮಾನುರಾಗಃ ಕಥಿತಾನ್ಯನುವೃತ್ತಿಃ ಸಿದ್ಧಾಂತ ನಿರ್ಣೀತಿಕರಾಃ ॥

## ಅರ್ಚಿರಧಿಕರಣವು

೧ನೇ ಅಧಿಕರಣದಲ್ಲಿ ತೇಽರ್ಚಿಷಮಭಿಸಂಭವಂತಿ ಯದಾಹ ಪುರುಷೋಽಸ್ಮಾಲ್ಲೋಕಾತ್ಪ್ರೇತಿ ಸ ವಾಯುಮಾಗಚ್ಛತಿ ಎನ್ನುವ ಶ್ರುತಿಗಳಿಂದ ಅರ್ಚಿರ್ಲೋಕವು ಪ್ರಥಮ ಪ್ರಾಪ್ಯವೋ, ವಾಯುಲೋಕವೋ ಎಂದು ಸಂಶಯವು ಬಂದರೆ—ಎರಡು ಲೋಕಗಳೂ ಪ್ರಥಮ ಪ್ರಾಪ್ಯಗಳೆಂದು ಪೂರ್ವಪಕ್ಷವು. ಅರ್ಚಿರ್ಲೋಕವೇ ಪ್ರಥಮ ಪ್ರಾಪ್ಯವೆಂದು ಸಿದ್ಧಾಂತವು. ಅದರಲ್ಲಿ ಸುಕ್ರಮಃ=(ಅನೇಕ ಮಾರ್ಗಗಳು) ಎನ್ನುವ ಪೂರ್ವಪಕ್ಷ ಯುಕ್ತಿಯನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ತತ್ರ ತತ್ರ ಮಾರ್ಗಸ್ಯಾನ್ಯಥೋಕ್ತೇರಧಿಕಾರಿಭೇದೇನ ಪೃಥಕ್ಪೃಥಕ್ ಮಾರ್ಗಃ ಸುಕ್ರಮೋಪಪತ್ತೇರಿತಿ ವಾಚ್ಯಂ ॥ (೨) ಸರ್ವೇ ವಾ ಏತೇ ಉತ್ಕ್ರಾಮಂತಿ ತೇಽರ್ಚಿಷಮೇವಾಭಿಸಂಯಂತಿ ತತೋ ವಾಯುಮತೋಽಹಃ ಪೂರ್ವಪಕ್ಷಮಿತ್ಯೇಷ ಏವ ಬ್ರಹ್ಮಪಥಃ ॥ (೩) ದ್ವೇ ಸೃತೀ ಅಶೃಣವಂ ಪಿತೃಣಾಮಹಂ ದೇವಾನಾಮುತ ಮರ್ತ್ಯಾನಾಂ । ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚೇತಿ ವಿಶೇಷಶ್ರುತಿತೋ ಜ್ಞಾನಿನಾಮೇಕಮಾರ್ಗಸ್ಯೈವ ಪ್ರಾಪ್ತೇಃ ॥ (೪) ಏಷ ಉ ಏವ ಬ್ರಹ್ಮಪಥಃ ಇತ್ಯವಧಾರಣವಿರೋಧಾದನ್ಯಥಾ॥ (೫) ಏಜದಿತಿ ವೈದಿಕಾನುಷ್ಠಾನವತಃ ಉಕ್ತೇರ್ನಾಧೋಗತಿ ವಿರೋಧಃ ॥ (೬) ಪುನರಾವರ್ತಿನೋ ಯೇ ತು ತೇಷಾಂ ಧೂಮಪಥೋ ಧ್ರುವಃ । ಅನ್ಯೇಷಾಮರ್ಚಿರಾದಿಸ್ತು ತದ್ಭೇದೋ ಮಧ್ಯಸಂಸ್ಥಿತಿಃ । ಧೂಮಾರ್ಚಿರಾದಿ ದೇವೇಭ್ಯಃ ಪ್ರಾಪ್ಯಾನುಜ್ಞಾಂ ತು ಮಧ್ಯಗಾಃ । ವಿಸೃತ್ಯ ಸ್ವೇಷ್ಟದೇಶೇಷು ತಪೋರ್ಧ್ವಗಂ ಯಾತಿ ಚಾಧರಂ॥(೭)ಅತ್ಯಲ್ಪಾನಾಮವಿಜ್ಞಾತಾಽಪ್ಯನುಜ್ಞಾವರ್ತಿನಾಂ ಭವೇತ್ । ಪುಂದ್ವಾರೇಣ ಸ್ವದೃಷ್ಟ್ಯಾ ವಾ ಯಥಾಯೋಗ್ಯಂ ವಿಮುಚ್ಯತಾಂ । ಅತೋ ನ ಮಾರ್ಗಭೇದೋಽಸ್ತಿ ನ ಹಿ ಮಾರ್ಗೋಽತ್ರ ಸಂಭವಃ ॥ ಪ್ರೇತತ್ವಂ ಪಾಂಥರೋ ಮಾರ್ಗಃ ಪಾಪಜತ್ವಾದ್ದ್ವಯೋಃ ಪೃಥಕ್॥ ಇತಿ ಸ್ಮೃತೇಶ್ಚ ॥ ೧ ॥ ೨ ॥ ೩ ॥ ೪ ॥

ಅ ॥ (೧) **ತೇಽರ್ಚಿಷಮಭಿಸಂಭವಂತಿ ಸ ವಾಯುಮಾಗಚ್ಛತಿ** ಎನ್ನುವ ೨ ಶ್ರುತಿಗಳಲ್ಲಿ ಅರ್ಚಿರಾದಿ ಮಾರ್ಗವನ್ನೂ, ವಾಯ್ವಾದಿಮಾರ್ಗವನ್ನೂ. ಹೇಳಿದುದರಿಂದ (ಮಾರ್ಗಭೇದದಿಂದ ಎರಡಕ್ಕೂ ಪ್ರಾಥಮಿಕತ್ವವಿದ್ದರೂ) ಅಧಿಕಾರಭೇದದಿಂದ (ವಿರೋಧವಿಲ್ಲದಿರುವ ಪ್ರಯುಕ್ತ) ಅನೇಕ ಮಾರ್ಗರೂಪ ಪುಕ್ತವಾವು ಕೂಡುವ ಕಾರಣ ಪ್ರತ್ಯೇಕ ಪ್ರತ್ಯೇಕ ಮಾರ್ಗವು. (ಹೀಗೆ ಮಾರ್ಗನಿರ್ಣಯವಾಗದಿರುವುದರಿಂದ ಅದರ **ಸ್ಮರಣೆಯು** ಕೂಡಲಾರದು,) ಎಂದು ಹೇಳಕೂಡದು. (೨) (ಏಕೆಂದರೆ **ವಿಶೇಷ ಸಂಪ್ರಾಪ್ತಿಃ** ಎಂದು ಹೇಳಿದ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಜ್ಞಾನಿಗಳೆಲ್ಲರೂ ಶರೀರದಿಂದ ಉತ್ಕ್ರಾಂತರಾಗುತ್ತಾರೆ. ಅವರು ಅರ್ಚಿರ್ಲೋಕವನ್ನೇ ಪ್ರಥಮತಃ ಹೊಂದುತ್ತಾರೆ. ಆಮೇಲೆ ವಾಯುಲೋಕ, ಅನಂತರ ಅಹರ್ಲೋಕ, ಪೂರ್ವಪಕ್ಷಾಭಿಮಾನಿಲೋಕ, ಈ ಕ್ರಮದಿಂದ ಹೊಂದುತ್ತಾರೆ. ಇದುವೇ ಬ್ರಹ್ಮಮಾರ್ಗವು. (ಜ್ಞಾನಿಗಳಿಗೆ ಒಂದೇ ಮಾರ್ಗವು ಅರ್ಚಿರಾದಿಮಾರ್ಗವೇ.) (೩) ಮರಣಶೀಲರಾದ ಮೋಕ್ಷ ಸ್ವರ್ಗಾದಿಗಳನ್ನು ಹೊಂದುವವರಿಗೆ, ದೇವತೆಗಳಿಗೂ ಪಿತೃಗಳಿಗೂ ಸಂಬಂಧಿಗಳಾದ (ಅಂದರೆ ದೇವಯಾನ ಪಿತೃಯಾನಗಳೆನ್ನುವ ಎರಡೇ ಮಾರ್ಗಗಳನ್ನು ಕೇಳಿರುವೆನು. (**ದ್ಯೌರ್ನಃ ಪಿತಾ, ಪೃಥಿವೀ ಮಾತಾ** ಎನ್ನುವ ಶ್ರುತಿಯುದೆಶೆಯಿಂದ) ದ್ಯಾವಾಪೃಥಿವಿಗಳ ಮಧ್ಯದಲ್ಲಿರುವ, ಪ್ರತ್ಯವಾಯದಿಂದ ಹೆದರುವ, ವೇದೋಕ್ತಗಳಾದ ಪ್ರವೃತ್ತಕರ್ಮ, ನಿವೃತ್ತಕರ್ಮಾದಿಗಳ ಸಾಧನಗಳಿಂದ ಸಂಪೂರ್ಣವಾದ, ಈ ಜೀವಸಮುದಾಯವು ಆ ಎರಡು ಮಾರ್ಗಗಳಿಂದ ಪರಬ್ರಹ್ಮನನ್ನೂ ಸ್ವರ್ಗವನ್ನೂ ಹೊಂದುತ್ತದೆ. ಎನ್ನುವ ವಿಶೇಷಶ್ರುತಿಯಿಂದ ಜ್ಞಾನಿಗಳಿಗೆ ಬ್ರಹ್ಮನನ್ನು ಹೊಂದಲಿಕ್ಕೆ ಅರ್ಚಿರಾದಿರೂಪವಾದ ಒಂದೇ ಮಾರ್ಗವೆಂದು ಪ್ರಾಪ್ತವಾಗುತ್ತದೆ. (೪) ಜ್ಞಾನಿಗಳು ಹೊಂದ ತಕ್ಕದು ಬೇರೆ ಮಾರ್ಗಗಳು ಇದ್ದರೆ ಏಷ ಏವ ಬ್ರಹ್ಮಪಥಃ ಎನ್ನುವ ಅವಧಾರಣವು ಕೂಡದೆ ಹೋಗುವುದು. (ಅಂದರೆ—**ತೇಽರ್ಚಿಷಮೇವಾಭಿಸಂಯಂತಿ** ಅರ್ಚಿರ್ಲೋಕವನ್ನೇ ಹೊಂದುತ್ತಾರೆ. ಎಂದು ಅವಧಾರಣವಿದ್ದುದರಿಂದ ತತೋ **ವಾಯುಂ**=ಎಂದು ವಾಯುಲೋಕವು ಎರಡನೇದ್ದಾಗಿ ಹೊಂದತಕ್ಕದು ಎಂದು ಹೇಳಿದುದರಿಂದಲೂ ವಿಶೇಷ ಶ್ರುತಿಯಿಂದು ತಿಳಿಯತಕ್ಕದು.) (೫) (ಸರ್ವರಿಗೂ ಸ್ವರ್ಗವನ್ನು ಹೊಂದಿಸಿಕೊಡತಕ್ಕದು ಧೂಮಲೋಕವು, ಮುಕ್ತಿಯನ್ನು ಹೊಂದಿಸಿಕೊಡತಕ್ಕದು ಅರ್ಚಿರಾದಿ ಲೋಕವು, ಹೀಗೆ ಎರಡು ಮಾರ್ಗಗಳೇ ಪ್ರಾಪ್ತಗಳಾಗುವುದಾದರೆ—ತಮಸ್ಸು ಮೊದಲಾದ ಅಧೋಗತಿಯು ಯಾರಿಗೂ ಇಲ್ಲವೆಂದಾಗುವುದು. ಅಂತಹವರೂ ಇರುತ್ತಾರೆ. ಆದ ಕಾರಣ **ದ್ವೇ ಸೃತೀ** ಎನ್ನುವಲ್ಲಿ ವಿಶ್ವಂ ಎಂದದ್ದು ಹೇಗೆ? ಎಂಬ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಶ್ರುತಿಯಲ್ಲಿ ಏಜತ ಎಂದದ್ದೂ ಎನ್ನುತ್ತಾರೆ.) ಏಜತ್ ಎನ್ನುವುದರಿಂದ ವೇದೋಕ್ತಗಳಾದ ಕರ್ಮಗಳನ್ನು ಅನುಷ್ಠಾನ ಮಾಡುವವರಿಗೇನೇ ಆ ಎರಡು ಮಾರ್ಗಗಳನ್ನು ಹೇಳಿದುದರಿಂದ ತಮಸ್ಸು ಮೊದಲಾದ ಅಧೋಗತಿಯು ಬೇರೆ ಕೆಲವರಿಗೆ ಬರುವುದು ವಿರುದ್ಧವಲ್ಲ.) (೬) (ಪರಬ್ರಹ್ಮನನ್ನು ಹೊಂದಿಸಿ ಕೊಡತಕ್ಕದು ಅರ್ಚಿರಾದಿರೂಪವಾದದ್ದು ಒಂದೇ ಮಾರ್ಗವು ಎನ್ನುವಲ್ಲಿ ಸ್ಪಷ್ಟ ಸ್ಮೃತಿಯನ್ನೂ ಹೇಳುತ್ತಾರೆ.) ಯಾರು ಲೋಕಾಂತರಕ್ಕೆ ಹೋಗಿ ಪುನಃ ತಿರುಗಿ ಬರುತ್ತಾರೋ, ಅಂತಹವರಿಗೆ ನಿಶ್ಚಯವಾಗಿಯೂ ಧೂಮ ಮಾರ್ಗವು ಪುನರಾವೃತ್ತಿಯಿಲ್ಲದಿರುವ ಜ್ಞಾನಿಗಳಿಗೆ ಅರ್ಚಿರಾದಿ ಮಾರ್ಗವು. ಅವುಗಳಿಂದ ಭಿನ್ನವಾದದ್ದು ಮಧ್ಯದಲ್ಲಿರುವಿಕೆಯು. ಮಧ್ಯಸ್ಥರು ಧೂಮಮಾರ್ಗ, ಅರ್ಚಿರಾದಿ ಮಾರ್ಗ, ಗಳಿಗೆ ಅಧಿಪತಿಗಳಾದ ದೇವತೆಗಳಿಂದ ಅನುಜ್ಞೆಯನ್ನು ಹೊಂದಿ ತಂತಮಗೆ ಇಷ್ಟಗಳಾದ ದೇಶಗಳಲ್ಲಿ ಕ್ರೀಡಿಸಿ ಯಥಾ ಯೋಗ್ಯವಾಗಿ ಅದಕ್ಕಿಂತ ಊರ್ಧ್ವಲೋಕವನ್ನು ಅಥವಾ ಕೆಳಲೋಕವನ್ನು ಹೊಂದುತ್ತಾರೆ. (೭) ಹಾಗಾದರೆ—**ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಂ** ಎಂದು ಆತ್ಮತ್ವವನ್ನುಮಾತ್ರ ಉಪಾಸನಾ ಮಾಡುವವರಿಗೂ **ಕೇಚಿದತ್ರೈವ ಮುಚ್ಯಂತೇ** ಎನ್ನುವ ಪ್ರಮಾಣದಿಂದ ಮುಕ್ತಿಯು ಇದೆ. ಇವರಿಗೆ ದೇವತೆಗಳಂತೆ ತಮಗಿಂತ ಉತ್ತಮರಲ್ಲಿ ಪ್ರವೇಶದಿಂದ ದೇಹಲಯವಾಗಿ ಮುಕ್ತಿಯು ಅಲ್ಲ, ಇವರು ಅತ್ಯಲ್ಪರು. **ನೋತ್ಕ್ರಾಮಂತಿ ಕದಾಚನ** ಎನ್ನುವ ಪ್ರಮಾಣದಿಂದ ಇವರಿಗೆ ದೇಹದಿಂದ ಉತ್ಕ್ರಮಣವೂ ಇಲ್ಲ. ಉತ್ಕ್ರ

ಮಣವಿಲ್ಲದವರಿಗೆ ಅರ್ಚಿರಾದಿ ಮಾರ್ಗವೂ ಕೂಡಲಾರದು. **ಉತ್ಕ್ರಾಂತಿಮಾರ್ಗಶ್ಚ ಕ್ವಿಮುಕ್ತಗಮ್ಯಂ** ಎಂಬ ಪ್ರಮಾಣದಿಂದ ಉತ್ಕ್ರಮಣವಿದ್ದವರಿಗೇನೇ ಅರ್ಚಿರಾದಿ ಮಾರ್ಗವು, ಆದಕಾರಣ ಅವರಿಗೆ ಮುಕ್ತಿಗಾಗಿ ಮಾರ್ಗಾಂತರವನ್ನು ಹೇಳಬೇಕು. ಆದಕಾರಣ ಅಪುನರಾವರ್ತಿ ಮಾರ್ಗವು ಒಂದೇ ಎಂಬುವುದು ಹೇಗೆಂದರೆ) (ಆತ್ಮತ್ವಂ=) ಸ್ವಾಮಿತ್ವವನ್ನೇ ಉಪಾಸನಾ ಮಾಡಬೇಕೆನ್ನುವ ಗುರೂಪದೇಶದಿಂದಲಾಗಲೀ **ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ** ಎನ್ನುವ ರೀತಿಯಿಂದಲಾಗಲೀ, ಸ್ವಾಮಿತ್ವವನ್ನು ಮಾತ್ರ ಉಪಾಸನಾ ಮಾಡಬೇಕೆನ್ನುವ ವಿಧಿಬದ್ಧರೂ ತಮ್ಮ ಉಪಾಸನಾನುಸಾರವಾಗಿ ಉತ್ಕ್ರಮಣ ಮಾರ್ಗದಿಂದ ವ್ಯತಿರಿಕ್ತವಾದ ಕರ್ಮಕ್ಷಯ ಭೋಗ ಮಾತ್ರರೂಪವಾದ ಮುಕ್ತಿಯನ್ನು ಹೊಂದುವವರೂ ಆದ ಚತುರ್ಗುಣೋಪಾಸಕರಿಗಿಂತ ಅತ್ಯಲ್ಪರಾದವರಿಗೆ **ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರಃ** ಎನ್ನುವ ರೀತಿಯಿಂದ ಜ್ಞಾತವಾದ ಬ್ರಹ್ಮನಾಡಿಗಿಂತ ವ್ಯತಿರಿಕ್ತವಾದುದಾಗ್ಯೂ ಚಕ್ಷುರ್ಮಾರ್ಗ, ಶ್ರೋತ್ರಾದಿರೂಪವಾದ ಮಾರ್ಗವು ಯಾವ ಕಾರಣದಿಂದ ಇರುವುದೋ, ಆದಕಾರಣ ಅರ್ಚಿರಾದಿ ಮಾರ್ಗದಲ್ಲಿ ಅವಾಂತರ ಭೇದವು ಇಲ್ಲ. (ಅಂದರೆ— **ಕೇಚಿತ್ತು ಮಾನುಷಾ ಮುಕ್ತಿಮುತ್ಕ್ರಮ್ಯೈವ ದೇಹತಃ। ದೇಹಪಾತೇ ತು ದೇಹಸ್ಯ ದೋಷಾನ್ಮುಕ್ತ್ವೈವ ಸರ್ವಶಃ ॥ ಮರಣೋಚ್ಛ್ವಾಸನಾಶಾದೀಂಸ್ತು ಸ್ವಕೀಯಾರಬ್ಧ ಕರ್ಮಜಾನ್ ॥ ದೇಹಕ್ಷೀಣೇ ತು ಗಚ್ಛಂತಿ ದೃಷ್ಟ್ವಾತ್ತ ವಿಷ್ಣುಮನುಜ್ಞಯಾ। ಪುನರತ್ರೈವ ತಿಷ್ಠಂತಿ ನಿತ್ಯಾನಂದೈಕಭೋಗಿನಃ ॥** ಎಂದು ದೇವತೆಗಳಿಂದ ವ್ಯತಿರಿಕ್ತರಾದ ಉತ್ಕ್ರಾಂತ್ಯಾದಿ ಸಂಪೂರ್ಣ ಮೋಕ್ಷವುಳ್ಳವರಿಗೇನೇ ಅರ್ಚಿರಾದಿ ಮಾರ್ಗೈಕ್ಯವು. ಸರ್ವರಿಗೆ ಅಲ್ಲ.) (ದ್ಯುಪರ್ಜನ್ಯಾದಿ ರೂಪವಾದುದು ಜೀವೋತ್ಪತ್ತಿ ಮಾರ್ಗವೂ ಪ್ರೇತತ್ವವೂ ಇದ್ದ ಪ್ರಯುಕ್ತ ಮಾರ್ಗಭೇದವಿಲ್ಲವೆನ್ನುವುದು ಹೇಗೆಂದರೆ) ಇಲ್ಲಿ ಮಾರ್ಗವೆಂದರೆ—ಉತ್ಪತ್ತಿಯಲ್ಲ. ದೇವಯಾನ ಪಿತೃಯಾನಗಳ ದೆಶೆಯಿಂದ ಬೇರೆಯಾದುದು ಪಾಪದಿಂದಲೇ ಹುಟ್ಟಿರುವುದರಿಂದ ಪ್ರೇತತ್ವವೂ ಯಾ ಅಂಧಂತಮಸ್ಸೂ ಮಾರ್ಗವೆನಿಸುತ್ತದೆ, ಎಂದು ಸ್ಮೃತಿಯು. (ಇಲ್ಲಿ ಊರ್ಧ್ವಲೋಕಕ್ಕೆ ಹೋಗತಕ್ಕ ಮಾರ್ಗಗಳೇ ವಿವಕ್ಷಿತಗಳಾಗಿವೆ.) (ಏವಂಚ ಒಂದೇ ಮಾರ್ಗವೆಂದು ನಿರ್ಣಯವಾಗುವುದರಿಂದ ಅನುಸ್ಮೃತಿಯು ಕೂಡುತ್ತದೆ.) ॥ ೧ ॥

## ೨ನೇ ವಾಯುಶಬ್ದಾಧಿಕರಣವು

ಈ ಅಧಿಕರಣದಲ್ಲಿ ೨ನೇದಾಗಿ ವಾಯುಲೋಕವನ್ನೋ ಅಹರ್ಲೋಕವನ್ನೋ ಎಂದು ಸಂದೇಹವು ಬಂದರೆ **ಸ ವಾಯುಮಾಗಚ್ಛತಿ, ಅರ್ಚಿಷೋಽಹಃ** ಎಂದು ಶ್ರುತಿಗಳಲ್ಲಿ ವಾಯುಲೋಕ ಅಹರ್ಲೋಕ ಎರಡಕ್ಕೂ ದ್ವಿತೀಯ ಪ್ರಾಪ್ಯತ್ವವನ್ನು ಹೇಳಿದುದರಿಂದ ಅಧಿಕಾರಿ ಭೇದದಿಂದ ೨ಲೋಕಗಳಿಗೂ ದ್ವಿತೀಯ ಪ್ರಾಪ್ಯತ್ವವು ಎಂದು ಪೂರ್ವಪಕ್ಷವು. ಮಾರ್ಗಭೇದದಿಂದ ೨ಲೋಕಗಳಿಗೆ ದ್ವಿತೀಯ ಪ್ರಾಪ್ಯತ್ವವಿಲ್ಲ. ಒಂದೇ ಮಾರ್ಗವು ಆ ಮಾರ್ಗದಲ್ಲಿಯೂ ಅರ್ಚಿರ್ಲೋಕ ಪ್ರಾಪ್ತ್ಯನಂತರದಲ್ಲಿ ವಾಯುಲೋಕ, ಅನಂತರ ಅಹರ್ಲೋಕ ಪ್ರಾಪ್ತಿ. ಶ್ರುತ್ಯಂತರ ವಿರೋಧವಿಲ್ಲ. ಇಲ್ಲಿಯೂ ಸುಕ್ರಮಃ ಎನ್ನುವುದೇ ಪೂರ್ವಪಕ್ಷ ನ್ಯಾಯವು. ವಿಶೇಷ ಸಂಪ್ರಾಪ್ತಿಃ ಎನ್ನುವುದೇ ಸಿದ್ಧಾಂತನ್ಯಾಯವು. ॥ ೨ ॥

## ತಟಿದಧಿಕರಣವು

ಈ ಅಧಿಕರಣದಲ್ಲಿ ಸಂವತ್ಸರಲೋಕ ಪ್ರಾಪ್ತ್ಯನಂತರದಲ್ಲಿ ವರುಣ ಲೋಕವನ್ನೋ ತಟಿಲ್ಲೋಕವನ್ನೋ, ಎಂದು ಸಂಶಯವು ಬಂದರೆ **ಸಂವತ್ಸರಾದ್ವರುಣಲೋಕಂ ಸಂವತ್ಸರಾತ್ತಟಿತಂ** ಎನ್ನುವ ೨ ಶ್ರುತಿಗಳಲ್ಲಿ ವರುಣಲೋಕಕ್ಕೂ ತಟಿಲ್ಲೋಕಕ್ಕೂ ಪ್ರಾಪ್ಯತ್ವವನ್ನು ಹೇಳಿದುದರಿಂದ ಸಂವತ್ಸರ ಲೋಕದಿಂದ ಪ್ರಜಾಪತಿ ಲೋಕಕ್ಕೆ ಹೋಗಲಿಕ್ಕೆ ಅಧಿಕಾರಿಭೇದದಿಂದ ಮಾರ್ಗಭೇದವು ಕೂಡುವುದೆಂದು. ಪೂರ್ವಪಕ್ಷವು.

ಸಂವತ್ಸರ ಲೋಕಪ್ರಾಪ್ತ್ಯನಂತರದಲ್ಲಿ ಶಟಲ್ಲೋಕವನ್ನೇ ಹೊಂದುವುದು ಆ ಮೇಲೆ ವರುಣಲೋಕವನ್ನು ಹೊಂದುವುದೆಂದು ಸಿದ್ಧಾಂತವು. ಇಲ್ಲಿಯೂ ಸೂತ್ರವು ವಿಶೇಷಸಂಪ್ರಾಪ್ತಿಗಳೇ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳು) || ೩ ||

## ಆತಿವಾಹಿಕಾಧಿಕರಣವು

ಈ ಅಧಿಕರಣದಲ್ಲಿ ಅರ್ಚಿರ್ಲೋಕಪ್ರಾಪ್ತ್ಯನಂತರದಲ್ಲಿ ಪ್ರಾಪ್ಯನಾದ ವಾಯುವು ಅತಿವಾಹಿಕನೋ ಮುಖ್ಯನೋ ಎಂದು ಸಂಶಯವು ಬಂದರೆ ಮುಖ್ಯನೆಂದು ಪೂರ್ವಪಕ್ಷವು. ಆತಿವಾಹಿಕನೆಂದು ಸಿದ್ಧಾಂತವು. ಸ ವಾಯುಮಾಗಚ್ಛತಿ ಉತ್ಕ್ರಾಂತೋ ವಿದ್ವಾನ್ ಎನ್ನುವ ಶ್ರುತಿಗಳಲ್ಲಿ ಮಾರ್ಗಭೂತನಾದ ವಾಯುವಿಗೆ ಅರ್ಚಿರ್ಲೋಕಪ್ರಾಪ್ತ್ಯನಂತರದಲ್ಲಿಯೂ, ವಿದ್ಯುಲ್ಲೋಕ ಪ್ರಾಪ್ತ್ಯನಂತರದಲ್ಲಿಯೂ ಪ್ರಾಪ್ಯತ್ವವನ್ನು ಹೇಳಿದಕಾರಣ ಪ್ರಥಮದಲ್ಲಿಯೇ ಮುಖ್ಯವಾಯುವನ್ನು ತೆಗೆದುಕೊಂಡರೆ ಸೂತ್ರವು ಕೂಡುತ್ತದೆಂದರೆ ಅಂತಿಮನಾದ ವಾಯುವಿಗೆ ದಿವಸ್ಪತಿತ್ವವನ್ನು ಪ್ರತಿಪಾದಿಸುವ ಉತ್ಕ್ರಾಂತೋ ವಿದ್ವಾನ್ ಎನ್ನುವ ವಿಶೇಷಶ್ರುತಿಯಿಂದ ಜ್ಞಾನಿಗಳಿಗೆ ಮುಖ್ಯವಾಯುರೂಪವಾದ ಒಂದೇಮಾರ್ಗವು ಅಂತ್ಯದಲ್ಲಿ ಪ್ರಾಪ್ತವಾಗುವುದು. ಅಮುಖ್ಯನಾದ ಅತಿವಾಹಿಕನಲ್ಲ. ಆದಕಾರಣ ದ್ವಿತೀಯ ಪ್ರಾಪ್ಯತ್ವವು ಅತಿವಾಹಿಕನಿಗೇನೇ। ಅಂತೂ ಇಲ್ಲಿಯೂ ಸೂತ್ರವು ವಿಶೇಷಸಂಪ್ರಾಪ್ತಿಗಳೇ ಪೂರ್ವಪಕ್ಷ ಸಿದ್ಧಾಂತನ್ಯಾಯಗಳು. || ೪ ||

## ವೈದ್ಯುತಾಧಿಕರಣ

ಈ ಅಧಿಕರಣದಲ್ಲಿ ಮುಖ್ಯವಾಯುವಿನ ಮೇಲೆ ಇನ್ನೊಬ್ಬನು ಹೊಂದಲ್ಪಡತಕ್ಕವನು ಇದ್ದಾನೋ ಇಲ್ಲವೋ, ಎಂದು ಸಂಶಯವು ಬಂದರೆ, ಇದ್ದಾನೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ ವಿಕ್ರಮಃ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಸೋಮಾದಗ್ನಿಮಗ್ನೇರಿಂದ್ರಮಿತಿ ಸೋಮಾದಗ್ನೇರೇವಮಸ್ಯಾಪಿ ಪ್ರಾಪ್ತೇಃ ಪ್ರಧಾನವಾಯೋರಪ್ಯವರೋಽನ್ಯಃ ಪ್ರಾಪ್ಯೋಽಸ್ತೀತಿ ವಾಚ್ಯಂ || (೨) ಉತ್ತಮತ್ವಾತ್ತಸ್ಯೈವ ಬ್ರಹ್ಮಪ್ರಾಪಯಿತೃತ್ವಶಕ್ತೇಃ || (೩) ವಾಯುರೇವ ಬ್ರಹ್ಮ ಗಮಯತಿ ತಸ್ಯ ಹ್ಯೇಷಾ ಶಕ್ತಿಃ || ನ ಹ್ಯನ್ಯೋ ಬ್ರಹ್ಮ ಗಮಯತಿ ಪ್ರಿಯೋ ಹ್ಯೇನದ್ಗಮಯತಿ । ನ ಹ್ಯನ್ಯಃ ಪ್ರಿಯೋ ಬ್ರಹ್ಮಣಃ ಇತಿ ಶ್ರುತೇಃ || (೪) ಮಾರ್ಗೇತ್ವವರಸ್ಯಾಪಿ ಯಥಾಮಾರ್ಗಂ ಪಶ್ಚಾತ್ಪ್ರಾಪ್ತಿರ್ಭವತಿ ಲೋಕವತ್। ನ ಹಿ ರಾಜಾನಂ ಯಃಕಶ್ಚಿತ್ಪ್ರಾಪಯತಿ ಕೃಲ್ಪ್ತಮತಿಪ್ರಿಯಂ ಚಾತಿಹಾಯ || ೫ ||

ಅ || (೧) ಸೋಮನದೆಸೆಯಿಂದ ಅಗ್ನಿಯನ್ನೂ, ಅಗ್ನಿಯಿಂದ ಇಂದ್ರನನ್ನೂ ಎಂದು ಸೋಮನ ದೆಶೆಯಿಂದ ಅವರನಾದ ಅಗ್ನಿಗೆ ಸೋಮಾನಂತರದಲ್ಲಿ ಪ್ರಾಪ್ಯತ್ವವಿದ್ದಂತೆಯೇ ಮುಖ್ಯವಾಯುವಿನದೆಶೆಯಿಂದ ಮುಖ್ಯವಾಯುವಿನ ಅನಂತರದಲ್ಲಿಯೂ ಅವರನಿಗೂ ಪ್ರಾಪ್ತಿಯು ಕೂಡುವುದರಿಂದ, ಪ್ರಧಾನವಾಯುವಿಗಿಂತಲೂ ಅವರನಾದ ಇನ್ನೊಬ್ಬನು ವಾಯುವಿನ ಅನಂತರದಲ್ಲಿ ಪ್ರಾಪ್ಯನಾಗಲಿ, (ಅಂದರೆ—ಮುಖ್ಯವಾಯುವಿಗ್ಗೆ ಅತಿಶಯೇನ ಪ್ರಾಧಾನ್ಯವಿಲ್ಲ) ಎಂದರೆ ಹಾಗೆ ಹೇಳಕೂಡದು. (೨) ಮುಖ್ಯಪ್ರಾಣನಿಗೇನೇ ಉತ್ತಮತ್ವವಿದ್ದುದರಿಂದ ಆತನಿಗೇನೇ ಪರಬ್ರಹ್ಮನನ್ನು ಹೊಂದಿಸಿಕೊಡತಕ್ಕ ಶಕ್ತಿಯಿರುವುದು. (೩) ವಾಯುವೇ ಬ್ರಹ್ಮವನ್ನು ಹೊಂದಿಸಿಕೊಡುತ್ತಾನೆ. ಆತನಿಗೇನೇ ಇಂತಹ ಶಕ್ತಿಯು. ಪ್ರಿಯನಾದವನಷ್ಟೆ ಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ. ಆದಕಾರಣ ಇನ್ನೊಬ್ಬನು ಬ್ರಹ್ಮನನ್ನು ಹೊಂದಿಸಿಕೊಡುವುದಿಲ್ಲ. ಮುಖ್ಯಪ್ರಾಣ

ನಿಗಿಂತ ಭಿನ್ನನಾದವನು ಬ್ರಹ್ಮನಿಗೆ ಪ್ರಿಯನಾದವನಲ್ಲ, ಎನ್ನುವ ಶ್ರುತಿಯಿಂದ. (೪) ಲೋಕದಲ್ಲಿ ಮಾರ್ಗವಿದ್ದಂತೆ ಹೋಗುವುದು ಹೊರತು ಉತ್ತಮಾಧಮಕ್ರಮದಿಂದ ಹೋಗುವುದು ಎಂತ ಇಲ್ಲ. ಹೀಗೆ ಲೋಕದೃಷ್ಟವಾಗಿದೆ. (೫) ಕ್ಲೃಪ್ತನೂ=(ಪ್ರಮಾಣಪ್ರಮಿತನೂ,) ಅತಿಪ್ರಿಯನೂ ಆದವನನ್ನು ಬಿಟ್ಟು ಯಾವನಾದರೊಬ್ಬನು ರಾಜನನ್ನು ಹೊಂದಿಸಿಕೊಡುವುದಿಲ್ಲವಷ್ಟೆ. (ಆದಕಾರಣ/ ಮುಖ್ಯಪ್ರಾಣನೇ ಪರ ಬ್ರಹ್ಮನಿಗೆ ಅತಿಪ್ರಿಯನು. ಪರಬ್ರಹ್ಮನನ್ನು ಹೊಂದಿಸಿಕೊಡುವವನು' ಎಂದು ಪ್ರಮಿತವಾಗಿದೆ ) || ೫ ||

೭ನೇ ಕಾರ್ಯಾಧಿಕರಣದಲ್ಲಿ ಸ ಏನಾನ್ ಬ್ರಹ್ಮ ಗಮಯತಿ ಎಂಬ ಶ್ರುತ್ಯುಕ್ತವಾದ ಬ್ರಹ್ಮ ಶಬ್ದದಿಂದ (1)ಪರಬ್ರಹ್ಮನೋ (2) ಚತುರ್ಮುಖನೋ, (3) ಅಥವಾ ಇಬ್ಬರೂ ವಿವಕ್ಷಿತರೋ ಎನ್ನುವಲ್ಲಿಯೂ ಒಬ್ಬನು ಇಬ್ಬರನ್ನು ಹೊಂದುತ್ತಾನೆಂಬುದು ಮೇಲೆ ಹೇಳುವ ಪ್ರಕಾರ ಕೂಡುವುದರಿಂದ ಕದಾಚಿತ್ ಪರಬ್ರಹ್ಮಪ್ರಾಪ್ತಿಯು, ಕದಾಚಿತ್ ಕಾರ್ಯಬ್ರಹ್ಮ ಪ್ರಾಪ್ತಿಯು, ಎಂದರ್ಥವಾಗುವುದು. ಅದರಲ್ಲಿ ಯಾವುದಾದರೊಂದು ಕ್ರಮದಿಂದ ಇಬ್ಬರನ್ನು ಹೊಂದುವುದೋ ಅಥವಾಕ್ರಮವಿಲ್ಲದೇನೇ ಸ್ವೇಚ್ಛಾನುಸಾರವಾಗಿಯೇ ಹೊಂದುವುದೋ ಕ್ರಮದಿಂದ ಹೊಂದುವುದೆಂಬ ಪಕ್ಷದಲ್ಲಿಯೂ ಯೋಗ್ಯತಾರೂಪವಾದುದು ಯಾವುದಾದರೊಂದು ಕ್ರಮವೋ ಬೇರೆ ಕ್ರಮವೋಎಂದುಸಂಶಯವುಬಂದರೆಕಾರ್ಯಬ್ರಹ್ಮನನ್ನೇಹೊಂದುವುದು, ಪರಬ್ರಹ್ಮನನ್ನೇ ಹೊಂದುವುದುಎಂಬಕ್ರಮ ಬಿಟ್ಟು ತನ್ನ ಇಚ್ಛಾನುಸಾರವಾಗಿ ಇಬ್ಬರ ಪ್ರಾಪ್ತಿಯೂ ಆಗುವುದು. ಕ್ರಮದಿಂದ ಹೊಂದುವುದೆಂಬ ಪಕ್ಷದಲ್ಲಿಯೂ ಯೋಗ್ಯತೆಯಿಂದ ಅತಿರಿಕ್ತವಾದುದೇ ಕ್ರಮವು, ಎಂದು ಪೂರ್ವಪಕ್ಷವು. ಎರಡೂ ಶ್ರುತ್ಯುಕ್ತವಾಗಿದೆ. ಯಾವುದಾದರೊಂದು ಕ್ರಮದಿಂದಲೇ ಇಬ್ಬರನ್ನು ಹೊಂದುವುದು. ಅದರಲ್ಲಿಯೂ ಯೋಗ್ಯತಾರೂಪವಾದುದೇ ಕ್ರಮವು ಎಂದು ಸಿದ್ಧಾಂತವು. ಅದರಲ್ಲಿ ಕಾರ್ಯಬ್ರಹ್ಮನನ್ನೇ ಹೊಂದುವುದೆಂಬ ಪ್ರಥಮ ಪಕ್ಷದಲ್ಲಿ ಸಾಂತಾನಿಕ ಪ್ರಾಪ್ತಿಃ=(ಸಂತತತ್ವ ನಿಯಮವು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ || (೧) ನ ಚ ಚತುರ್ಮುಖಸ್ಯ ಮುಕ್ತಿಪರ್ಯಂತಂ ಸಂತತತ್ವನಿಯಮಾದ್ಬಂಧಸ್ಯ ತಾವದ್ಭಗವತ್ಪ್ರಾಪ್ತಿರ್ನಾಸ್ತೀತಿ ನಿಯಮಃ || (೨) ಯಾಂತಿ ದೇವಂ ಪರಂ ಕೇಚಿತ್ಪೂರ್ವಂ ಕೇಚಿಲ್ಲಯೇ ವಿಭುಂ | ಯೋಗ್ಯತಾತಾರತಮ್ಯೇನ ವಿಶೇಷೋಽಯಮಪೇಕ್ಷ್ಯತೇ || ಇತಿ ಶ್ರುತೇಸ್ತಥಾ ಪ್ರಾಪ್ತತ್ವಾತ್ || (೩) ನ ಚ ಪರಬ್ರಹ್ಮಣ ಏವ ಬ್ರಹ್ಮಶಬ್ದಮುಖ್ಯಾರ್ಥತ್ವೇನ ಪ್ರಥಮ ಪ್ರಾಪ್ತತ್ವಾದಪೋಹಾಯುಕ್ತೇಸ್ತಸ್ಯೈವ ಪ್ರಾಪ್ತಿ ನಿಯಮಃ || ಯಾಂತಿ ದೇವಂ ಪರಂ ಕೇಚಿದಿತಿ ಪ್ರಮಾಣಪ್ರಾಪ್ತತ್ವಾದೇವ || (೪) ನ ಚ ಪರಪ್ರಾಪ್ತಿರ್ಯಸ್ಯಾಭೀಷ್ಟಾ ತಸ್ಯ ತತ್ಪ್ರಾಪ್ತಿರಿತಿ ನಿಯಮಃ||(೫)ಕ್ರಮಾನುರಾಗೀ ಭಗವಾನ್ ಕ್ರಮಾತ್ಸಂಭಿರವಾಪ್ಯತೇ | ಅತಃ ಕ್ರಮಾತ್ಸಮೃದ್ಧೇಷು ಜ್ಞಾನೇ ಬ್ರಹ್ಮಲಯೇ ನರೈಃ || ಪ್ರಾಪ್ಯತೇ ನಿಯಮೇನೈವ ಕೈಶ್ಚಿದೇವಾಪ್ಯತೇ ಮೃತಾವಿತಿ ಭಗವತಃ ಕ್ರಮಾನುರಾಗಿತ್ವಶ್ರುತೇಃ ||(೬) ನ ಚ ಬಹುಧಾ ಶ್ರುತೇರ್ಯಥಾಸೌಕರ್ಯಂ ಚತುರ್ಮುಖಸ್ಯ ಪರಸ್ಯ ವಾ ಪ್ರಾಪ್ತಿರಿತಿ ವಾಚ್ಯಂ || (೭) ಶ್ರುತ್ಯುಕ್ತಾನುವೃತ್ತೇರೇವ ನ್ಯಾಯ್ಯತ್ವಾತ್ || (೮) ಸ ಪ್ರತೀಕಾಶ್ಚತುರ್ಮುಖಮಪ್ರತೀಕಾಃ ಪರಮಮುಹ್ಯತೇ ಗಚ್ಛಂತ್ಯಾಗಂಚ್ಛಂತಿ ಚ ಚತುರ್ಮುಖಾತ್ಪರಮಂ ಪರಮಾಚ್ಚತುರ್ಮುಖಂ ಯಾವದ್ಬ್ರಿಲಯಮಥ ಸಹ ಚತುರ್ಮುಖೇನ ವಿಮುಚ್ಯಂತೇ ಆನಂದಿನೋಭವಂತೀತಿ ಹಿ ಶ್ರುತಿಃ ||(೯) ಅಂತರ್ಭೇದಾಧಿಕರಣತ್ವಾತ್ಸಮುದಾಯೋಕ್ತಿಃ || ೫-೬ ||

**ಅ ||** (೧) ಚತುರ್ಮುಖನಿಗೆ ಮುಕ್ತಿಯಾಗುವ ತನಕ (**ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೆ,** ಎಂಬ ಪ್ರಮಾಣದಿಂದ) ಸಂಸಾರ ಬಂಧವು ಯಾವಾಗಲೂ ಇರತಕ್ಕುದಾದುದರಿಂದ ಅಷ್ಟರ ವರೇಗೆ ಪರಬ್ರಹ್ಮನ ಪ್ರಾಪ್ತಿಯಾಗುವುದಿಲ್ಲ. (ಮತ್ತೆ ಚತುರ್ಮುಖ ಬ್ರಹ್ಮನ ಪ್ರಾಪ್ತಿಯೇ) ಎಂದರೆ ಹಾಗೆ ನಿಯಮವಿಲ್ಲ. ಏಕೆಂದರೆ (೨) ಆಪ್ತಿಃ=(ಪ್ರಾಪ್ತಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಅಪ್ರತೀಕಾಲಂಬನರು (ವ್ಯಾಪ್ತ್ಯೋಪಾಸಕರು) ಪರಬ್ರಹ್ಮನನ್ನು ಹೊಂದುತ್ತಾರೆ. ಪ್ರತೀಕಾಲಂಬನರು ಪ್ರಲಯಕ್ಕಿಂತ ಮೊದಲು ಚತುರ್ಮುಖನನ್ನು ಹೊಂದುತ್ತಾರೆ. ಹೀಗೆ ಇಬ್ಬರನ್ನು ಹೊಂದುತ್ತಾರೆಂಬ ವಿಶೇಷವು ಯೋಗ್ಯತಾತಾರತಮ್ಯರೂಪವಾದ ಕ್ರಮದಿಂದಲೇ ನಿಯಮಿಸಲ್ಪಡುತ್ತದೆ. (ತನ್ನ ಇಚ್ಛಾನುಸಾರವಲ್ಲ.) ಎಂಬ ಶ್ರುತಿಯಿಂದ ಹಾಗೆ ಪ್ರಾಪ್ತವಾಗಿದೆ. (೩) (ಪರಬ್ರಹ್ಮನನ್ನೇ ಹೊಂದುವುದೆಂಬ ಪೂರ್ವಪಕ್ಷದಲ್ಲಿ ಪ್ರಾಪ್ತಿಃ=(ಪ್ರಾಪ್ತಿಯು)ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.) ಪರಬ್ರಹ್ಮನೇ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥನಾಗಿರುವುದರಿಂದ (ಮುಖ್ಯಾಮುಖ್ಯಯೋರ್ಮುಖ್ಯ ಏವ **ಸಂಪ್ರತ್ಯಯಃ** ಎನ್ನುವ ನ್ಯಾಯದಿಂದ) ಆತನೇ ಪ್ರಥಮತಃ ಪ್ರಾಪ್ತನು, ಆದಕಾರಣ ಬಾಧಕವಿಲ್ಲದಿರುವುದರಿಂದ ಆತನನ್ನೇ ಹೊಂದುವುದೆಂಬ ನಿಯಮವು. ಎಂದರೆ ಹಾಗೆ ಹೇಳಕೂಡದು. (೪) (ಏಕೆಂದರೆ—) (ಆಪ್ತಿಃ ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) **ಯಾಂತಿ ದೇವಂ ಪರಂ ಕೇಚಿತ್** ಎನ್ನುವ ಪ್ರಮಾಣ ಪ್ರಾಪ್ತವಾದ ಪ್ರಯುಕ್ತವೇ ಯೋಗ್ಯತಾ ತಾರತಮ್ಯಾನುಸಾರವಾಗಿ ಕಾರ್ಯಬ್ರಹ್ಮ ಪರಬ್ರಹ್ಮ ಇಬ್ಬರ ಪ್ರಾಪ್ತಿಯೂ ಆಗುತ್ತದೆ. (೫) (ಕ್ರಮವಿಲ್ಲದೆ ಸ್ವೇಚ್ಛಾನುಸಾರವಾಗಿಯೇ ಚತುರ್ಮುಖ ಪರಬ್ರಹ್ಮ ಇಬ್ಬರ ಪ್ರಾಪ್ತಿಯಾಗುತ್ತದೆ ಎನ್ನುವ ಮೂರನೇಪಕ್ಷದಲ್ಲಿ ಅಭೀಪ್ಸತಾ=(ಇಷ್ಟತನವು)ಎನ್ನುವ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ) ಯಾರಿಗೆ ಪರಬ್ರಹ್ಮ ಪ್ರಾಪ್ತಿಯು ಇಷ್ಟವೋ ಆತನು ಪರಬ್ರಹ್ಮನನ್ನು ಹೊಂದುತ್ತಾನೆ. (ಯಾರಿಗೆ ಚತುರ್ಮುಖ ಬ್ರಹ್ಮಪ್ರಾಪ್ತಿಯು ಇಷ್ಟವೋ ಆತನು ಚತುರ್ಮುಖನನ್ನು ಹೊಂದುತ್ತಾನೆ. (ಉಭಯತ್ರಾಪಿ ಸಾಧಕವಾದ ಬ್ರಹ್ಮಶಬ್ದವಿದೆ. **ಯತ್ಪ್ರಾಪ್ತುಮಭಿವಾಂಛಂತಿ** ಇತ್ಯಾದಿ ಪ್ರಮಾಣವೂ ಇದೆ. ಸೌಕರ್ಯಾತಿರಿಕ್ತ ಕ್ರಮವು ತೋರಿಬರುವುದಿಲ್ಲ. ಆದಕಾರಣ ಇಚ್ಛಾನುಸಾರ ಪ್ರಾಪ್ತಿ ಎಂತನಿಯಮವೆಂತ ಇಟ್ಟುಕೊಳ್ಳಕೂಡದು. (೬) (ಏಕೆಂದರೆ–ಕ್ರಮಾನುರಾಗಃ ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಯೋಗ್ಯತಾ ರೂಪಕ್ರಮದಲ್ಲಿಯೇ ಪ್ರೀತಿಯುಳ್ಳ ಭಗವಂತನು ಯೋಗ್ಯತಾತಾರತಮ್ಯ ರೂಪಕ್ರಮದಿಂದಲೇ ಜ್ಞಾನಿಗಳಿಂದ ಹೊಂದಲ್ಪಡುತ್ತಾನೆ. ಆದಕಾರಣ ಕ್ರಮದಿಂದ ಜ್ಞಾನವು ಅಭಿವೃದ್ಧವಾಗೋಣ ಪ್ರತೀಕಾಲಂಬನರಿಂದ ಚತುರ್ಮುಖ ಬ್ರಹ್ಮಲಯದಲ್ಲಿ ಚತುರ್ಮುಖ ಬ್ರಹ್ಮಪ್ರಾಪ್ತಿಪೂರ್ವಕವಾಗಿ ಭಗವಂತನು ಹೊಂದಲ್ಪಡುತ್ತಾನೆ. ಅಪ್ರತೀಕಾಲಂಬನರಿಂದಲೇ ಲಯಗಿಂತ ಮೊದಲು ನಿಯಮದಿಂದಲೇ ಸಾಕ್ಷಾತ್ತಾಗಿ ಭಗವಂತನು ಹೊಂದಲ್ಪಡುತ್ತಾನೆ, ಎಂದು ಭಗವಂತನಿಗೆ ಕ್ರಮದಲ್ಲಿಯೇ ಪ್ರೀತಿಯಿದೆ ಎಂದು ಶ್ರುತವಾಗಿದೆ. (೭) (ಕ್ರಮಪಕ್ಷದಲ್ಲಿಯೂ ಯೋಗ್ಯತೆಯಿಂದ ಅತಿರಿಕ್ತವಾದ ಸೌಕರ್ಯರೂಪವಾದ ಕ್ರಮವೇ ಎನ್ನುವ ಪೂರ್ವಪಕ್ಷದಲ್ಲಿ ಸೌಕರ್ಯಂ=ಎನ್ನುವಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾರೆ.)ಅನೇಕ ಪ್ರಕಾರ ಶ್ರುತಿಯಿದ್ದುದರಿಂದ (ಎರಡುಕಲ್ಪಗಳೂ ಪ್ರಾಮಾಣಿಕಗಳಾದುದರಿಂದ ಬಿಡಲಶಕ್ಯಗಳಾಗಿರುವುದರಿಂದ) ಅವರವರ ಸೌಕರ್ಯಾನುಸಾರವಾಗಿ ಚತುರ್ಮುಖನ ಪ್ರಾಪ್ತಿಯು ಅಥವಾ ಪರಬ್ರಹ್ಮಪ್ರಾಪ್ತಿಯು ಆಗುವುದು. (ಮಹಾಫಲದಲ್ಲಿ ಕ್ರಮವಿಲ್ಲವೆನ್ನುವುದು ಕೂಡಲಾರದು. ಸೌಕರ್ಯ ವ್ಯತಿರಿಕ್ತವಾದ ಕ್ರಮವೂ ಕಾಣುವುದಿಲ್ಲ.) ಎಂದರೆ ಹಾಗೆ ಹೇಳಕೂಡದು. (೮) (ಏಕೆಂದರೆ **ಕಥಿತಾನುವೃತ್ತಿಃ** ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಶ್ರುತಿಯಲ್ಲಿ ಹೇಳಿದುದನ್ನು ಅನುಸರಿಸುವುದೇ ನ್ಯಾಯವು. (೯) ಪ್ರತೀಕಾಲಂಬನರು ಚತುರ್ಮುಖನನ್ನು, ಅಪ್ರತೀಕಾಲಂಬನರು ಪರಬ್ರಹ್ಮನನ್ನು ಹೊಂದುತ್ತಾರೆ. ಇವರು ಹೋಗುತ್ತಾರೆ. ಬರುತ್ತಾರೆ. ಅಂದರೆ ಪ್ರಲಯ ಪರ್ಯಂತ ಪರಬ್ರಹ್ಮನಿಂದ ಚತುರ್ಮುಖ

ನನ್ನು ಚತುರ್ಮುಖನಿಂದ ಪರಬ್ರಹ್ಮನನ್ನು ಹೊಂದುತ್ತಾರೆ. ಚತುರ್ಮುಖನೊಂದಿಗೆ ಮುಕ್ತರಾಗುತ್ತಾರೆ. ಆನಂದಪೂರ್ಣರಾಗುತ್ತಾರೆ, ಎಂದು ಶ್ರುತಿಯು. (೧೦) (ಕಾರ್ಯಂ ಬಾದರಿಃ ಇದು ಮೊದಲಾದ ೧೦ ಸೂತ್ರಗಳು ಒಂದೇ 'ಅಧಿಕರಣವೆಂದಾದರೆ ಸಾಂತಾನಿಕಪ್ರಾಪ್ತಿಃ ಇತ್ಯಾದಿ ಪೂರ್ವಪಕ್ಷ, ಸಿದ್ಧಾಂತನ್ಯಾಯಗಳ ಬಾಹುಳ್ಯವು ಹೇಗೆಂದರೆ) ಅಧಿಕರಣದಲ್ಲಿ ಅಂತರ್ಭೇದವಿದ್ದ ಪ್ರಯುಕ್ತ ಸಮುದಾಯವನ್ನು ಹೇಳಿದ್ದು. (ಅಂದರೆ-10 ಸೂತ್ರಗಳು ಒಂದೇ ಅಧಿಕರಣವಾದುದಾಗ್ಯೂ ಭಿನ್ನಭಿನ್ನಾರ್ಥ ಪ್ರತಿಪಾದನ ಪೂರ್ವಕವಾಗಿ ಗಮ್ಯರೂಪವಾದ ಏಕಾರ್ಥವನ್ನು ಪ್ರತಿಪಾದಿಸುವುದರಿಂದ ಅಧಿಕರಣದಲ್ಲಿ ಅಂತರ್ಭೇದವಿದ್ದ ಪ್ರಯುಕ್ತ ಸಾಂತಾನಿಕ ಪ್ರಾಪ್ತಿಃ ಇದು ಮೊದಲಾದ ಪೂರ್ವಪಕ್ಷ ಸಿದ್ಧಾಂತನ್ಯಾಯ ಸಮುದಾಯವು ಅವಾಂತರ ಪ್ರತಿಪಾದ್ಯವೆಂದು ಹೇಳಿದ್ದು (ಅಂದರೆ' ಕಾರ್ಯಂ ಬಾದರಿಃ ಇದು ,ಮೊದಲಾದ 10 ಸೂತ್ರಗಳು ಒಂದೇ ಅಧಿಕರಣವಾದಾಗ್ಯೂ ಅವಾಂತರತಃ ಬೇರೆ ಬೇರೆ ಅರ್ಥಗಳನ್ನು ಪ್ರತಿಪಾದಿಸುತ್ತಾ ಗಮ್ಯಪರಬ್ರಹ್ಮರೂಪ ಒಂದೇ ಅರ್ಥವನ್ನು ಪ್ರತಿಪಾದಿಸುವುದು. ಆದಕಾರಣ ಅಧಿಕರಣದಲ್ಲಿ ಅಂತಃರ್ಭೇದವಿದ್ದಪ್ರಯುಕ್ತ ಸಾಂತಾನಿಕಂ ಇದು ಮೊದಲಾದ ಪೂರ್ವಪಕ್ಷನ್ಯಾಯ, ಸಿದ್ಧಾಂತನ್ಯಾಯ ಸಮುದಾಯವು ,ಅವಾಂತರ ಪ್ರತಿಪಾದ್ಯವೆಂಬ ಅಭಿಪ್ರಾಯದಿಂದ ಹಾಗೆ ಹೇಳಿದ್ದು.) ॥ ೫ ॥ ೬ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾ ಶ್ರೀಮನ್ನ್ಯಾಯವಿವರಣೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ ॥ ೪ ॥ ೩ ॥

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು 'ವಿರಚಿಸಿದ ಶ್ರೀಮನ್ನ್ಯಾಯ ವಿವರಣದಲ್ಲಿ ೪ನೇ ಅಧ್ಯಾಯದಲ್ಲಿ ೩ನೇ ಪಾದವು ಸಮಾಪ್ತವಾಯ್ತು ॥

# ನಾಲ್ಕನೇ ಪಾದವು

ಭೋಗವನ್ನು ಪ್ರತಿಪಾದಿಸುವ ಈ ೪ನೇ ಪಾದದ ಅಧಿಕರಣ ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನಲ್ಲಿ ಸಂಗ್ರಹಿಸಿ ಹೇಳಿರುವರು.

**ಅತಿಕ್ರಮೋಕ್ತಿಃ ಕೃತಿರರ್ಥಲಾಭಃ ಪರಾಗತಿಃ ಪಾರಗತಿಸ್ತದೋಕಃ। ಸಮಸ್ತಕಾರ್ಯಂ ವಶಿತಾ ಚ ವಿಶ್ವಸಂಭಾವನಾ ಯುಕ್ತಯಸ್ತ್ವನ್ಯಪಕ್ಷೇ । ಸಾಮಾನ್ಯರೂಪಂ ಪ್ರತಿಭಾನಮುಕ್ತಿರಾಶ್ಚರ್ಯತಾ ಕೃತ್ರಿಮತಾsಸ್ತದೋಷಃ । ವಿಶೇಷಕ್ಲೃಪ್ತಿಃ ಕೃತನಿಶ್ಚಯಶ್ಚ ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ ॥** ಎಂದು.

## ಸಂಪದ್ಯಾಧಿಕರಣಂ

೧ನೇ ಸಂಪದ್ಯಾಧಿಕರಣದಲ್ಲಿ ಜ್ಞಾನಿಯು ಅರ್ಚಿರಾದಿ ಮಾರ್ಗವನ್ನು ಅತಿಕ್ರಮಿಸಿ ಹೋಗುತ್ತಾನೆಂದೂ ಬ್ರಹ್ಮನು ಗಮ್ಯನೆಂದೂ ಹೇಳಿದುದರಿಂದ ಪರಬ್ರಹ್ಮನನ್ನು ಅತಿಕ್ರಮಿಸಿ ಭೋಗಗಳನ್ನು ಅನುಭವಿಸುತ್ತಾನೋ, ಅಥವಾ ಬ್ರಹ್ಮನ ಸಮೀಪದಲ್ಲಿಯೇ ಭೋಗಗಳನ್ನು ಅನುಭವಿಸುತ್ತಾನೋ, ಎಂದು ಸಂಶಯವು ಬಂದರೆ—ಅತಿಕ್ರಮಿಸಿಯೇ ಎಂದು. ಪೂರ್ವಪಕ್ಷವು. ಸಮೀಪದಲ್ಲಿಯೇ ಎಂದು ಸಿದ್ಧಾಂತವು. ಅದರಲ್ಲಿ, **ಅತಿಕ್ರಮೋಕ್ತಿಃ**=(ದಾಟಿ ಹೋಗುವುದು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿ ನಿರಾಕರಿಸುತ್ತಾರೆ.

**ಮೂ ॥ (೧) ನ ಚೈತಂ ಸೇತುಂ ತೀರ್ತ್ವೇತ್ಯತ್ರಾತಿಕ್ರಮೋಕ್ತೇರ್ಮುಕ್ತೋ ಬ್ರಹ್ಮ ತೀರ್ತ್ವಾ ಗಚ್ಛತಿ (೨) ತರತೀತಿ ಸಾಮಾನ್ಯರೂಪಪ್ರತೀತೇಃ । ಬ್ರಹ್ಮ ತೀರ್ತ್ವೇದಂ ಗಚ್ಛತೀತಿ ವಿಶೇಷಾನುಕ್ತೇಃ । (೩) ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಬ್ರಹ್ಮ ಸಂಪದ್ಯತೇ । ಇತಿ ವಿಶೇಷೋಕ್ತೇಶ್ಚೈತಂ ಸೇತುಂ ಪ್ರತ್ಯನ್ಯತ್ರೀತ್ವೇತ್ಯನ್ಯಥೋಪಪತ್ತೇಃ ॥ ೧ ॥**

ಅ ॥ (೧) ಈ ಸರ್ವಾಶ್ರಯನಾದ ಶ್ರೀ ಪರಮಾತ್ಮನನ್ನು ದಾಟಿ ಎನ್ನುವಲ್ಲಿ ಬ್ರಹ್ಮನನ್ನು ಅತಿಕ್ರಮಿಸಿ ಎಂದು ಹೇಳಿದುದರಿಂದ ಮುಕ್ತನು ಬ್ರಹ್ಮನನ್ನು ದಾಟಿ ಹೋಗುತ್ತಾನೆ. ಆದಕಾರಣ ಬ್ರಹ್ಮನು ಗಮ್ಯನಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ **ಸಾಮಾನ್ಯರೂಪಂ** ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ತರತಿ (ತೀರ್ತ್ವಾ) ಎಂದು ಸಾಮಾನ್ಯ ಪ್ರತೀತಿಯು ತೋರುವುದು. ಬ್ರಹ್ಮನನ್ನು ದಾಟಿ ಇದನ್ನು ಹೊಂದುತ್ತಾನೆ, ಎಂದು ಬ್ರಹ್ಮಾತಿರಿಕ್ತವಾದ ಗಮ್ಯ ವಿಶೇಷವನ್ನು ಹೇಳಲಿಲ್ಲ. (೩) ಈ ಭಯಂಕರವಾದ ಅಮಂಗಲಕರವಾದ ಸಂಸಾರಾಖ್ಯ ನದಿಯನ್ನು ದಾಟಿ ಪರಬ್ರಹ್ಮನನ್ನು ಹೊಂದುತ್ತಾನೆ, ಎಂದು ವಿಶೇಷೋಕ್ತಿಯಿದ್ದ ಪ್ರಯುಕ್ತ ಈ ಸರ್ವಾಶ್ರಯನಾದ ಶ್ರೀಹರಿಯನ್ನು ಹೊಂದುವುದಕ್ಕಾಗಿ ಸಂಸಾರ ಸಮುದ್ರವನ್ನು ದಾಟಿ ಎಂದರ್ಥವು ಯುಕ್ತವಾಗುವುದು. (ಮತ್ತು (1) **ಸೇತುಶ್ಚಾಪಿ ವಿಧಾರಣಾತ್ । ಸಿತಮಸ್ಮಿನ್ ಜಗತ್ಸರ್ವಮಿತಿ ಸೇತುರಿತೀರಿತಃ । ಏತಂ ಸೇತುಂ ಪ್ರತಿ ಪುಮಾನನ್ಯತ್ರೀತ್ವಾ ಹ್ಯದೋಷವಾನ್ ॥** ಎಂದೂ ಸ್ಪಷ್ಟ ಪ್ರಮಾಣವಿದೆ. (2) ಏವಂಚ ಏತಂ ಸೇತುಂ ಎಂಬ ಶ್ರುತಿಯು ಸಾಮಾನ್ಯರೂಪವಾಗಿರುವುದರಿಂದ ಈ ಧಾರಕನಾದ ಶ್ರೀಹರಿಯನ್ನು ಹೊಂದುವುದಕ್ಕಾಗಿ ಇತರವಾದ ಸಂಸಾರವನ್ನು ದಾಟಿ, ಎಂಬ ಅರ್ಥವು ಕೂಡುವುದರಿಂದ ಪರಬ್ರಹ್ಮನು ಗಮ್ಯನೆಂಗದ್ದು ಯುಕ್ತವು.) ॥ ೧ ॥

## ಮುಕ್ತ್ಯಧಿಕರಣವು

೨ನೇ ಮುಕ್ತ್ಯಾದಿಕರಣದಲ್ಲಿ ಸ ತತ್ರ ಪರ್ಯೇತಿ ಇತ್ಯಾದಿಗಳಿಂದ ಈತನಿಗೆ ಕ್ರಿಯೆಯು ತೋರುತ್ತದೆ. ಆದಕಾರಣ ಈ ಶ್ರುತಿಪ್ರತಿಪಾದ್ಯನು ಮುಕ್ತನೋ ಮುಕ್ತನಲ್ಲವೋ, ಎಂದು ಸಂಶಯವು ಬಂದರೆ —ಮುಕ್ತ ನಲ್ಲವೆಂದು ಪೂರ್ವಪಕ್ಷವು. ಮುಕ್ತನೇ ಎಂದು ಸಿದ್ಧಾಂತವು.ಅದರಲ್ಲಿ ಶ್ರುತಿಃ=(ಕ್ರಿಯೆಯು) ಎಂಬ ಪೂರ್ವ ಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಕೃತಿಮತ್ತ್ವಾದಮುಕ್ತ ಏವೋಚ್ಯತೇ । ಸ ತತ್ರ ಪರ್ಯೇತೀತ್ಯಾದೌ ॥ (೨) ಸ್ವೇನರೂಪೇಣಾಭಿನಿಷ್ಪದ್ಯತೇ ಇತಿ ಮುಕ್ತಸ್ಯ ಸ್ಪಷ್ಟಂ ಪ್ರತಿಭಾತತ್ವಾಚ್ಛ್ರುತೌ॥ (೩) ಸ ತತ್ರ ಪರ್ಯೇತೀತಿ ಶ್ರುತ್ಯೈಕ್ಯಪ್ರತೀತೇಶ್ಚ (೪) ಏವಂ ಭೂತಸ್ಯಾಪಿ ಪ್ರಕರಣತ್ವಂ ಪರಿಕಲ್ಪ್ಯ ಶ್ರುತಿಬಾಧಾಂಗೀಕಾರೇ ಸಾ ಶ್ರುತಿರಪ್ಯೇವಂ ವಿಭಜ್ಯ ಕಿಂ ನ ಶಕ್ಯಾ ಯೋಜಯಿತುಂ ಇತಿ ಶ್ರುತೇರೇವಾಭಾವಪ್ರಸಂಗಃ ॥ (೫) ಸತ್ಯಂ ಜ್ಞಾನ ಮಿತ್ಯಾದಾವಪಿ ಸತ್ಯಮಿತ್ಯಸ್ಯಾನ್ನಮಿತ್ಯನೇನಾನ್ವಯಃ ಇತ್ಯಾದಿ ಪ್ರಸಂಗಾತ್ ॥ ೨ ॥

ಅ ॥(೧)ಸ ತತ್ರ ಪರ್ಯೇತಿ ಇತ್ಯಾದಿಗಳಲ್ಲಿ ಕ್ರಿಯೆಯು ತೋರುವುದರಿಂದ ಅಮುಕ್ತನೇ ಹೇಳಲ್ಪಡು ತ್ತಾನೆ (ಏಕೆಂದರೆ–ಕೃತಕೃತ್ಯನಾದ ಮುಕ್ತನಿಗೆ ಕ್ರಿಯೆಯು ಕೂಡಲಾರದು, ಮುಕ್ತನಾಗಿದ್ದರೆ ಕ್ರಿಯೆಯೇ ಕೂಡಲಾರದು. ಏವಂಚ ಕ್ರಿಯೆಯು ಇದ್ದುದರಿಂದ ಶ್ರುತ್ಯುಕ್ತನಾದವನು ಅಮುಕ್ತನಾದುದರಿಂದ ಮುಕ್ತನಿಗೆ ಭೋಗವು ಕೂಡಲಾರದು.ಎಂದರೆಹಾಗೆಹೇಳಕೂಡದು )(೨ (ಏಕೆಂದರೆ. ಪ್ರತಿಭಾನಂ=(ಸ್ಪಷ್ಟಪ್ರತೀತಿಯು) ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.)ಸ್ವೇನ ರೂಪೇಣ ಅಭಿನಿಷ್ಪದ್ಯತೇಎಂಬಶ್ರುತಿಯಲ್ಲಿ ಮುಕ್ತ ನೇ ಸ್ಪಷ್ಟವಾಗಿ ತೋರುತ್ತಾನೆ. (೩) (ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ ಎನ್ನುವುದು ಸ ತತ್ರ ಪರ್ಯೇತಿ ಎನ್ನುವುದಕ್ಕಿಂತ ಭಿನ್ನಪ್ರಕರಣವಾಗಿರುವುದರಿಂದ ಈ ವಾಕ್ಯದಿಂದ ಅವಾ ಕ್ಯೋಕ್ತ ಭೋಗವುಳ್ಳವನು ಸ್ಪಷ್ಟವಾಗಿ ಪ್ರತೀತನಾಗುತ್ತಾನೆನ್ನುವುದು ಹೇಗೆ ಕೂಡುತ್ತದೆಂದರೆ) ಸ ತತ್ರ ಪರ್ಯೇತಿ ಎನ್ನುವುದಕ್ಕೆ ಪರಂಜ್ಯೋತಿಃ ಎಂಬ ಪೂರ್ವಶ್ರುತಿಯಿಂದ ಏಕವಿಷಯತ್ವವು ತೋರುತ್ತದೆ (ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಎಂಬ ಆನುಪೂರ್ವೀ ವಿಶಿಷ್ಟವಾಕ್ಯದಲ್ಲಿ ಸಃ ಎಂಬಶಬ್ದದಿಂದ ಸ್ವೇನ ರೂಪೇಣಾಭಿನಿಷ್ಪದ್ಯತೇ ಎಂದು ಹೇಳಿದ ಆವಿರ್ಭೂತ ಸ್ವರೂಪವುಳ್ಳ ಮುಕ್ತನಿಗೇನೇ ಪರಾಮರ್ಶವು.) (೪) (ಪ್ರತೀತವಾದುದನ್ನು ಬಿಟ್ಟು ಅನ್ಯಥಾ ಕಲ್ಪಿಸಿದರೆ ಬಾಧಕ ಹೇಳುತ್ತಾರೆ.) ಏಕ ವಾಕ್ಯವಾಗಿ ಪ್ರತೀತವಾದುದನ್ನು ಭಿನ್ನ ಪ್ರಕರಣವೆಂದು ಪರಿಕಲ್ಪಿಸಿ ಸ ತತ್ರ ಪರ್ಯೇತಿ ಎನ್ನುವುದು ಮುಕ್ತಪರವಲ್ಲವೆಂದಂಗೀಕರಿಸಿದರೆ ಪರಂ ಜ್ಯೋತಿಃ ಎನ್ನುವ ಶ್ರುತಿಯನ್ನು ಹೀಗೆಯೇ ಪರಂ ಜ್ಯೋತಿಸ್ಸಿಷ್ಠತಿ ಇತ್ಯಾದಿ ಪ್ರಕಾರ ವಿಭಾಗಿಸಿಕೊಂಡು ಕೂಡಿಸಲಿಕ್ಕೆ ಏಕೆ ಶಕ್ಯವಾಗ ಲಾರದು. ಹೀಗೆ ಸಂದರ್ಭದಲ್ಲಿ ಪ್ರಮಾಣವಾಗಿ ಏಕವಾಕ್ಯ ವಾಗಿರತಕ್ಕ ಶ್ರುತಿಯೇ ಇಲ್ಲವೆಂದಾಗಬೇಕಾಗು ವುದು. (ಅಂದರೆ ಅವ್ಯವಹಿತವಾಗಿ ಏಕವಾಕ್ಯವಾಗಿಪ್ರತೀತವಾದುದನ್ನು ಜ್ಞಾಪಕವಿಲ್ಲದೆ ಭಿನ್ನಪ್ರಕರಣವೆಂದು ಕಲ್ಪಿಸಿದರೆ—ಏಕವಾಕ್ಯವಾಗಿ ನಿಶ್ಚಿತವಾದ ಪರಂಜ್ಯೋತಿರುಪಸಂಪದ್ಯ ಎನ್ನುವುದಕ್ಕೂ ತಿಷ್ಠತಿ ಇತ್ಯಾದಿ ಪದವನ್ನು ಅಧ್ಯಾಹಾರ ಮಾಡಿಕೊಂಡು ಭಿನ್ನಪ್ರಕರಣವೆಂದು ಕಲ್ಪಿಸಲಿಕ್ಕೆ ಶಕ್ಯವಾಗಬಹುದಾದು ದರಿಂದ ಶ್ರುತಿಯಲ್ಲಿ ಯಾವುದೊಂದೂ ಕೂಡ ಏಕಾರ್ಥವಾಗಿ ಏಕವಾಕ್ಯವು ಒಂದೇ ಪ್ರಕರಣವೆನ್ನುವುದು ಆಗದೆ ಹೋಗುವುದು.) (೫) (ಈ ಶ್ರುತಿಯನ್ನು ಮಾತ್ರ ವಿಭಾಗಿಸಿ ಯೋಜಿಸಲಿಕ್ಕೆ ಶಕ್ಯವಾಗುತ್ತದೆ ಎಂದಲ್ಲ. ಮತ್ತೆ ಸತ್ಯಂ ಜ್ಞಾನಂ ಎನ್ನುವಲ್ಲಿಯೂ ವ್ಯವಹಿತವಾದ ಅನ್ವಯವನ್ನು ಅಂಗೀಕರಿಸಿಕೊಂಡು ಯೋಜನಾ ಮಾಡಲಿಕ್ಕೆ ಶಕ್ಯವೇ ಆಗುವುದು. ಅಂದರೆ) ಅನ್ನಮಯಾದಿ ಪ್ರಕರಣವು ಸತ್ಯಂ ಜ್ಞಾನಂ ಎಂಬ ಮಂತ್ರ

ವರ್ಣೋಕ್ತ ಪ್ರವಚನ ರೂಪವಾಗಿರುವುದರಿಂದ ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವಲ್ಲಿಯೂ ಸತ್ಯಂ ಎನ್ನುವುದಕ್ಕೆ ಯೋಽನ್ನಂ ಬ್ರಹ್ಮೋಪಾಸತೇ ಎಂದು ಹೇಳಿದ ಅನ್ನಂ ಎನ್ನುವುದರಿಂದ ಏಕಾರ್ಥ ವನ್ನ ಪ್ರತಿಪಾದಿಸುವುದರಿಂದ ಸಾಮಾನಾಧಿಕರಣ್ಯರೂಪವಾದ ಅನ್ವಯವು ಬರಬೇಕಾಗುವುದು. ಅದಿಪದ ದಿಂದ ಜ್ಞಾನಂ ಎನ್ನುವುದಕ್ಕೆ ಮನಃ ಎನ್ನುವುದರಿಂದಲೂ, ಅನಂತಂ ಎನ್ನುವುದಕ್ಕೆ ಆನಂದಂ ಎನ್ನುವು ದರಿಂದಲೂ ಅನ್ವಯವು ಬರಬೇಕಾಗುವುದು. (ಇದು ಅವರಿಗೆ ಇಷ್ಟವಲ್ಲ. ಸತ್ಯಂ ಜ್ಞಾನಂ ಎನ್ನುವ ಮಂತ್ರವು ಬ್ರಹ್ಮಪರವು, ಅನ್ನಮಯಾದಿ ಪ್ರಕರಣಗಳು ಕೋಶಪರಗಳು. ಹೀಗೆ ಭಿನ್ನಪ್ರಕರಣವೆಂದು ಪರರು ಅಂಗೀಕರಿಸುವರು. ಪರರೀತಿಯಾಗಿಯೇ ಹೀಗೆ ಆಪಾದಿಸಿದ್ದು, ಸಿದ್ಧಾಂತದಲ್ಲಿ ಏಕಪ್ರಕರಣ ವೆಂದು ಆಚಾರ್ಯರು ಉಪಪಾದಿಸಿರುವರು.) (ಏವಂಚ ಸ ತತ್ರ ಪರ್ಯೇತಿ ಎಂದು ಶ್ರುತ್ಯುಕ್ತನು ಸ್ಪಷ್ಟವಾಗಿ ಮುಕ್ತನೆಂದು ತೋರುವುದರಿಂದ ಮುಕ್ತನಿಗೆ ಭೋಗವು ಯುಕ್ತವೇ. ॥ ೨ ॥

## ಆತ್ಮಾಧಿಕರಣವು

೩ನೇ ಆತ್ಮಾಧಿಕರಣದಲ್ಲಿ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಯೋತಿಶ್ಶಬ್ದವಾಚ್ಯತ್ವವು ವಿಷ್ಣು ಆದಿತ್ಯ ಇಬ್ಬರಲ್ಲಿಯೂ ಇದ್ದುದರಿಂದ ವಿಷ್ಣುವೋ ಆದಿತ್ಯನೋ ಎಂದು ಸಂದೇಹವು ಬಂದರೆ—ಆದಿತ್ಯನೆಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂ ತವು. ಅದರಲ್ಲಿ ಅರ್ಥಲಾಭಃ (ಏಕವಾಕ್ಯತ್ವರೂಪವಾದ ಅರ್ಥಲಾಭವು,) ಎನ್ನುವ ಪೂರ್ವಪಕ್ಷನ್ಯಾಯ ವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧)ನ ಚ ಪರಂ ಜ್ಯೋತಿಃ ಶಬ್ದೇನಾದಿತ್ಯಜ್ಯೋತಿರಂಗೀಕಾರೇ ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತ ಇತ್ಯಾದಿನೈಕಾರ್ಥತೇತಿ ಪ್ರಯೋಜನಂ (೨) ಅಥ ಕಿಮುಚ್ಯತೇ ಪರಂಜ್ಯೋತಿರಿತ್ಯತ್ರೈವ ಪರಂಜ್ಯೋತಿಃ ಸಹಿ ಪರಮೋ ದ್ಯೋತತೇ ಜೀವಾಚ್ಚಾಜೀವಾಚ್ಚ ತಸ್ಮಾದಾಹುಃ ಪರಂಜ್ಯೋತಿರಿತಿ ತಮೇವೈಷ ಜೀವೋಽಭಿ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಇತಿ ತಸ್ಯೈವ ಪರಂಜ್ಯೋತಿಷ್ಟ್ವೋಕ್ತೇಃ । (೩) ಸಾವಕಾಶ ಲಿಂಗಾತ್(ಶ್ರುತೇ)ರ್ನಿರವಕಾಶಶ್ರುತೇರೇವಾತಿಬಲವತ್ತ್ವಾತ್ ॥ ೩ ॥

ಅ ॥ (೧) ಪರಂಜ್ಯೋತಿರುಪಸಂಪದ್ಯ ಎನ್ನುವಲ್ಲಿ ಪರಂಜ್ಯೋತಿಃ ಎನ್ನುವಶಬ್ದದಿಂದ ಆದಿತ್ಯಾಖ್ಯ ಜ್ಯೋತಿಸ್ಸನ್ನು ಹೊಂದಿ ಎಂದಂಗೀಕರಿಸಿದರೆ—ಆತನು ತೇಜೋರೂಪನಾದ ಸೂರ್ಯನಲ್ಲಿ ಸಂಗತನಾಗಿ, (ಸೂರ್ಯನನ್ನು ಹೊಂದಿ)ಹೇಗೆಹಾವು ಚರ್ಮದಿಂದ ಬಿಡಲ್ಪಡುತ್ತದೊ,ಹೀಗೆಯೇ ಅಜ್ಞಾನಿಯು ಸ ತೇಜಸಿ ಎನ್ನುವ ಶ್ರುತಿಸಮಾಖ್ಯೆಯಿಂದ ಆದಿತ್ಯನೆನ್ನುವ ಪರಂಜ್ಯೋತಿಯನ್ನು ಹೊಂದಿ ಸ್ವೇನ ರೂಪೇಣಾಭಿನಿಷ್ಪ ದ್ಯತೇ ಅಂದರೆ ಪ್ರಾರಬ್ಧಕರ್ಮದಿಂದ ಬಿಡಲ್ಪಡುತ್ತಾನೆ ಇತ್ಯಾದಿಗಳಿಂದ ಏಕಾರ್ಥ್ಯವು ಎನ್ನುವ ಪ್ರಯೋ ಜನವು, ಎನ್ನುವ ಅರ್ಥವು ಪರಂಜ್ಯೋತಿಃ ಎನ್ನುವ ವಾಕ್ಯಕ್ಕೆ ಹೇಳಲು ಶಕ್ಯವಾಗುತ್ತದೆ. ಏವಂಚ ಪರಂ ಜ್ಯೋತಿಃ ಶಬ್ದವು ಆದಿತ್ಯಪರವೆಂದಂಗೀಕರಿಸಿದರೆ ಸ ತೇಜಸಿ ಎನ್ನುವ ಶ್ರುತಿಯಿಂದ ಏಕವಾಕ್ಯತ್ವರೂಪ ವಾದ ಅರ್ಥವು ಲಭಿಸುವುದರಿಂದ ಮುಕ್ತನಿಗೆ ಬ್ರಹ್ಮನ ಸವಿಧದಲ್ಲಿ ಭೋಗವಿಲ್ಲ ಎಂದರೆ) ಹಾಗೆ ಹೇಳ ಕೂಡದು (೨) (ಏಕೆಂದರೆ ಉಕ್ತೇಃ=(ಪರಂಜ್ಯೋತಿಃ ಎನ್ನುವ ಉಕ್ತಿಯು) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ) ಪರಂಜ್ಯೋತಿಃ ಶಬ್ದದಿಂದ ಯಾವುದು ಹೇಳಲ್ಪಡುತ್ತದೆ.? ಎಂದರೆ ಪರಮಾತ್ಮನೇ ಪರಂ

ಜ್ಯೋತಿಃ ಎನಿಸುತ್ತಾನೆ, ಹೇಗೆಂದರೆ ಆ ಶ್ರೀಹರಿಯೇ ಚತುರ್ಮುಖ ರುದ್ರಾದಿ ಜೀವರಿಂದಲೂ ಶ್ರೀತತ್ತ್ವದಿಂದಲೂ ಜಡಪ್ರಕೃತ್ಯಾದಿಗಳಿಂದಲೂ ಸರ್ವೋತ್ಕೃಷ್ಟನಾಗಿ ಪ್ರಕಾಶಿಸುತ್ತಾನೆ. ಆದಕಾರಣ ಆತನನ್ನು ಪರಂಜ್ಯೋತಿಯನ್ನಾಗಿ ಹೇಳುತ್ತಾರೆ. ಅಂತಹ ಶ್ರೀಪರಮಾತ್ಮನನ್ನು ಈ ಬ್ರಹ್ಮಾದಿ ಜೀವರು ಹೊಂದಿ ತಮ್ಮ ಸ್ವರೂಪದಿಂದ ಸಂಗತರಾಗುತ್ತಾರೆ. ಹೀಗೆ ಆ ಶ್ರೀಪರಮಾತ್ಮನಿಗೇನೇ ಪರಂಜ್ಯೋತಿಷ್ಟ್ವವನ್ನು ಹೇಳಿದೆ. (೩) ಸಾವಕಾಶವಾದ ಸಮಾಖ್ಯಾರೂಪವಾದ ಲಿಂಗಕ್ಕಿಂತಲೂ ಸ ತೇಜಸಿ ಎನ್ನುವ ಶ್ರುತಿಗಿಂತಲೂ ನಿರವಕಾಶವಾದ ಅಥ ಕಿಮುಚ್ಯತೇ ಎನ್ನುವ ಶ್ರುತಿಯೇ ಜಾತ್ಯಾ ಅತಿ ಬಲಿಷ್ಠವು. (ಏವಂಚ ಪರಂಜ್ಯೋತಿಃ ಶಬ್ದದಿಂದ ಬ್ರಹ್ಮನನ್ನೇ ಹೇಳಿದುದರಿಂದ ಬ್ರಹ್ಮನನ್ನು ಹೊಂದಿಯೇ ಭೋಗಗಳನ್ನು ಅನುಭವಿಸುತ್ತಾನೆ.) ॥ ೩ ॥

## ಅವಿಭಾಗಾಧಿಕರಣವು

೪ನೇ ಅವಿಭಾಗಾಧಿಕರಣದಲ್ಲಿ ಸಾಯುಜ್ಯವನ್ನು ಹೊಂದಿರುವ ಮುಕ್ತರು ಪರಮಾತ್ಮನು ಭೋಗಿಸಿರುವ ಭೋಗಗಳನ್ನೇ ಅನುಭವಿಸುತ್ತಾರೊ, ಪರಮಾತ್ಮನು ಭೋಗಿಸದಿರುವ ಭೋಗಗಳನ್ನು ಅನುಭವಿಸುತ್ತಾರೋ, ಎಂದು ಸಂಶಯವು ಬಂದರೆ—ಅಭುಕ್ತ ಭೋಗಗಳನ್ನೇ ಅನುಭವಿಸುತ್ತಾರೆಂದು ಪೂರ್ವಪಕ್ಷವು. ಪರಮಾತ್ಮನಿಂದ ಭುಕ್ತಗಳಾದ ಭೋಗಗಳನ್ನೇ ಅನುಭವಿಸುತ್ತಾರೆಂದು ಸಿದ್ಧಾಂತವು. ಅದರಲ್ಲಿ ಪರಾಗತಿಃ= (ಪರಮಗತಿಯು) ಎನ್ನುವ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ॥ (೧) ನ ಚ ಪರಮಗತಿತ್ವಾದೀಶ್ವರಾಭುಕ್ತಾ ಅಪಿ ಭೋಗಾಃ ಮುಕ್ತೌ ಭವಂತಿ । ಈಶ್ವರಸ್ಯ ಸ್ವತ ಏವ ಪೂರ್ಣಾನಂದತ್ವಾದಭೋಗಸ್ಯಾಪಿ ಸಂಭವಾದಿತಿ ವಾಚ್ಯಂ। (೨) ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ ಪೂರ್ಣಜ್ಞಾನಃ ಪೂರ್ಣಭಾಃ ಪೂರ್ಣಶಕ್ತಿಃ । ಆಶ್ಚರ್ಯತ್ವಾದ್ಭಗವಾನ್ ವಾಸುದೇವೋ ವಿರುದ್ಧಶಕ್ತಿರ್ನಚ ದೋಷಸ್ಪೃಗೀಶಃ ಇತ್ಯಾಶ್ಚರ್ಯತಯೈವ ಬ್ರಹ್ಮಣ ಉಭಯೋಕ್ತೇಃ ॥ (೩) ಸಾವಕಾಶೋಪಪತ್ತಿಮಾತ್ರಾನ್ನಿರವಕಾಶಶ್ರುತಿಯುಕ್ತೋಪಪತ್ತೇರೇವ ಬಲವತ್ತ್ವಾತ್ ॥ ೪ ॥

ಅ ॥ (೧) ಮುಕ್ತಿಯು ಪರಮಗತಿಯಾಗಿರುವುದರಿಂದ ಶ್ರೀಪರಮಾತ್ಮನಿಂದ ಅಭುಕ್ತಗಳಾದ ಭೋಗಗಳೂ ಮುಕ್ತಿಯಲ್ಲಿ ಆಗುತ್ತವೆ. ಶ್ರೀಹರಿಗೆ ಸ್ವತ ಏವ ಪೂರ್ಣಾನಂದವಿದ್ದುದರಿಂದ ಭೋಗಾಭಾವವೂ ಕೂಡುತ್ತದೆ. (ಅಂದರೆ - ಭಗವಂತನಿಂದ ಭುಕ್ತಗಳೇ ಆದ ಭೋಗಗಳು ಮುಕ್ತಿಯಲ್ಲಿ ಅನುಭವಿಸಲ್ಪಡುತ್ತವೆ, ಎಂದು ನಿಯಮವಿದ್ದರೆ ಶ್ರೀಹರಿಗೆ ನಿತ್ಯ ಪೂರ್ಣಾನಂದವಿದ್ದುದರಿಂದ ಕದಾಚಿತ್ ಆತನಿಗೆ ಭೋಗಾಭಾವವು ಕೂಡುವಾಗ ಭೋಗೇಚ್ಛೆಯನ್ನು ಹೊಂದಿದ ಮುಕ್ತರಿಗೆ ಭೋಗಾಭಾವವು ಪ್ರಸಕ್ತವಾಗುವುದರಿಂದ ಮೋಕ್ಷವು ಅಪುರುಷಾರ್ಥವೇ ಆಗ ಬೇಕಾಗುವುದು, ಅದರಿಂದ ಪರಮಗತಿತ್ವವೇ ಇಲ್ಲದೆ ಹೋಗುವುದು.) ಏವಂಚ ಮೋಕ್ಷವು ಪರಮಗತಿಯಾಗಿರುವುದರಿಂದ ಮುಕ್ತರು ಪರಮಾತ್ಮನು ಭೋಗಿಸದಿರುವ ಭೋಗಗಳನ್ನೇ ಭೋಗಿಸುತ್ತಾರೆ. ಆದಕಾರಣ ಪರಮಾತ್ಮನಿಗೆ ಸರ್ವಭೋಕ್ತೃತ್ವವು ಇಲ್ಲ. ಎಂದರೆ ಹಾಗೆ ಹೇಳ ಕೂಡದು. (೨) (ಏಕೆಂದರೆ ಆಶ್ಚರ್ಯತಾ=(ಆಶ್ಚರ್ಯತನವು) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಪೂರ್ಣಾನಂದವುಳ್ಳವನು, ಪೂರ್ಣಭೋಗವಿರುವವನು, ಸರ್ವಕರ್ತನು, ಪರಿಪೂರ್ಣ ಜ್ಞಾನವುಳ್ಳವನು, ಪೂರ್ಣಕಾಂತಿಯುಳ್ಳವನು, ಪೂರ್ಣಶಕ್ತಿಯುಳ್ಳವನು, ಅತ್ಯಾಶ್ಚರ್ಯಭೂತನಾದುದರಿಂದ ಷಡ್ಗುಣ ಪರಿಪೂರ್ಣನಾದ ವಾಸುದೇವನು ಲೋಕತಃ ವಿರುದ್ಧವಾದ ಅಪರಿಮಿತ ಶಕ್ತಿಯುಳ್ಳವನು, ದೋಷಸಂಪರ್ಕವುಳ್ಳವನಲ್ಲ; ಎಂದು ಅತ್ಯಾಶ್ಚರ್ಯರೂಪವಾಗಿಯೇ ಪರಬ್ರಹ್ಮನಿಗೆ ಪೂರ್ಣಾನಂದತ್ವ," ಪೂರ್ಣಭುಕ್ತ್ವ

ರೂಪ ಎರಡನ್ನು ಹೇಳಿದೆ. (ತಥಾಚ ಬ್ರಹ್ಮನಿಗೆ ಪೂರ್ಣಾನಂದವಿದ್ದರೂ ಪೂರ್ಣಭುಕ್ ಎನ್ನುವುದರಿಂದ ಪೂರ್ಣಭೋಗವೂ ಶ್ರುತವಾಗುವುದರಿಂದ ಯಾವಾಗಲೂ ಶ್ರೀಹರಿಗೆ ಭೋಗವಿಲ್ಲವೆನ್ನುವುದು ಕೂಡದಿರುವುದರಿಂದ ಭೋಗೇಚ್ಛೆಯನ್ನು ಹೊಂದಿದ ಮುಕ್ತರಿಗೆ ಭೋಗವೇ ಕೊಡುವುದರಿಂದ ಮುಕ್ತರು ಪರಮಾತ್ಮನಿಂದ ಭುಕ್ತಗಳಾದ ಭೋಗಗಳನ್ನು ಭೋಗಿಸುತ್ತಾರೆನ್ನುವುದು ಯುಕ್ತವು.) (೩)(ಪರಮಗತಿತ್ವಮುಕ್ತಿಯು ಯುಕ್ತಿಯುಕ್ತವಾಗಿರುವುದರಿಂದ ಪ್ರಬಲವಾದ ಕಾರಣ ಕೇವಲ ಉಪಪತ್ತಿಯಿಂದ ಸಿದ್ಧಾಂತ ನಿರ್ಣಯವು ಹೇಗೆಂದರೆ) ಸಾವಕಾಶವಾದ ಪರಮಗತಿತ್ವರೂಪವಾದ ಕೇವಲ ಉಪಪತ್ತಿಗಿಂತ ನಿರವಕಾಶವಾದ ಶ್ರುತಿಯುಕ್ತವಾದ ಉಪಪತ್ತಿಯೇ ಪ್ರಬಲವು. (ಏವಂಚ ಬ್ರಹ್ಮನಿಗೆ ಅತ್ಯಾಶ್ಚರ್ಯತ್ವವಿದ್ದುದರಿಂದಲೇ ಪೂರ್ಣಾನಂದವಿದ್ದರೂ ಪೂರ್ಣಭೋಗವೂ ಶ್ರುತವಾಗಿರುವುದರಿಂದ ಮುಕ್ತರು ಭಗವಂತನಿಂದ ಭುಕ್ತಗಳಾದ ಭೋಗಗಳನ್ನೇ ಭೋಗಿಸುತ್ತಾರೆನ್ನುವುದು ಯುಕ್ತವು. ॥ ೪ ॥

## ಬ್ರಾಹ್ಮಾಧಿಕರಣವು

ಈ ೫ನೇ ಅಧಿಕರಣದಲ್ಲಿ ವಾದಿಗಳ ವಿಪ್ರತಿಪತ್ತಿಯಿಂದ ಮುಕ್ತರಿಗೆ ಭೋಗವು ಯುಕ್ತವೋ ಅಲ್ಲವೋ, ಎಂದು ಸಂಶಯವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು. ಯುಕ್ತವೇ ಎಂಬು ಸಿದ್ಧಾಂತವು. ಅದರಲ್ಲಿ ಪಾರಗತಿ = ಸಂಸಾರಪಾರವನ್ನು ಹೊಂದಿರುವುದು, ಎನ್ನುವ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ ‌। (೧) ನ ಚ ಪಾರಗತತ್ವಾನ್ಮುಕ್ತಸ್ಯ ಚಿನ್ಮಾತ್ರದೇಹೋಽಪಿ ನಾಸ್ತೀತಿ ವಾಚ್ಯಂ । (೨) ಅಕೃತ್ರಿಮತ್ವಾತ್ತಸ್ಯ ದೇಹಸ್ಯಾನಪಗಮನಾತ್ । (೩) ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿ ಕರಣಾನಿ ತೈರೀಶಾನುಗೃಹೀತೈರ್ಭೋಗಾನ್ ಭುಂಕ್ತೇ ಇತಿ ಶ್ರುತೇಃ । ॥ ೫ ॥

ಅ ॥ (೧) ಮುಕ್ತನು ಸಂಸಾರಪಾರವನ್ನು ಹೊಂದಿರುವುದರಿಂದ ಆತನಿಗೆ ಕೇವಲ ಚಿದ್ರೂಪದೇಹವೂ ಇಲ್ಲ. (ಜಡದೇಹವು ಇಲ್ಲವೆನ್ನುವುದು ಎತರಾಂಶಸಿದ್ಧ.) (ದೇಹವಿದ್ದರೆ ಮುಕ್ತತ್ವವೇ ಕೂಡಲಾರದು) (ಮುಕ್ತನಿಗೆ ದೇಹವಿಲ್ಲದಿದ್ದರೆ ಭೋಗವೇ ಕೂಡಲಾರದು ಭೋಗವಿಲ್ಲದಿದ್ದರೆ ಮುಕ್ತಿಯು ಪುರುಷಾರ್ಥವಾಗದೇನೇ ಹೋಗಬೇಕಾಗುವುದು.) ಏವಂಚ ಮುಕ್ತರು ಸಂಸಾರಪಾರಂಗತರಾಗಿರುವುದರಿಂದ ಶರೀರವಿಲ್ಲದಿರುವ ಪ್ರಯುಕ್ತ ಭೋಗವು ಕೂಡದಿರುವಕಾರಣ ಮುಕ್ತಿಯು ಅಪುರುಷಾರ್ಥವಾಗುವುದು. ಎಂದರೆ) ಹಾಗೆ ಹೇಳಕೂಡದು. (೨) ಏಕೆಂದರೆ—ಅಕೃತ್ರಿಮತಃ=(ಜೀವಸ್ವರೂಪಕ್ಕೆ ಕೃತ್ರಿಮತ್ವವಿಲ್ಲದಿರುವಿಕೆ) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ,) ಚಿನ್ಮಾತ್ರವಾದ ಜೀವಸ್ವರೂಪವು ಕೃತ್ರಿಮವಾಗದಿರುವುದರಿಂದ ನಾಶಹೊಂದುವುದಿಲ್ಲ. (ಕೃತ್ರಿಮದೇಹವೇ ಸಂಸಾರವನ್ನು ಹೊಂದಿಸಿಕೊಡತಕ್ಕುದಾದುರಿಂದ ಅಕೃತ್ರಿಯ ವಾದ ಚಿನ್ಮಾತ್ರದೇಹವನ್ನಂಗೀಕರಿಸಿದರೂ ಸಂಸಾರಪಾರಂಗತತ್ವರೂಪವಾದ ಮುಕ್ತತ್ವವು ಅನುಪಪನ್ನವಾಗುವುದಿಲ್ಲ.) (೩) (ಮುಕ್ತನಿಗೆ ಚಿನ್ಮಾತ್ರದೇಹಾದಿಗಳುಇವೆ ಎನ್ನುವಲ್ಲಿ ಶ್ರುತಿ ಹೇಳುತ್ತಾರೆ.) ಮುಕ್ತಿಯನ್ನು ಹೊಂದಿದವನಿಗೆ ಕೇವಲ ಚಿನ್ಮಾತ್ರ ಶರೀರವೇ ಇದೆ. ಚಿನ್ಮಾತ್ರಗಳಾದ ಇಂದ್ರಿಯಗಳು ಶ್ರೀಹರಿಯಿಂದ ಅನುಗ್ರಹೀತಗಳಾದ ಇಂದ್ರಿಯಗಳಿಂದಲೇ ಭೋಗಗಳನ್ನು ಅನುಭವಿಸುತ್ತಾನೆಂದು ಶ್ರುತಿಯು. ॥ ೫ ॥

## ೬ನೇ ಸಂಕಲ್ಪಾಧಿಕರಣವು

ಈ ಅಧಿಕರಣದಲ್ಲಿ ಮುಕ್ತರ ಭೋಗಗಳು ಆಯಾವ ಪ್ರಯತ್ನ ಸಾಧ್ಯಗಳಾದ ಸಾಧನಗಳಿಂದ ಸಾಧ್ಯಗಳೋ ಅಥವಾ ಸಂಕಲ್ಪ ಮಾತ್ರ ಸಾಧ್ಯವೋ ಎಂದು ಸಂಶಯವು ಬಂದರೆ—ಆಯಾವ ಪ್ರಯತ್ನ ಸಾಧ್ಯಗಳಾದ ಸಾಧನಗಳಿಂದ ಸಾಧ್ಯಗಳೆಂದು ಪೂರ್ವ ಪಕ್ಷವು. ಸಂಕಲ್ಪ ಮಾತ್ರ ಸಾಧ್ಯವೆಂತ ಸಿದ್ಧಾಂತವು. ಅದರಲ್ಲಿ ತದ್ಲೋಕಃ=ಶ್ರೀಹರಿಯ ಸ್ಥಾನವು ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.—

ಮೂ || ನ ಚ ಭಗವದ್ಲೋಕಸ್ಥಿತತ್ವಾನ್ಮುಕ್ತಸ್ಯ ತಸ್ಯಾನ್ಯೋಕಸ್ತ್ರಸಾಮ್ಯೇನ ತತ್ತದುಪಾಯಸಾಧ್ಯಭೋಗಸಾಧನತ್ವಂ ವಾಚ್ಯಂ || (೨) ನಿರ್ದೋಷತ್ವಾತ್ತದ್ಲೋಕಸ್ಯೋ ಮುಕ್ತಸ್ಯ ಚ ಸಂಕಲ್ಪಾದೇವೇತಿ ಶ್ರುತ್ಯುಕ್ತಾನುಸಾರೇಣೋಪಪತ್ತೇಃ || ೬ ||

ಅ || (೧) ಮುಕ್ತನು ಶ್ರೀ ಭಗವಂತನ ಸ್ಥಾನದಲ್ಲಿ ಇದ್ದುದರಿಂದ ಆ ಶ್ರೀಹರಿಯ ಲೋಕಕ್ಕೂ ಭೂಮ್ಯಾದಿಲೋಕಗಳ ಸಾಮ್ಯವಿದ್ದುದರಿಂದ ಮುಕ್ತನು ಆಯಾವ ಪ್ರಯತ್ನಾದಿರೂಪಗಳಾದ ಕಾರಣಗಳಿಂದ ಸಾಧ್ಯಗಳಾದ ಭೋಗಗಳ ಸಾಧನವುಳ್ಳವನು. (ಏವಂಚ ಮುಕ್ತಿಯೂ ಸಂಸಾರ ಸಮಾನ ಧರ್ಮವುಳ್ಳದ್ದಾದುದರಿಂದ ಪುರುಷಾರ್ಥವಲ್ಲ. ಎಂದರೆ) ಹಾಗೆ ಹೇಳಕೂಡದು. (ಏಕೆಂದರೆ ಅಸ್ತದೋಷಃ=(ದೋಷಲೇಶವಿಲ್ಲದಿರುವುದು,) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಭಗವಲ್ಲೋಕವೂ ಮುಕ್ತನೂ ನಿರ್ದೋಷನಾಗಿರುವುದರಿಂದ ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ ಎನ್ನುವ ಶ್ರುತಿಯಲ್ಲಿ ಹೇಳಿದ್ದನ್ನು ಅನುಸರಿಸಿ ಮುಕ್ತನಿಗೆ ಸಂಕಲ್ಪಮಾತ್ರ ಸಾಧ್ಯವಾದ ಭೋಗವೆನ್ನುವುದು ಉಪಪನ್ನವಾಗುತ್ತದೆ. (ಏವಂಚ ಭಗವಂತನ ಲೋಕವು ದೋಷಲೇಶರಹಿತವಾಗಿರುವುದರಿಂದ ಮುಕ್ತರ ಭೋಗವು ಸಂಕಲ್ಪ ಮಾತ್ರದಿಂದಲೇ ಸಾಧ್ಯವಾಗಿರುವುದರಿಂದ ಅದಕ್ಕೆ ಪುರುಷಾರ್ಥತ್ವವು ಯುಕ್ತವು) || ೬ ||

## ೭ನೇ ಅನನ್ಯಾಧಿಪತ್ಯಧಿಕರಣವು

ಈ ಅಧಿಕರಣದಲ್ಲಿ ಮುಕ್ತರಿಗೆ ಕ್ಲ್ಪ್ತರಾದನಿಯಾಮಕರಾದ ಸ್ತೋತ್ರವರಿಗಿಂತ ಇತರರಾದ ನಿಯಾಮಕರು ಇದ್ದಾರೋ. ಇಲ್ಲವೋ ಎಂದು, ಸಂಶಯವು ಬಂದರೆ—ಮುಕ್ತರಿಗೆ ಅಧಮರು ಕೂಡಾ ನಿಯಾಮಕರು ಇದ್ದಾರೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು ಅದರಲ್ಲಿ ತದ್ಲೋಕಃ=ಎಂದು ಹೇಳಿದ ಪೂರ್ವಪಕ್ಷನ್ಯಾಯವನ್ನೇ ವಿವರಿಸುತ್ತಾ ನಿರಾಕರಿಸುತ್ತಾರೆ.

ಮೂ || (೧) ನ ಚ ಪರಗೃಹಗತತ್ವಾದಸ್ಯ ರಾಜಗೃಹ ಗತಸ್ಯೇವ ಸ್ವಾಧಮಾ ಅಪಿ ಕದಾಚಿದೀಶತೇ | (೨) ನಿರ್ದೋಷತ್ವಾದೇವ ಮುಕ್ತಸ್ಯೇಶ್ವರಸ್ಯ ತತ್ರಸ್ಥಾನಾಂ ಚ ಮುಕ್ತಾಂತರಾಣಾಂಚ ರಾಜದೋಷವದ್ದೋಷಾಸಂಭವಾದ್ಯಥಾಯೋಗ್ಯಮೇವ ಸ್ವೀಕಾರೋಪಪತ್ತೇಃ || (೩) ಮುಕ್ತಾನಾಂ ಪತಯೋ ದೇವಾ ದೇವಾನಾಂ ಚ ಪ್ರಜಾಪತಿಃ | ತಸ್ಯ ವಿಷ್ಣುರ್ನಚೈವೇದಂ ಪಾರಾವರ್ಯಂ ವಿನಶ್ಯತೀತಿ ಚ ಶ್ರುತಿಃ || ೭ ||

ಅ || (೧) ರಾಜನ ಮನೆಯಲ್ಲಿದ್ದವನಿಗೆ ಅಧಮರೂ ಹೇಗೆ ನಿಯಾಮಕರಾಗಿರುತ್ತಾರೋ ಹಾಗೆಯೇ ಮುಕ್ತನೂ ಇನ್ನೊಬ್ಬನ ಮನೆಯಲ್ಲಿದ್ದುದರಿಂದ ಮುಕ್ತಿಯಲ್ಲಿ ತನಗಿಂತ ಅಧಮರೂ ಕೂಡ ಕದಾಚಿತ್

ನಿಯಾಮಕರಾಗಿರುತ್ತಾರೆ. (ಆದಕಾರಣ ಮುಕ್ತಿಯು ಸಂಸಾರಕ್ಕೆ ಸಮಾನವಾಗಿರುವುದರಿಂದ ಪುರುಷಾರ್ಥವಲ್ಲ ಎಂದರೆ) ಹಾಗೆ ಹೇಳಕೂಡದು. (೨) (ಏಕೆಂದರೆ ಅಸ್ತದೋಷಃ ಎನ್ನುವ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಭಗವಂತನ ಸ್ಥಾನದಲ್ಲಿರುವ ನಿಯಮ್ಯನಾದ ಮುಕ್ತನೂ, ಸರ್ವ ನಿಯಾಮಕನಾದ ಈಶ್ವರನೂ,ಮುಕ್ತಿಯಲ್ಲಿರುವ ಶ್ರೀಹರಿಯಿಂದ ನಿಯಮ್ಯರಾದ ಮುಕ್ತರೂಮುಕ್ತಾಂಶರರೂ ಸತ್ಯಸಂಕಲ್ಪರಾದುದರಿಂದ ಅಜ್ಞಾನ ವಿರುದ್ಧಕಾಮಾದಿ ದೋಷಲೇಶವಿಲ್ಲದಿರುವುದರಿಂದಲೇ ರಾಜನು ರಾಜನಮನೆಯಲ್ಲಿರುವಕರ್ಮಕರಿಯು,ಪ್ರತೀಹಾರಾದಿಗಳು ಇವರಲ್ಲಿ ಸ್ವಾರ್ಥಮನಿಯಮ್ಯತ್ವಾದಿದೋಷಗಳು ಇದ್ದಂತೆ ಮುಕ್ತರಿಗೆ ದೋಷಗಳು ಕೂಡದಿರುವುದರಿಂದ ಅಥವ ಉತ್ತಮ ಭಾವವನ್ನತಿಕ್ರಮಿಸದೇನೇ ನಿಯಮ್ಯ ನಿಯಾಮಕಭಾವಸ್ವೀಕಾರವು ಉಪಪನ್ನವಾಗುತ್ತದೆ. (೨) (ದೋಷವಿಲ್ಲವೆನ್ನುವಲ್ಲಿ ಪ್ರಮಾಣ ಹೇಳುತ್ತಾರೆ.) ಮುಕ್ತರಿಗೆ ಅಧಿಪತಿಗಳು ದೇವತೆಗಳು. ದೇವತೆಗಳಿಗೆ ಚತುರ್ಮುಖನು.ಚತುರ್ಮುಖನಿಗೆ ಶ್ರೀ ವಿಷ್ಣುವು. ಈ ಉತ್ತಮಾಧಮಭಾವವು ಯಾವಾಗಲೂ ನಷ್ಟವಾಗುವುದಿಲ್ಲ. ಎಂದು ಶ್ರುತಿಯು. (ಏವಂಚ ಮುಕ್ತರು ಶ್ರೀಭಗವಂತನ ಸ್ಥಾನದಲ್ಲಿದ್ದರೂ ನಿರ್ದೋಷರಾದುದರಿಂದ ಅಧಮನಿಯಮ್ಯತ್ವವಿಲ್ಲ ದಿರುವ ಪ್ರಯುಕ್ತ ಮುಕ್ತಿಯು ಪುರುಷಾರ್ಥವೆನ್ನುವುದು ಯುಕ್ತವು ) ॥ ೭ ॥

## ಅಭಾವಾಧಿಕರಣವು

೮ನೇ ಅಧಿಕರಣದಲ್ಲಿ ಮುಕ್ತರಿಗೆ ಭೋಗವು ಕೂಡುತ್ತದೋ ಇಲ್ಲವೋ, ಎಂದು ಸಂದೇಹವು ಬಂದರೆ ಕೂಡುವುದಿಲ್ಲವೆಂದು ಪೂರ್ವಪಕ್ಷವು. ಕೂಡುತ್ತದೆ ಎಂದು ಸಿದ್ಧಾಂತವು. ಅದರಲ್ಲಿ ಸಮಪ್ತ ಕಾರ್ಯಂ (ಎಲ್ಲಾ ಕಾರ್ಯವು) ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸುತ್ತಾ ನಿರಾಕರಿಸುತ್ತಾರೆ.

**ಮೂ ॥ (೧) ನ ಚ ದೇಹಭಾವೇ ತತ್ಕಾರ್ಯದುಃಖಾದಿಸ್ತದಭಾವೇ ಭೋಗಾಸಂಭವ ಇತಿ ದೋಷಃ (೨) ದೇಹಾಭಾವಾಚ್ಚ ಭಾವಾಚ್ಚ ನಿಭೋಗತ್ವಂ ಚ ದುಃಖಿತಾಂ । ಯಾಂತ್ಯಮುಕ್ತಾ ನೋಭಯಂ ಚ ಮುಕ್ತಾನಾಂ ವಶಿತಾ ಯತಃ। ಇತಿ ಶ್ರುತ್ಯೈವ ವಿಶೇಷಕ್ಲೃಪ್ತೇಃ ॥ ೮ ॥**

ಅ ॥ (೧) (ಶರೀರವಿದ್ದವನಿಗೆ ದುಃಖಾದಿಗಳು ನಿಯಮೇನ ಕಂಡುದರಿಂದ)ದೇಹವುಇದ್ದರೆ ತತ್ಕಾರ್ಯ ದುಃಖಾದಿಗಳು ಬರಬೇಕಾಗುವವು. ದೇಹವು ಇಲ್ಲವಾದರೆ ಭೋಗವು ಕೂಡಲಾರದು. (ಆದಕಾರಣ ಮೋಕ್ಷದಲ್ಲಿ ದುಃಖ ಮಿಶ್ರವಾಗದಿರುವ ಸುಖವು ಸಿಗದಿರುವುದರಿಂದ ಮೋಕ್ಷವು ಪುರುಷಾರ್ಥವಾಗದೆ ಹೋಗ ಬೇಕಾಗುವುದು.) ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ವಿಶೇಷಕ್ಲೃಪ್ತೇಃ ಎನ್ನುವ ಸಿಂದ್ಧಾಂತ ನ್ಯಾಯವನ್ನು ವಿವರಿಸುತ್ತಾರೆ.) ಪ್ರಳಯಾದಿಯಲ್ಲಿ ಶರೀರವಿಲ್ಲದಿರುವುದರಿಂದ ಭೋಗಾಭಾವವನ್ನೂ ಶರೀರ ವಿದ್ದಪ್ರಯುಕ್ತ ದುಃಖವನ್ನೂ ಅಮುಕ್ತರು ಹೊಂದುತ್ತಾರೆ. ಮುಕ್ತರು ಭೋಗಾಭಾವವನ್ನು, ದುಃಖವನ್ನೂ ಹೊಂದುವುದೇ ಇಲ್ಲ. (ಮುಕ್ತರಿಗೆ ದೇಹವಿದ್ದ ಪ್ರಯುಕ್ತ ಭೋಗಾಭಾವವು ಕೂಡದಿದ್ದರೂ ದುಃಖವು ಬರು ವುದು, ಎಂದರೆ,ಮುಕ್ತರಿಗೆ ಪ್ರಕೃತಿಯು ಅಧೀನವ ಗಿದೆ. (ಅಂದರೆ ಮುಕ್ತರಿಗೆ ಪ್ರಕೃತಿಯು ಅಧೀನವಾಗಿರುವು ದರಿಂದ ಮುಕ್ತರು ಜಡ ಪ್ರಕೃತ್ಯಧೀನರಾಗದಿರುವುದರಿಂದ ಅಗ್ನಿ ಸ್ತಂಭನಾದಿಗಳನ್ನು ಮಾಡಿರುವ ಪುರುಷನಿಗೆ ಅಗ್ನಿಯ ಸಂಪರ್ಕದಿಂದ ದುಃಖವು ಹುಟ್ಟದಿರುವಂತೆ ಮುಕ್ತರಿಗೆ ದೇಹವಿದೆ ಎಂದಂಗೀಕರಿಸಿದರೂ ದುಃಖಾ ಭಾವವು ಕೂಡುತ್ತದೆ) ಏವಂಚ ಶ್ರುತಿಯಿಂದಲೇ ವಿಶೇಷಕ್ಲೃಪ್ತಿಯಿದ್ದುದರಿಂದ ಮೋಕ್ಷವುಪುರುಷಾರ್ಥವು. ॥ ೮ ॥

## ಜಗದ್ವ್ಯಾಪಾರಾಧಿಕರಣವು

೯ನೇ ಅಧಿಕರಣದಲ್ಲಿ ಮುಕ್ತರು ಸತ್ಯಸಂಕಲ್ಪರಾದುದರಿಂದಲೂ ಜಗತ್ಸೃಷ್ಟ್ಯಾದಿಗಳು ಭಗವದ್ಧರ್ಮಗಳೆಂದು ಹೇಳಿದುದರಿಂದಲೂ ಮುಕ್ತರು. ಜಗತ್ಸೃಷ್ಟಿ ಮೊದಲಾದ ವ್ಯಾಪಾರಗಳನ್ನು ಹೊಂದುತ್ತಾರೋ ಇಲ್ಲವೋ, ಎಂದು ಸಂದೇಹವು ಬಂದರೆ—ಹೊಂದುತ್ತಾರೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ ಸಮಸ್ತ ಕಾರ್ಯಂ = (ಸೃಷ್ಟ್ಯಾದಿ ನಿಖಿಲ ಕಾರ್ಯವು,) ಎಂಬ ಪೂರ್ವಪಕ್ಷ ನ್ಯಾಯವನ್ನೇ ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚ ಸಂಕಲ್ಪಾದೇವ ಸಮಸ್ತಸಂಭವಾತ್ಸೃಷ್ಟ್ಯಾದಿ ಸಮಸ್ತಕಾರ್ಯಸಂಭವಃ। (೨) ವ್ಯಾಪಾರೋ ಜಗತೋ ವಿಷ್ಣೋರ್ಮುಕ್ತಾನಾಂ ತು ಸ್ವಭೋಗಗಃ । ನ ಹಿ ಸ್ವರ್ಣಂ ಶುದ್ಧಮಪಿ ವಹ್ನಿಕಾರ್ಯಕರಂ ಭವೇತ್ ॥ ಅಯೋಗ್ಯಾಶಕ್ತಿತಶ್ಚೈವ ನಾಧಿಕಾನಂದಸಂಭವಃ । ನ ಹಿ ಕಶ್ಚಿತ್ಸುಶಕ್ತೋऽಪಿ ಚಕಾರಾಚೇತನಂ ಚಿತಿಂ ॥ ನ ಚ ಕಾಮಸ್ತಥಾ ಭೂಯಾತ್ತತಃ ಸಾ ಸತ್ಯಕಾಮತೇತಿ ಶ್ರುತ್ಯಾ ವಿಶೇಷಕ್ಲೃಪ್ತೇರೇವ ॥ (೩) ಮುಕ್ತಾನಾಂ ನ ಜಗದ್ಯತ್ನಃ ತಥಾಪಿ ವಿಬುಧಾಸ್ಸದಾ । ಮುಕ್ತಾನಾಂ ತು ನಿಯಂತಾರಸ್ತೇಷಾಂ ಬ್ರಹ್ಮಾऽಸ್ಯ ವೈ ಹರಿರಿತಿ ವಿಶೇಷಕ್ಲೃಪ್ತಿಃ ॥ ೯ ॥

ಅ ॥ (೧) ಮುಕ್ತರು ಸತ್ಯಸಂಕಲ್ಪರಾದುದರಿಂದ ಅವರಿಗೆ ಇಷ್ಟವಾದ ಸಮಸ್ತ ವಸ್ತುಗಳ ಪ್ರಾಪ್ತಿಯೂ ಕೂಡುತ್ತದೆ. ಆದುದರಿಂದ ಜಗತ್ಸೃಷ್ಟ್ಯಾದಿ ಸಮಸ್ತ ವ್ಯಾಪಾರಗಳೂ ಮುಕ್ತರಿಗೆ ಕಾಮ್ಯಗಳಾಗಿರುವುದರಿಂದ ಜಗತ್ಸೃಷ್ಟ್ಯಾದಿ ಸಮಸ್ತ ಕಾರ್ಯಗಳೂ ಕೂಡುತ್ತವೆ. (ಆದುದರಿಂದ ಲಕ್ಷಣ ಸೂತ್ರವು ಯುಕ್ತವಲ್ಲ, ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ—ವಿಶೇಷಕ್ಲೃಪ್ತಿಃ ಎಂಬ ಸಿದ್ಧಾಂತ ನ್ಯಾಯವನ್ನೇ ವಿವರಿಸುತ್ತಾರೆ.) ಶ್ರೀ ವಿಷ್ಣು ಕರ್ತೃಕವಾದ ಜಗದ್ವಿಷಯಕ ಸೃಷ್ಟ್ಯಾದಿ ವ್ಯಾಪಾರವು ಮುಕ್ತರಿಗಾದರೂ ತಮ್ಮ ಭೋಗ ವಿಷಯಕವೇ ಸರಿ. (ಅಂದರೆ ಮುಕ್ತರಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರವು ಇಲ್ಲ ) ಏಕೆಂದರೆ ಸುವರ್ಣವು ಶುದ್ಧವಾದಾಗ್ಯೂ ಅಯೋಗ್ಯದಲ್ಲಿ ಶಕ್ತಿಯಿಲ್ಲದಿರುವುದರಿಂದ ವಹ್ನಿ ಕಾರ್ಯವಾದ ಪ್ರಕಾಶದಾಹಾದಿ ಕಾರ್ಯಗಳನ್ನು ಮಾಡತಕ್ಕದು ಆಗಲಾರದು. ಅಯೋಗ್ಯ ಕಾರ್ಯದಲ್ಲಿ ಶಕ್ತಿಯಿಲ್ಲದಿರುವುದರಿಂದಲೇ (ಅಂದರೆ ಅಯೋಗ್ಯ ಕಾರ್ಯವನ್ನು ಮಾಡಲಿಕ್ಕೆ ಯೋಗ್ಯತೆಯು ಇಲ್ಲದಿರುವುದರಿಂದಲೇ) ತನ್ನ ಯೋಗ್ಯತೆಗಿಂತ ಅಧಿಕವಾದ ಆನಂದವೂ ಜಗತ್ಸೃಷ್ಟ್ಯಾದಿ ವ್ಯಾಪಾರವೂ ಕೂಡಲಾರದು. ಯಾವನೂ ಅತಿಶಕ್ತನಾದಾಗ್ಯೂ ಜಡವನ್ನು ಚೇತನವನ್ನಾಗಿ ಮಾಡಲಿಲ್ಲ. ಅಯೋಗ್ಯವಾದ ಕಾಮವೇ ಬರಲಾರದು. ಆದುದರಿಂದಲೇ ಸತ್ಯ ಕಾಮತ್ವವೂ ಮುಕ್ತರಿಗೆ ಕೂಡುತ್ತದೆ, ಎನ್ನುವ ಶ್ರುತಿಯಿಂದ ವಿಶೇಷ ಕ್ಲೃಪ್ತಿಯೇ ಇದೆ (೩) ಯದ್ಯಪಿ ಮುಕ್ತರಿಗೆ ಜಗತ್ಸೃಷ್ಟಿ ವಿಷಯಕ ಪ್ರಯತ್ನವೇ ಇಲ್ಲ. ಆದರೂ ಯಾವಾಗಲೂ ದೇವತೆಗಳು ಮುಕ್ತರಿಗೆ ನಿಯಾಮಕರೇ. ದೇವತೆಗಳಿಗೆ ಚತುರ್ಮುಖನು ನಿಯಾಮಕನು ಆತನಿಗೆ ಶ್ರೀ ಹರಿಯು ನಿಯಾಮಕನು. ಎಂದೂ ಸ್ವಾವರ ನಿಯಾಮಕತ್ವ ವಿಷಯದಲ್ಲಿಯೂ ವಿಶೇಷ ಕ್ಲೃಪ್ತಿಯಿದೆ. (ಆದಕಾರಣ ಮುಕ್ತರಿಗೆ ಜಗದ್ವ್ಯಾಪಾರವಿಲ್ಲದಿರುವುದರಿಂದ ಲಕ್ಷಣ ಸೂತ್ರವು ಯುಕ್ತವೇ) ॥ ೯ ॥

## ಸ್ಥಿತ್ಯಧಿಕರಣವು

೧೦ನೇ ಸ್ಥಿತ್ಯಧಿಕರಣದಲ್ಲಿ ಮುಕ್ತರಿಗೆ ಆನಂದಾದಿಗಳ ವೃದ್ಧಿಹ್ರಾಸವಿದೆಯೋ ಇಲ್ಲವೋ ಎಂದು

ಸಂಶಯವು ಬಂದರೆ ವೃದ್ಧಿಹ್ರಾಸಾದಿಗಳು ಇವೆ ಎಂದು ಪೂರ್ವಪಕ್ಷವು, ಇಲ್ಲವೆಂದು ಸಿದ್ಧಾಂತವು. ಆದರಲ್ಲಿ ವಶಿತಾ ಎನ್ನುವ ಪೂರ್ವಪಕ್ಷ ನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ।(೧) ನ ಚ ವಶಿತ್ವಾನ್ಮುಕ್ತಸ್ಯಾಪಿ ವೃದ್ಧಿಃ (೨) ಕೃತಕೃತ್ಯತ್ವೇನ ನಿಃಶ್ರಮತ್ವಾದುಪಾಸನಾದಾವಭ್ಯಾಸ ಪಾಟವಾನ್ನಿರ್ದೋಷತ್ವಾತ್ಸ್ನೇಹಾಧಿಕ್ಯಾಚ್ಚ । ತಸ್ಯೈವ ಪರಮಸುಖರೂಪತ್ವೇನ ಫಲರೂಪತ್ವಾತ್ । (೩)ಅಭ್ಯಾಸಪಾಟವಾತ್ಸ್ನೇಹಾದಶ್ರಮತ್ವಾದುಪಾಸನಾ। ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ ॥ ಇತಿ ಚ ಶ್ರುತಿಃ ॥ ೧೦ ॥

ಅ ॥ (೧) ಮುಕ್ತರು ಸರ್ವವನ್ನೂ ತಮ್ಮ ಅಧೀನದಲ್ಲಿಯೇ ಇಟ್ಟುಕೊಂಡಿರುವವರಾದುದರಿಂದ ಕಾಮಿತಗಳಾದ ಎಲ್ಲಾ ವಸ್ತುಗಳ ಪ್ರಾಪ್ತಿಯೂ ಆನಂದಾದಿಗಳವೃದ್ಧಿಯೂ ಇಷ್ಟವಾಗಿರುವುದರಿಂದ ಕಾಮನಾ (ಇಷ್ಟ)ವಿಲ್ಲವೆನ್ನುವುದು ಕೂಡದಿರುವುದರಿಂದ ಆನಂದಾದಿಗಳ ಅಭಿವೃದ್ಧಿಯೂ ಯುಕ್ತವೇ (ಏವಂಚ ಮುಕ್ತರಿಗೂ ವೃದ್ಧ್ಯಾದಿಗಳು ಇದ್ದುದರಿಂದ ಮುಕ್ತಿಯೂ ಸಂಸಾರ ಸಮಾನ ಧರ್ಮವುಳ್ಳದ್ದಾದುದರಿಂದ ಪುರುಷಾರ್ಥವಲ್ಲ. ಎಂದರೆ ಹಾಗೆ ಹೇಳಕೂಡದು. (೨) (ಏಕೆಂದರೆ ಕೃತನಿಶ್ಕ್ರಮಃ (ರಾಗಾದಿ ದೋಷವಿಲ್ಲದಿರುವಿಕೆ) ಎನ್ನುವ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ.) ಮುಕ್ತನು ಕೃತಕೃತ್ಯನಾದುದರಿಂದ ಯೋಗ್ಯವಾದುದೆಲ್ಲವೂ ಪ್ರಾಪ್ತವಾಗಿರುವುದರಿಂದ ತದ್ವಿಷಯಕ ಶ್ರಮವು ಇಲ್ಲ. (**ನ ಚಾಯೋಗ್ಯಂ ಮುಕ್ತಿಗೋಽಪಿ ಪ್ರಾಪ್ತುಂ ಯಾನ್ನ ಚ ಕಾಮಯೇತ್** ಎನ್ನುವ ಪ್ರಮಾಣದಿಂದ ಮುಕ್ತನಿಗೆ ಅಯೋಗ್ಯ ಕಾಮನೆಯನ್ನು ನಿಷೇಧಿಸಿದುದರಿಂದ) ಅಂತಹ ಕಾಮನೆಯೇ ಇಲ್ಲವಾದುದರಿಂದ ಅಯೋಗ್ಯ ಫಲದಲ್ಲಿ ರಾಗಾದಿದೋಷಗಳು ಇಲ್ಲ. ಮುಕ್ತನು ಕೃತಕೃತ್ಯನಾದುದರಿಂದ ಉಪಾಸನಾದಿ ವಿಷಯದಲ್ಲಿ ಶ್ರಮಾದಿ ದೋಷಗಳು ಇಲ್ಲದಿರುವುದರಿಂದ ಉಪಾಸನಾದಿಗಳು ಸಾಧನರೂಪಗಳಾಗದೆ ಇದ್ದರೂ ಅವುಗಳು ಮುಕ್ತರಿಂದ ಮಾಡಲ್ಪಡುತ್ತವೆ. (ಮುಕ್ತರಿಗೆ ಶ್ರಮವಿಲ್ಲದಿದ್ದರೆ ಬೇರೆ ಕಾರ್ಯಗಳನ್ನು ಮಾಡದೆ ಉಪಾಸನಾದಿಗಳನ್ನು ಮಾಡಲಿಕ್ಕೆ ಏನು ಕಾರಣವು ಎಂದರೆ) ಉಪಾಸನಾದಿಗಳಲ್ಲಿ ಅಭ್ಯಾಸಾಧಿಕ್ಯವಿದೆ ನಿರ್ದೋಷಿಗಳಾಗಿರುವುದರಿಂದ (ಸಂಸಾರ ಕಾಲದಲ್ಲಿ ಅಭ್ಯಸ್ತವಾದ ನಿಷಿದ್ಧ ಕರ್ಮಗಳನ್ನು ಮಾಡುವುದಿಲ್ಲ.) ವಿಷ್ಣುವಿನಲ್ಲಿಯೇ ಸ್ನೇಹಾಧಿಕ್ಯವಿದ್ದುದರಿಂದ ಉಪಾಸನಾದಿಗಳುಸಾಧನರೂಪಗಳಾಗದೆಇದ್ದರೂ ಪರಮಸುಖರೂಪವಾಗಿರುವುದರಿಂದಫಲರೂಪವಾಗಿವೆ.(೩) ಮುಕ್ತರಿಗೆ ಉಪಾಸನಾದಿಗಳಲ್ಲಿ ಅಭ್ಯಾಸಾಧಿಕ್ಯವಿದ್ದುದರಿಂದಲೂ, ಶ್ರೀಹರಿಯಲ್ಲಿ ಪರಮಭಕ್ತಿ ಇದ್ದುದರಿಂದಲೂ ಅಯೋಗ್ಯದಲ್ಲಿ ರಾಗಾದಿದೋಷಗಳು ಇಲ್ಲದಿರುವುದರಿಂದಲೂ ಭಗವದುಪಾಸನೆಯೂ ಭಕ್ತಿಯೂಸುಖರೂಪವೇ ಆಗಿದೆ. ಸಾಧನರೂಪವಲ್ಲ ಎಂದೂ ಶ್ರುತಿಯಿದೆ. (ಏವಂಚ ಮುಕ್ತರಿಗೆ ರಾಗಾದಿದೋಷಗಳಿಲ್ಲದಿರುವುದರಿಂದ ವೃದ್ಧ್ಯಾದಿಗಳು ಇಲ್ಲ. ಆದ ಕಾರಣ ಮೋಕ್ಷವು ಪುರುಷಾರ್ಥವೆನ್ನುವುದು ಯುಕ್ತವು। ॥ ೧೦ ॥

## ಅನಾವೃತ್ತ್ಯಧಿಕರಣ

ಈ ೧೧ನೇ ಅಧಿಕರಣದಲ್ಲಿ ಮುಕ್ತನು ಪುನಃ ಹಿಂದೆ ತಿರುಗಿ ಜನನ ಮರಣಾದಿರೂಪ ಸಂಸಾರವನ್ನು ಹೊಂದುತ್ತಾನೋ ಇಲ್ಲವೋ ಎಂದು ಸಂಶಯವು ಬಂದರೆ ಸಂಸಾರವನ್ನು ಹೊಂದುತ್ತಾನೆಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು.ಅದರಲ್ಲಿ ವಿಶ್ವಸಂಭಾವನಾ(ಸಮಸ್ತಕಾಲಕ್ಕೆ ಸಮಾಪ್ತಿ ಸಂಭಾವನೆಯು) ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿಕೊಂಡು ನಿರಾಕರಿಸುತ್ತಾರೆ.

ಮೂ ॥ (೧) ನ ಚಾನಂತತ್ವಾತ್ಕಾಲಸ್ಯ ತ್ರಯೋದಶೀ ಪಂಚದಶೀ ವತ್ಕದಾಚಿತ್ಸಮಸ್ತಸ್ಯಾಪಿ ಸಂಭವಾನ್ಮುಕ್ತಸ್ಯಾಪಿ ಪುನರಾವೃತ್ತ್ಯಾಶಂಕೇತಿ ವಾಚ್ಯಂ ॥ (೨) ಸತ್ಯಕಾಮತ್ವಾದಿ

ಮಾಹಾತ್ಮ್ಯಾತ್ । (೩) ಅಶೇಷಕಾಮಸತ್ಯತ್ವಾನ್ಮುಕ್ತಾನಾಮಪುನರ್ಭವಃ । ಯಸ್ಮಾತ್ಸ ಕಾಮಯೇದೇವ ನಿತ್ಯಮಾತ್ಮ್ಯಾಪುನರ್ಭವಂ॥ ಇತಿ ಚ ಶ್ರುತಿಃ ॥ ೧೧ ॥

ಅ ॥ (೧) ಯದ್ಯಪಿ ಸ್ವರ್ಗಲೋಕಾದಿಗಳಲ್ಲಿರತಕ್ಕವರು ಯುಗ ಮನ್ವಂತರಾದಿಕಾಲಗಳಲ್ಲಿ ಮಾತ್ರ ಆವಾಸ ಮಾಡುವವರಾದುದರಿಂದ ತಿರುಗಿ ಅಲ್ಲಿಂದ ಅವರು ವಾಪಾಸು ಬಂದರೂ ಮುಕ್ತರು. ಸಮಸ್ತ ಕಾಲ ಗಳಲ್ಲಿಯೂ ಆವಾಸ ಮಾಡುವವರಾದುದರಿಂದ ಅವರಿಗೆ ಪುನರಾವೃತ್ತಿಯು ಕೂಡಲಾರದು. ಆದರೂ ಭಾರತಯುದ್ಧದಲ್ಲಿ ತ್ರಯೋದಶೀ ತಿಥಿಗೇನೇ (೧೩ ದಿವಸಗಳಿಗೇನೇ) ಪಂಚದಶೀತ್ವವನ್ನು (೧೫ ದಿವಸ ಗಳಾಗುವಿಕೆಯನ್ನು) (ಅಂದರೆ ೧೩ ದಿವಸಗಳಲ್ಲಿಯೇ ೧೫ ದಿನಗಳು ಮುಗಿದ ಹಾಗೆಯೇ.) ನಿರ್ದೇಶ ಮಾಡಿದುದರಿಂದ ಆ ದಿನದಲ್ಲಿ (೩) ಮೂರು ತಿಥಿಗಳು ಏಕಕಾಲದಲ್ಲಿ ಸಮಾಪ್ತಿಯಾಗುವಂತೆ ಕಾಲವು ಅನಂತವಾದುದಾಗ್ಯೂ ಸಮಸ್ತಕಾಲಕ್ಕೂ ಏಕಕಾಲದಲ್ಲಿ ಕದಾಚಿತ್ ಸಮಾಪ್ತಿಯು ಕೂಡುವುದರಿಂದ ಮುಕ್ತ ನಿಗೂ ಪುನರಾವೃತ್ತಿಯು ಕೂಡಬಹುದು. ಎಂದಾ ಶಂಕೆಯು. (ಏವಂಚ ಸಮಸ್ತಕಾಲವೂ ಸಮಾಪ್ತಿ ಯಾಗಬಹುದೆನ್ನುವ ಸಂಭಾವನೆಯಿಂದ ಮುಕ್ತನೂ ಪುನಃ ತಿರುಗಿ ಬರುವನು ಎಂದಾಶಂಕೆಯು), ಎಂ ದರೆ ಹಾಗೆ ಹೇಳಕೂಡದು (೨) ಏಕೆಂದರೆ ಮಾಹಾತ್ಮ್ಯಂ ಎಂದು ಹೇಳಿದ ಸಿದ್ಧಾಂತನ್ಯಾಯವನ್ನು ವಿವ ರಿಸುತ್ತಾರೆ.) ಮುಕ್ತನಿಗೆ ಸತ್ಯಕಾಮತ್ವ ಸಮಸ್ತಕಾಮಗಳ ಪ್ರಾಪ್ತಿ, ಮೊದಲಾದ ಮಹಿಮೆಗಳು ಇವೆ. (೩) ಮುಕ್ತರ ಎಲ್ಲಾ ಕಾಮಗಳೂ ಸತ್ಯಗಳೇ ಆದುದರಿಂದ ಅವರಿಗೆ ಪುನರುತ್ಪತ್ತಿಯು ಇಲ್ಲ. ಯಾವ ಕಾರಣ ದಿಂದ ಮುಕ್ತವರ್ಗವು ನಿತ್ಯದಲ್ಲಿಯೂ ಕಾಮಿಸುತ್ತದೆಯೋ ಸರಿ(ಕದಾಚಿತ್ ಕಾಮಿಸುವುದಿಲ್ಲವೆಂದಿಲ್ಲ) ಆತ್ಮನು ಪುನರುತ್ಪತ್ತಿಯಿಲ್ಲದವನು ಎಂದೂ ಶ್ರುತಿಯು. (ಏವಂಚ ಮುಕ್ತರಿಗೆ ಸತ್ಯಕಾಮತ್ವ ಮೊದಲಾದ ಮಹಿ ಮೆಯು ಇದ್ದುದರಿಂದ ಪುನಾರಾವೃತ್ತಿಕಾಮನೆಯೇ ಇಲ್ಲದಿರುವುದರಿಂದ ಪುನರಾವೃತ್ತಿಯಿಲ್ಲದಿರುವ ಪ್ರಯುಕ್ತ ಮೋಕ್ಷವು ಪುರುಷಾರ್ಥವೆನ್ನುವುದು ಯುಕ್ತವೇ) ॥ ೧೧ ॥

ಈಗ ತನ್ನ ಗ್ರಂಥದಲ್ಲಿಯೂ ಅದಕ್ಕೆ ಮೂಲಭೂತವಾದ ನ್ಯಾಯಗ್ರಥನಾತ್ಮಕವಾದ ಸೂತ್ರರೂಪ ಮೀಮಾಂಸಾಶಾಸ್ತ್ರದಲ್ಲಿಯೂ ಶಿಷ್ಯರಿಗೆ ಬಹುಮಾನಾತಿಶಯವು ಹುಟ್ಟುವುದಕ್ಕಾಗಿ ತಾನು ಮಾಡಿದ ಗ್ರಂ ಥವು ಅನನ್ಯಸಾಧ್ಯವೂ ಅತಏವ ವ್ಯಾಖ್ಯೇಯವಾದ ಮೀಮಾಂಸಾಶಾಸ್ತ್ರವು ದುರವಗಾಹ್ಯವು, ಇತ್ಯಾದಿ ಮಹಿಮೆಗಳನ್ನು ಹೇಳುತ್ತಾ ತನ್ನ ಗ್ರಂಥಕ್ಕೆ ಪ್ರಯೋಜನವನ್ನು ಹೇಳುತ್ತಾರೆ.

ಮೂ ॥ (೧) ಇತ್ಯನಂತಮಹಾನ್ಯಾಯಮೀಮಾಂಸಾಪಾರವಾರಿಧೇಃ । ಉತ್ತಾರಣಾಕ್ಷಶಕ್ತ್ಯೈವ ವ್ಯಾಕುಲೀಭೂತಚೇತಸಾಂ ॥ ಮಂದಾನಾಮುಪಕಾರಾಯ ಮಹತಾಂ ಚೋಪ್ಚ್ರಿತಾತ್ಮನಾಂ । ತದ್ವಿಶೇಷಪರಿಜ್ಞಾನಪ್ರದೀಪ್ತಾಕರ್ಣಭಚೇತಸಾಂ ॥ ವಿಶೇಷಗಾಢೇ ಮನಸಿ ನಿತರಾಂ ಚೋಪಕಾರಕಃ । ನ್ಯಾಯಪ್ಲವೋ ಮಯಾಕಾರಿ ಸಂಕ್ಷೇಪಾತ್ಪ್ರಮಿತಾಕ್ಷರೈಃ ॥ ೩ ॥ (೨) ವಿಸ್ತರೋಽಪ್ಯಯಮೇವ ಸ್ಯಾತ್ತದ್ವಿಶೇಷಾತಿ ವೇದಿನಾಂ । ವ್ಯಾಖ್ಯಾನುವ್ಯಾಖ್ಯಯೋರೇವ ವಿಸ್ತರೋ ಽಯಮುದೀರಿತಃ ॥ ಅನಲ್ಪ ಚೇತಸಾಂ ಪುಂಸಾಮಲಂ ವಿಜ್ಞಾನಸಿದ್ಧಯೇ ॥ (೩) ತನ್ನ್ಯಾಯೋದ್ಧರಣೇ ಶಕ್ತಾ ಅಪಿ ಹ್ಯೇಕೇನ ಸುಸ್ಥಿರಂ।ನ್ಯಾಯಾನುಗಂ ಮನಃ ಕುರ್ಯುರ್ಗ್ರತಿಸಂಗ್ರಹ ಲಾಲಸಾಃ। (೪) ಕೋ ನಾಮಾಶೇಷವಿದ್ಯೋರುಸಾಗರೋನ್ಮಥನೋದ್ಧೃತಂ । ಸುಕ್ಷ್ಮಾದ್ವಿದ್ಯಾಧಿರಾಜೇನ ನ್ಯಾಯಾಮೃತಮನುತ್ತಮಂ ॥ ಅಶೇಷತೋಽಧಿಗಚ್ಛೇತ ಮಂದ್ಯೋ

ವೃಂದಾರಕೋಽಪಿ ಸನ್ ॥ (೫) ಏವಂ ಸುದುರ್ಲಭೇಽಪ್ಯದ್ಧಾ ಮಹಾನ್ಯಾಯಪರ
ಮೃತೇ । ಕೇಚನಾಧಿಕ್ರಿಯಂತೇ ಚ ತತ್ಪ್ರಸಾದಾನುರಂಜಿತಾಃ । ಬ್ರಹ್ಮಾದ್ಯಾ
ಅಮೃತೇ ಯದ್ವತ್ಸಾಗರೋನ್ಮಥನೋದ್ಧೃತೇ ॥ (೬) ಅಹಂ ತು ತತ್ಪ್ರಸಾದೈಕ
ಮಹಾಸ್ಪದ ಬಲೋದ್ಧತಃ। ನ್ಯಾಯಾಮೃತಾರ್ಣವಸಿ ಮಮ ವಗಾಹ್ಯ ವಿಭಜ್ಯ ಚ।
ಸಂಕ್ಷೇಪವಿಸ್ತರಾಭ್ಯಾಂ ಚ ಚಕಾರ ವ್ಯಾಕೃತಿಂ ಕೃತಿಂ । (೭) ತತ್ಪ್ರಸಾದಾಮೃತೇ
ಕಸ್ಯ ಶಕ್ತಿಃ ಸಂಸಾರಸಾಗರೇ । ಮಗ್ನಸ್ಯ ಚೇತನಸ್ಯ ಸ್ಯಾತ್ತತ್ಕೃತಾನುಕೃತೌ ಕ್ವಚಿತ್॥
ನಿತ್ಯಾನಂದಾಮೃತಸ್ಯಂದಿ ತತ್ಕಟಾಕ್ಷೈಧಿ ,ತಸ್ಯತು । ಕಾ ನು ಶಕ್ತಿರ್ಭವೇನ್ನೈವ ತತಃ
ಕೋಽತ್ರಾತಿವಿಸ್ಮಯಃ ॥ (೮) ವಿದ್ಯಾವಿದ್ಯೇ ಸುಖಂ ದುಃಖಮುಕ್ತಿಃ ಶಕ್ತಿರೇವಚ
ಉತ್ಪತ್ತಿಸ್ಥಿತಿನಾಶಾಶ್ಚ ವಿಶೇಷಾಶ್ಚಾಪರೇಽಖಿಲಾಃ । ಚೇತನಾಚೇತನಸ್ಯಾಸ್ಯ ಸಮ
ಸ್ತಸ್ಯ ಯದಿಚ್ಛಯಾ ॥ ಸ ಮಮ ಸ್ವಕೃತೇನೈವ ಪ್ರೀಯತಾಂ ಪುರುಷೋತ್ತಮಃ ॥

ಅ ॥ (೧) ಹಿಂದೆ ಹೇಳಿದ ಪ್ರಕಾರ ಎಣಿಸಲಶಕ್ಯವೂ ವ್ಯಾಪ್ತ್ಯಾದಿಗಳುಳ್ಳದ್ದೂ, ಬಹ್ವರ್ಥಗಳದ್ದುದರಿಂದ ದುರವಗಾಹ್ಯವೂ ಆದ ನ್ಯಾಯ ಪ್ರತಿಪಾದಕ ಮೀಮಾಂಸಾ ಎಂಬ ಸಮುದ್ರವನ್ನ ವ್ಯಾಖ್ಯಾನಾದಿಗಳನ್ನು ಮಾಡುವ ವಿಷಯದಲ್ಲಿ ಅತ್ಯಶಕ್ತಿಯಿಂದಲೇ ಸಂಭ್ರಾಂತವಾದ ಮನಸ್ಸುಳ್ಳ, ಅಲ್ಪಜ್ಞಾನಿಗಳ ಉಪಕಾರಕ್ಕೂ, ಬಹುವಿಷಯ ಜ್ಞಾನಸಾಧನ ಮನಸ್ಸುಳ್ಳ, ನ್ಯಾಯಪ್ಲವದಿಂದುಂಟಾದ ವಿಶೇಷ ಜ್ಞಾನದಿಂದ ಮಧ್ಯಾಹ್ನ ಸೂರ್ಯನಿಗೆ ಸದೃಶವಾದ ಮನಸ್ಸುಳ್ಳ, ಜ್ಞಾನಿಗಳ ಮನಸ್ಸು ಮೀಮಾಂಸಾ ಎಂಬ ಅಪಾರ ಸಮುದ್ರದಲ್ಲಿ ವಿಶೇಷವಾಗಿ ಮಗ್ನವಾಗಲು ಅವರ ವಿಶೇಷ ಜ್ಞಾನಕ್ಕೆ ಕಾರಣವಾಗಿರುವುದರಿಂದ ಅತ್ಯಂತವಾಗಿ ಉಪಕಾರಕವಾದ ನ್ಯಾಯಮಾಲಾರೂಪವಾದ ಗ್ರಂಥವು ಸಂಕ್ಷೇಪವಾಗಿ ಪ್ರಮಿತಾಕ್ಷರಗಳಿಂದ (ಅಲ್ಪಾಕ್ಷರಗಳಿಂದ ಕೂಡಿದ ಒಂದು ಪದಾದಿಗಳಿಂದಲೇ ಪೂರ್ವಪಕ್ಷ ನ್ಯಾಯ ಸಿದ್ಧಾಂತನ್ಯಾಯಗಳನು ಪ್ರತಿಪಾದಿಸುವವುಗಳು. ಮತ್ತು ಅನೇಕಾಧಿಕರಣ ಸಂಬಂಧಿ ನ್ಯಾಯಗಳನ್ನು ಪ್ರತಿಪಾದಿಸುವವುಗಳು.) ನನ್ನಿಂದ ಮಾಡಲ್ಪಟ್ಟಿತು. (೨) ಯದ್ಯಪಿ ನ್ಯಾಯವಿಶೇಷವನ್ನು ಹೆಚ್ಚು ತಿಳಿದವಂಗೆ ಈ ನ್ಯಾಯಮಾಲಾ ಗ್ರಂಥವೇ ವಿಸ್ತರವಾಗುವುದೋ, ಯಾವ ಕಾರಣದಿಂದ ಭಾಷ್ಯ ಅನುವ್ಯಾಖ್ಯಾನಗಳಲ್ಲಿಯೇ ನ್ಯಾಯ ಪ್ರಪಂಚನ ರೂಪವಾದ ವಿಸ್ತರವಿದೆಯೋ, ಆದಕಾರಣ ಆ ಭಾಷ್ಯ ಅನುವ್ಯಾಖ್ಯಾನಗಳಿಂದ ನ್ಯಾಯ ವಿಶೇಷ ಜ್ಞಾನವುಂಟಾಗುತ್ತದೆ. ಆದಾಗ್ಯೂ ಹೆಚ್ಚು ಜ್ಞಾನವುಳ್ಳವರಿಗೆ ಅತಿಶಯವಾಗಿ ವಿಶೇಷ ಜ್ಞಾನವು ಸಿದ್ಧಿಯಾಗುವುದಕ್ಕಾಗಿ ನ್ಯಾಯವಿವರಣರೂಪವಾದ ವಿಸ್ತರ ಗ್ರಂಥವು ತನ್ನಿಂದ ಮಾಡಲ್ಪಟ್ಟಿದೆ. (ಅಲ್ಪ ಜ್ಞಾನಿಗಳಿಗೆ ವಿಸ್ತಾರ ಮಾಡದಿದ್ದರೆ ಜ್ಞಾನವೇ ಬರಲಾರದು. ಆದಕಾರಣ ನ್ಯಾಯ ವಿವರಣ ಗ್ರಂಥ ಕರಣವು ಆವಶ್ಯಕವೇ.) (೩) (ಭಾಷ್ಯ ಅನುವ್ಯಾಖ್ಯಾನಗಳಲ್ಲಿಯೇ ನ್ಯಾಯಗಳ ವಿಸ್ತರವು ಹೇಳಲ್ಪಟ್ಟಿದ್ದರೆ ಭಾಷ್ಯ ಅನುವ್ಯಾಖ್ಯಾನಗಳಿಂದಲೇ ಜ್ಞಾನವುಂಟಾಗುವುದರಿಂದ ನ್ಯಾಯಮಾಲಾರೂಪಸಂಗ್ರಹಸೇ ವ್ಯರ್ಥವು. ನ್ಯಾಯವಿವರಣವು ಸುತರಾಂ ವ್ಯರ್ಥವು. ಎಂದರೆ) ಯಾರು ಅಲ್ಪ ಜ್ಞಾನಿಗಳೋ, ಅವರು ಸೂಚಿತಗಳಾದ ನ್ಯಾಯಗಳನ್ನು ಉದ್ಧರಿಸುವುದರಲ್ಲಿ ಅಶಕ್ತರೆಂದು ಮಾತ್ರವಲ್ಲ, ಮತ್ತೆ ಆ ಭಾಷ್ಯ ಅನುವ್ಯಾಖ್ಯಾನಗಳಲ್ಲಿ ಹೇಳಲ್ಪಟ್ಟ ನ್ಯಾಯಗಳನ್ನುದ್ಧರಿಸುವುದರಲ್ಲಿ ಅಶಕ್ತರಾದವರು ಮನಸ್ಸಿನಲ್ಲಿ ಆ ಯುಕ್ತಿಗಳನ್ನು ತಿಳಿಯಲಾರರು. (ಅಂದರೆ ಸಂಕ್ಷೇಪ ವಿಸ್ತರ ರೂಪ ೨ ಗ್ರಂಥಗಳಿಂದ ಮನಸ್ಸನ್ನು ನ್ಯಾಯಸಂಬದ್ಧವನ್ನಾಗಿ ಮಾಡಲಾರರು-) ಹಾಗೆಯೇ ಮಹಾ ಜ್ಞಾನಿಗಳು ನ್ಯಾಯೋದ್ಧರಣದಲ್ಲಿ ಶಕ್ತರಾದಾಗ್ಯೂ ಸಂಕ್ಷೇಪದಲ್ಲಿ ಆತುರಪಟ್ಟವರು ಮನಸ್ಸನ್ನು ನ್ಯಾಯಸಂಬದ್ಧವನ್ನಾಗಿ ಸುಸ್ಥಿರವನ್ನಾಗಿ ಮಾಡಲಾರರು. ಆದಕಾರಣ ಸಂಕ್ಷೇಪ ವಿಸ್ತರ ರೂಪ ಎರಡು ಗ್ರಂಥಗಳನ್ನು ಮಾಡಿರುವರು. (೪) ಮುಖ್ಯವಾಗಿ ವಿದ್ಯೆಗಳಿಗೆ ಅಧಿಪತಿ

ಗಳಾದ ವೇದವ್ಯಾಸರಿಂದ ದೊಡ್ಡ ಸಾಗರಗಳಂತಿರುವ ಸಮಸ್ತ ವಿದ್ಯೆಗಳನ್ನು ಚೆನ್ನಾಗಿ ಮಥನ ಮಾಡಿದುದರಿಂದುಂಟಾದ ಸರ್ವೋತ್ಕೃಷ್ಟವಾದ, ಮೋಕ್ಷಕ್ಕೆ ಕಾರಣವಾಗಿರುವುದರಿಂದ ಅಮೃತತುಲ್ಯವಾದ ನ್ಯಾಯ ಪ್ರತಿಪಾದಕ ಸೂತ್ರಗಳನ್ನು ಸರ್ವರಿಂದ ನಮಸ್ಕರಿಸಲ್ಪಡತಕ್ಕ ದೇವತೆಯಾದಾಗ್ಯೂಯಾರು ತಾನೇತನ್ನಿಂದ ಸಂಗೃಹೀತವಾದ ನ್ಯಾಯಗಳ ಪ್ರತಿಪಾದನಾದಿಗಳನ್ನು ಮಾಡುತ್ತಾ ಸಂಪೂರ್ಣವಾಗಿ ತಿಳಿದಾನು? (೫) (ಹೀಗಾದರೆ ಮೀಮಾಂಸಾ ಶಾಸ್ತ್ರವು ನಿರಧಿಕಾರಿಕವೆನ್ನಕೂಡದು. ಏಕೆಂದರೆ) ಕ್ಷೀರ ಸಮುದ್ರದ ಮಥನದಿಂದುಂಟಾದ ಅಮೃತದಲ್ಲಿ ಬ್ರಹ್ಮಾದಿಗಳು ಅಧಿಕೃತರಾದಂತೆ ಅತಿ ದುರ್ಲಭವಾದ ಉತ್ಕೃಷ್ಟವಾದ ಅಮೃತತುಲ್ಯಗಳಾದ ಮಹಾನ್ಯಾಯಗಳಲ್ಲಿ ವೇದವ್ಯಾಸರ ಅನುಗ್ರಹದಿಂದ ಪೂರಿತರಾದ ಕೆಲವರು ಬ್ರಹ್ಮಾದಿಗಳು ಮಾತ್ರ ನಿಶ್ಚಯವಾಗಿ ಅಧಿಕೃತರಾಗುತ್ತಾರೆ. (೬) (ಬ್ರಹ್ಮಾದಿಗಳಿಗೇನೇ ಅಧಿಕಾರವೆಂದಾದರೆ ಆಚಾರ್ಯರು ಸಂಕ್ಷೇಪವಿಸ್ತರವಾಗಿ ಹೇಗೆ ಮಾಡಿರುವರು ಎಂದರೆ) ಭಗವಂತನ ಪ್ರಸಾದರೂಪ ಮುಖ್ಯಾಶ್ರಯ ಬಲದಿಂದ ಅಭಿವೃದ್ಧನಾದ, ಮುಖ್ಯವಾಯುವಿನ ಅವತಾರಭೂತನಾದ ನಾನಾದರೂ ನ್ಯಾಯಾಮೃತವೆಂಬ ಸಮುದ್ರದಲ್ಲಿ ಇಳಿದು ವಿಭಾಗ ಮಾಡಿ ಸಂಕ್ಷೇಪವಾಗಿ ಮಾಡಿದ ನ್ಯಾಯಪ್ಲವವನ್ನು ವಿಸ್ತರವಾಗಿ ವ್ಯಾಖ್ಯಾನ ರೂಪವಾದ ನ್ಯಾಯವಿವರಣವನ್ನೂ ಕೂಡ ಮಾಡಿರುವೆನು. (೭) (ಗ್ರಂಥಮಾಡಲಿಕ್ಕೆ ವಾಕ್ಯಾರ್ಥಜ್ಞಾನ ಕರಣಪಾಟವಾದಿಗಳು ಅವಶ್ಯಕವು. ಈಶ್ವರ ಪ್ರಸಾದವು ಏತಕ್ಕೆ ಎಂದರೆ) ಆ ಭಗವಂತನ ಅನುಗ್ರಹವಿಲ್ಲವಾದರೆ ಸಂಸಾರ ಸಮುದ್ರದಲ್ಲಿ ಮುಳುಗಿರುವ ಯಾವ ಚೇತನನಿಗೆ ಸಾಮರ್ಥ್ಯವು ಇರುವುದು. ನಿತ್ಯ ಆನಂದವೆಂಬ ಅಮೃತವನ್ನು ಸುರಿಸುವ ಆ ಶ್ರೀ ಹರಿಯ ಕಟಾಕ್ಷದಿಂದ ಅಭಿವೃದ್ಧನಾದವನಿಗಾದರೂ ಶ್ರೀ ಹರಿಯು ಮಾಡಿದ್ದನ್ನು ಅನುಕರಣ ಮಾಡುವುದರಲ್ಲಿ ಯಾವ ಶಕ್ತಿಯು ಇಲ್ಲದೆ ಹೋಗುವುದು? ಸರ್ವ ಶಕ್ತಿಯೂ ಬಂದೇ ಬರುವುದು. ಆದಕಾರಣ ಈ ವಿಷಯದಲ್ಲಿ ಏನು ಆಶ್ಚರ್ಯವಿದೆ? (೮) (ಗ್ರಂಥ ಮಾಡಲಿಕ್ಕೆ ಶಕ್ತಿ ಮಾತ್ರ ಭಗವದಧೀನವೆಂದಲ್ಲ, ಮತ್ತೆ ಸರ್ವವೂ ಭಗವದಧೀನವೆನ್ನುತ್ತಾರೆ) ಜ್ಞಾನ ಅಜ್ಞಾನ ಸುಖ ದುಃಖ ಅಶಕ್ತಿ ಶಕ್ತಿ ಉತ್ಪತ್ತಿ ಸ್ಥಿತಿ ನಾಶ ವಿಶೇಷ ನಿಯಮನಾದಿಗಳೆಲ್ಲವೂ ಚೇತನ ಅಚೇತನ ಎಲ್ಲಾ ಜಗತ್ತಿಗೂ ಯಾವ ಶ್ರೀಹರಿಯ ಇಚ್ಛೆಯಿಂದಲೇ (ನ ಋತೇತ್ವತ್ಕ್ರಿಯತೇ ಇತ್ಯಾದಿ ಶ್ರುತಿಗಳಿಂದ) ಆಗುತ್ತವೋ ಅಂತಹ ಪುರುಷೋತ್ತಮನಾದ ಶ್ರೀಹರಿಯು ತಾನು ಮಾಡಿದ ಗ್ರಂಥದಿಂದಲೇ ನನಗೆ ಪ್ರೀತನಾಗಲಿ. (೯) (ಶ್ರೀವಿಷ್ಣುವಿನ ಜ್ಞಾನದಂತೆ ತನ್ನ ಜ್ಞಾನವೂ ಕೂಡ ಅಧಿಕಾರಿಗಳಿಗೆ ಮೋಕ್ಷಕ್ಕೆ ಕಾರಣವಾಗಿರುವುದರಿಂದ ತನ್ನ ಸ್ವರೂಪವನ್ನು ತೋರಿಸುತ್ತಾ ತನ್ನ ಗ್ರಂಥ ಪ್ರತಿಪಾದ್ಯ ಪ್ರಮೇಯವನ್ನು ಹೇಳುತ್ತಾರೆ.)

ಮೂ॥(೧)ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥

ಅ॥ ಬಳಿತ್ಥೇತ್ಯಾದಿ ವೇದವಚನಗಳಲ್ಲಿ ಯಾವ ವಾಯುದೇವರ ಕ್ರೀಡಾದಿಗುಣವಿಶಿಷ್ಟಗಳಾದ ಮೂರು ರೂಪಗಳು ಹೇಳಲ್ಪಟ್ಟಿವೆಯೋ, ಅಂತಹ ವಾಯುದೇವರ ಯಾವ ಮೂರನೇದ್ದಾದ ಮಧ್ವಾಖ್ಯ ರೂಪವಿದೆಯೋ, ಅಂತಹ ರೂಪದಿಂದ ಭಗವದ್ವಿಷಯಕವಾಗಿ ಈ ಗ್ರಂಥವು ಮಾಡಲ್ಪಟ್ಟಿತು. (ಅಂದರೆ ಶ್ರೀಪರಮಾತ್ಮನನ್ನೇ ಪ್ರತಿಪಾದಿಸುವುದರಿಂದ ಅತನಲ್ಲಿ ಸಮರ್ಪಿಸಿದರು.) ಆ ವಾಯುದೇವರ ಮೂಲ ರೂಪವು ಚೆನ್ನಾಗಿ ಬಲಾತ್ಮಕವು, ಜ್ಞಾನ ಸ್ವರೂಪವು, ಜಗದ್ಧರಣ ಗಮನಾದಿ ಗುಣಗಳುಳ್ಳದ್ದು. ಸರ್ವ

ಪೂಜ್ಯವು. ಈ ಪ್ರಕಾರವಿರುವ ರೂಪವೇ ಮೂರು ಅವತಾರ ಮಾಡುವುದಕ್ಕಾಗಿಯೇ ಶ್ರೀಹರಿಯಿಂದ ಪ್ರೇರೇಪಿಸಲ್ಪಟ್ಟಿತು. ಅವುಗಳಲ್ಲಿ ವಾಯುದೇವರ ೧ನೇದಾದ್ದ ಹನುಮದವತಾರವು ರಾಮದೇವರ ಆಜ್ಞೆಯನ್ನು ಸೀತಾಸಮೀಪಕ್ಕೂ, ಸೀತಾದೇವಿಯ ಪ್ರಾರ್ಥನೆಯನ್ನು ರಾಮದೇವರ ಸಮೀಪಕ್ಕೂ ಹೊಂದಿಸಿ ಕೊಟ್ಟಿದ್ದು. ಅಥವಾ ಮೂಲರಾಮಾಯಣಾದಿ ರಾಮ ವಿಷಯಕ ಮಾತುಗಳನ್ನು ಶಿಷ್ಯರಿಗೂ ಭೋಧಿಸತಕ್ಕದು, ಭೀಮನಾಮಕ ಎರಡನೇ ಅವತಾರವು ಕೌರವರ ಸೈನ್ಯಗಳನ್ನು ವಿನಾಶಗೊಳಿಸಿದುದು. ಮೂರನೇ ಅವತಾರವು ಆನಂದರೂಪನಾದ ಶ್ರೀಹರಿಯನ್ನು ಸ್ತುತಿಸುವ ಶಾಸ್ತ್ರವನ್ನು ನಿರ್ಮಾಣಮಾಡಿದುದರಿಂದ ಮಧ್ವ ಎಂದ ಹೆಸರುಳ್ಳದ್ದು. ||

ಅವ || ದೇವತಾ ನಮಸ್ಕಾರದಿಂದಲೇ ಗ್ರಂಥವನ್ನು ಸಮಾಪಿಸ ಬೇಕಲ್ಲದೆ ತನ್ನ ಸ್ತೋತ್ರದಿಂದ ಅಲ್ಲ ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.

ಮೂ|| ನಮೋಽಬ್ಜಭವ ಭೂರ್ಯಕ್ಷಪುರಸ್ಸರ ಸುರಾಶ್ರಯ ।
ನಾರಾಯಣ ಶರಣಂ ಮಹ್ಯಂ ಮಾಪತೇ ಶ್ರೇಯಸಾಂ ಪ್ರಿಯ ||

ಅ || ಚತುರ್ಮುಖಬ್ರಹ್ಮ, ರುದ್ರ, ದೇವೇಂದ್ರ ಮೊದಲಾದ ದೇವತೆಗಳಿಗೆ ಆಶ್ರಯನಾದ ಶ್ರೀ ನಾರಾಯಣನೇ ನಮಸ್ಕಾರವು. ಅತಿಪ್ರಿಯಗಳಾದ ವಸ್ತುಗಳಿಗಿಂತಲೂ ಪ್ರಿಯನಾದ ಲಕ್ಷ್ಮೀಪತಿಯಾದ ಶ್ರೀ ಹರಿಯೇ ನನಗೆ ರಕ್ಷಕನಾಗು

ಇತಿ ಶ್ರೀ ಮದ್ಬ್ರಹ್ಮಸೂತ್ರಾನುವ್ಯಾಖ್ಯಾ ನ್ಯಾಯವಿವರಣೇ
ಚತುರ್ಥಾಧ್ಯಾಯಸ್ಯ ಚತುರ್ಥಃಪಾದಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ಬ್ರಹ್ಮಸೂತ್ರಾನುವ್ಯಾಖ್ಯಾ ನ್ಯಾಯವಿವರಣದಲ್ಲಿ ೪ನೇ ಅಧ್ಯಾಯದಲ್ಲಿ ೪ನೇ ಪಾದವು ಸಮಾಪ್ತವಾಯಿತು.

ಸಂಪೂರ್ಣವಿಜ್ಞಾನಸುಖಾದಿಯುಕ್ತೋ
ದೋಷೋಜ್ಝಿತಃ ಸರ್ವಸಮಾನಮೇಯಃ।
ಬ್ರಹ್ಮಾದಿಸಜ್ಜೀವಗತಿಃ ಪರೇಶೋ
ನಾರಾಯಣಃ ಪ್ರೀತಿಯುತೋ ಮಯಿ ಸ್ಯಾತ್॥
ತತ್ವಪ್ರಕಾಶಿಕಾಸಂಸ್ಥೋ ಮಯಾಽನುಗ್ರಹತೋ ಹರೇಃ।
ಸನ್ನ್ಯಾಯವಿವೃತೇರ್ಭಾವೋ ಬಾಲಬೋಧಾರ್ಥಮುದ್ಧೃತಃ ॥
ತಂತ್ರಿ ನಾರಾಯಣಾಖ್ಯೇನ ಭಾಷಾಯಾಂ ಸಾಧು ತುಷ್ಟಯೇ ।
ರಚಿತಾ ಕೃಷ್ಣಪಾದಾಬ್ಜೇ ಸ್ವರ್ಪಿತಾ ಜಡುತಾದ್ಯಪಿ ॥
ವ್ಯಾಖ್ಯಯಾ ಚಾಸ್ಯ ಗ್ರಂಥಸ್ಯ ಪೀತೋ ಮಧ್ವಮುನಿರ್ಮಮ ।
ನಿವಾರಯನ್ನಪ್ರಕಾಶಂ ಸುಪ್ರಕಾಶಂ ದದಾತು ಮೇ॥
ಕರೋತು ಮಮ ಕಲ್ಯಾಣಂ ಹರಿರ್ಜಯಮುಖಾಭಿಧಃ ॥
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ

ಶ್ರೀರಸ್ತು
ಶ್ರೀ ಮನ್ನ್ಯಾಯ ವಿವರಣಂ ಸಮಾಪ್ತಂ ||

# ಶ್ರೀ ಮಧ್ವ ಮುನಿ ಸೇವಾ ಸಂಘ, (ರಿ) ಉಡುಪಿ, ದ.ಕ.

## ಇವರಲ್ಲಿ ಈಗ ಸಿಗುವ ಪುಸ್ತಕಗಳು

ಈ ಎಲ್ಲಾ ಗ್ರಂಥಗಳನ್ನು ಟೀಕಾ, ಯಾ, ವಿವೃತಿ ಸಹಿತವಾಗಿ ಕನ್ನಡಿಸಿದವರು

## ಅಗ್ರಹಾರ ನಾರಾಯಣ ತಂತ್ರಿಗಳು

| | | | |
|---|---|---|---|
| 1 | ಬೃಹದಾರಣ್ಯಕೋಪನಿಷತ್ | (536 ಪುಟ) | 8 00 |
| 2 | ಛಾಂದೋಗ್ಯೋಪನಿಷತ್ | (526 ಪುಟ) | 9 00 |
| 3 | ಸಭಾಷ್ಯಸತಾತ್ಪರ್ಯ ಶ್ರೀಮದ್ಭಗವದ್ಗೀತಾ | (936 ಪುಟ) | 15 00 |
| 4 | ಶ್ರೀಮದ್ಭಾಗವತ ತಾತ್ಪರ್ಯನಿರ್ಣಯ | (1380 ಪುಟ) | 25 00 |
| 5 | ಯಮಕಭಾರತ ಮತ್ತು ತಂತ್ರಸಾರ | (120 ಪುಟ) | 3 50 |
| 6 | ಶ್ರೀಮನ್ನ್ಯಾಯವಿವರಣಂ | (184 ಪುಟ) | 5 00 |

## ಶ್ರೀಮನ್ಮಧ್ವಾಚಾರ್ಯರ 37 ಗ್ರಂಥಗಳಲ್ಲಿ
## ಮುದ್ರಣವಾಗುತ್ತಿರುವ ಕೊನೆಯ ಗ್ರಂಥ

ಅಂದಾಜು ಪುಟಗಳು: 400 —: ಋಗ್ಭಾಷ್ಯ :— ಅಂದಾಜು ಬೆಲೆ: 10—00

---

## ದ್ವಿತೀಯ ಮುದ್ರಣವಾಗಲಿರುವ ಗ್ರಂಥಗಳು-

**ಸಂಚಿಕೆ I** ಸಭಾಷ್ಯ, ಈಶ, ಕಾಠಕ. ತೈತ್ತಿರೀಯ, ತಲವಕಾರ, ಷಟ್ಪ್ರಶ್ನ, ಅಥರ್ವಣ, ಮಂಡೂಕ, ಐತರೇಯಾದಿ ಅಷ್ಟೋಪನಿಷತ್ತುಗಳು ಮತ್ತು ಪ್ರಮಾಣ ಲಕ್ಷಣ, ಕಥಾಲಕ್ಷಣ, ಉಪಾಧಿಖಂಡನ, ಮಾಯಾವಾದಖಂಡನ, ಪ್ರಪಂಚ ಮಿಥ್ಯಾತ್ವಾನುಮಾನಖಂಡನ, ತತ್ವಸಂಖ್ಯಾನ, ತತ್ವವಿವೇಕವೆಂಬ ಸಪ್ತ ಪ್ರಕರಣಗಳು. ಇದರಲ್ಲಿ ಶ್ರೀ C. R. ಕೃಷ್ಣರಾವ್ ಅವರು ಬರೆದ 'ಶ್ರೀಮದಾಚಾರ್ಯರ ಜೀವನಚರಿತ್ರೆಮತ್ತು ಮಧ್ವಸಿದ್ಧಾಂತ ತತ್ವ'ದ ವಿಸ್ತಾರವಾದ ಇಂಗ್ಲಿಷ್ ಪ್ರಸ್ತಾವನೆಯು, ಕನ್ನಡ ಉಪೋದ್ಘಾತ ಮತ್ತು ಮುನ್ನುಡಿಗಳ ಸಮೇತ. ಪುಟಗಳು: 1150.

**ಸಂಚಿಕೆ II** ತತ್ವೋದ್ಯೋತ, ವಿಷ್ಣು ತತ್ವನಿರ್ಣಯ, ಕರ್ಮನಿರ್ಣಯವೆಂಬ 3 ಪ್ರಕರಣಗಳು ಮತ್ತು ಸದಾಚಾರಸ್ಮೃತಿ, ನಖಸ್ತುತಿ, ದ್ವಾದಶಸ್ತೋತ್ರ, ಜಯಂತೀನಿರ್ಣಯ, ಶ್ರೀಕೃಷ್ಣಸ್ತುತಿ. ಕೃಷ್ಣಾಮೃತಮಹಾರ್ಣವ, ಅಣುಭಾಷ್ಯವೆಂಬ ಇತರ 7 ಗ್ರಂಥಗಳು. ಪುಟಗಳು 725.

**ಸಂಚಿಕೆ III** ಶ್ರೀಮದ್ ಬ್ರಹ್ಮಸೂತ್ರಾನುವ್ಯಾಖ್ಯಾನ. ಪುಟಗಳು: 1600

**ಸಂಚಿಕೆ IV** ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ. ಪುಟಗಳು: 1500.

**ಸಂಚಿಕೆ V** ಶ್ರೀಬ್ರಹ್ಮಸೂತ್ರಭಾಷ್ಯ. ಕನ್ನಡ ಉಪೋದ್ಘಾತ ಮತ್ತು ಇಂಗ್ಲಿಷ್ ಮುನ್ನುಡಿಗಳ ಸಮೇತ. ಪುಟಗಳು: 968.

# ಶ್ರೀ ಮಧ್ವಮುನಿ ಸೇವಾ ಸಂಘದ ಪೋಷಕರು

1 ಶ್ರೀ ವಿಷ್ಣುಪದಂಗತ ಅದಮಾರುಮಠದ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು.
2 ಶ್ರೀ ವಿಷ್ಣುಪದಂಗತ ಪುತ್ತಿಗೆಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
3 ಶ್ರೀ ವಿಷ್ಣುಪದಂಗತ ಕೃಷ್ಣಾಪುರಮಠದ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರು.
4 ಶ್ರೀ ವಿಷ್ಣುಪದಂಗತ ಸೋದೆಮಠದ ವಿಶ್ವೇಂದ್ರತೀರ್ಥ ಶ್ರೀಪಾದಂಗಳವರು.
5 ಶ್ರೀ ಸೋದೆಮಠದ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು.
6 ಶ್ರೀ ವಿಷ್ಣುಪದಂಗತ ಕಾಣಿಯೂರುಮಠದ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರು.
7 ಶ್ರೀ ವಿಷ್ಣುಪದಂಗತ ಫಲಿಮಾರುಮಠದ ರಘುಮಾನ್ಯತೀರ್ಥ ಶ್ರೀಪಾದಂಗಳವರು.
8 ಶ್ರೀ ವಿಷ್ಣುಪದಂಗತ ಶೀರೂರುಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು.
9 ಶ್ರೀ ವಿಷ್ಣುಪದಂಗತ ಪೇಜಾವರಮಠದ ವಿಶ್ವಮಾನ್ಯತೀರ್ಥ ಶ್ರೀಪಾದಂಗಳವರು.
10 ಶ್ರೀ ವಿಷ್ಣುಪದಂಗತ ಉತ್ತರಾದಿಮಠದ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.
11 ಶ್ರೀ ಸೋಸಲೆ ವ್ಯಾಸರಾಯ ಮಠದ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು.
12 ಶ್ರೀ ಸಂಪುಟನರಸಿಂಹಸ್ವಾಮಿಮಠದ ವಿದ್ಯಾಸಿಂಧುತೀರ್ಥ ಶ್ರೀಪಾದಂಗಳವರು.
13 ಶ್ರೀ ವಿಷ್ಣುಪದಂಗತ ಕಾಶೀಮಠದ ಸುಕೃತೀಂದ್ರತೀರ್ಥ ಶ್ರೀಪಾದಂಗಳವರು.
14 ಶ್ರೀ ಕಾಶೀಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
15 ಶ್ರೀ ಗೋಕರ್ಣ ಪರ್ತಗಾಳಿಮಠದ ದ್ವಾರಕಾನಾಥತೀರ್ಥ ಶ್ರೀಪಾದಂಗಳವರು.
16 ಕೀರ್ತಿಶೇಷ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು ಬೆಂಗಳೂರು.
17 ಕೀರ್ತಿಶೇಷ ಡಾಕ್ಟರ್ ಉಡುಪಿ ರಾಮರಾಯರು. ಮದ್ರಾಸ್.
18 ಶ್ರೀಯುತ ಮಾಹೇಲ್ ಕೃಷ್ಣನಾಯಕ್ ಮತ್ತು ಸನ್ಸ್, ಮಂಗಳೂರು.
19 ಕೀರ್ತಿಶೇಷ ಶ್ರೀ ತಾಳೂರು ಶ್ಯಾಮರಾಯರು. ಬಳ್ಳಾರಿ.
20 ಶ್ರೀಯುತ ಡಾಕ್ಟರ್ ಇಡ್ಯ ವೆಂಕಟರಾಯರು, ಉಳ್ಳಾಳ.
21 ಕೀರ್ತಿಶೇಷ ಶ್ರೀ ಹರಿವಾಣಂ ಹನುಮಂತಾಚಾರ್ಯರು. ಬಳ್ಳಾರಿ.
22 ಕೀರ್ತಿಶೇಷ ಶ್ರೀ ಕಲ್ಮಂಜೆ ವ್ಯಾಸಾಚಾರ್ಯರು. ಉಡುಪಿ.
23 ಶ್ರೀಯುತ ಡಾಕ್ಟರ್ ಉಡುಪಿ ಲಕ್ಷ್ಮೀನಾರಾಯಣರಾಯರು. ಮದ್ರಾಸ್.
24 ಶ್ರೀಯುತ ಡಾಕ್ಟರ್ ಜಮ್ಮಿ ವಿ. ಬದರಿನಾರಾಯಣ. ಮದ್ರಾಸ್.
25 ಶ್ರೀಯುತ ಕೆ. ಎನ್. ರಂಗರಾಯರು, ಕಲ್ಕತ್ತಾ.
26 ಶ್ರೀಯುತ ಉಡುಪಿ ರಾಘವೇಂದ್ರಾಚಾರ್ಯರು. ಡಿಲ್ಲಿ.
27 ಶ್ರೀಯುತ ಎ. ವಿ. ಕೃಷ್ಣಮೂರ್ತಿರಾಯರು ಬೆಂಗಳೂರು.
28 ಶ್ರೀಯುತ ಗುಪ್ತ ಆಪ್ತರು.
29 ಶ್ರೀಯುತ ಕೆ. ಸೀತಾರಾಮರಾಯರು. ಮದ್ರಾಸ್.
30 ಶ್ರೀಯುತ ಡಿ. ಕೆ. ರಾಮರಾಯರು ನಿವೃತ್ತ ಮೈಸೂರು ಹೈಕೋರ್ಟು ಜಡ್ಜರು, ಮೈಸೂರು.
31 ಕೀರ್ತಿಶೇಷ ರಾಜಸೇವಾಪ್ರಸಕ್ತ ವೈ. ಕೆ. ರಾಮಚಂದ್ರರಾವ್, ಮೈಸೂರು.
32 ಶ್ರೀಯುತ ಕಲ್ಸಂಕ ವೆಂಕಟ್ರಾಯ ಪೈ ಮತ್ತು ಸನ್ಸ್, ರಥಬೀದಿ, ಉಡುಪಿ.